# ಒಡಿಗ ಬುಡಕಟ್ಟು ಸಮುದಾಯ : ಒಂದು ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾ ಪ್ರಬಂಧ)


ಸಂಶೋಧಕ :

ಕೃಷ್ಣಮೂರ್ತಿ ಎನ್.

ಮಾರ್ಗದರ್ಶಕರು :

ಡಾ ಕೇಶವನ್ ಪ್ರಸಾದ್ ಕೆ ಮರಟ್ಟಿ

ಪ್ರವಾಚಕರು :

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬



22






ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೩

22

# ಒಡಿಗ ಬುಡಕಟ್ಟು ಸಮುದಾಯ : ಒಂದು ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾ ಪ್ರಬಂಧ)

ಸಂಶೋಧಕ
ಕೃಷ್ಣಮೂರ್ತಿ ಎನ್.

ಮಾರ್ಗದರ್ಶಕರು
ಡಾ. ಕೇಶವನ್ ಪ್ರಸಾದ್ ಕೆ. ಮರಟ್ಟಿ
ಪ್ರವಾಚಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

"[illegible]" ಗ್ರಂಥಾಲಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ



ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೩



# ಪ್ರಮಾಣ ಪತ್ರ

**"ಒಡಿಗ ಬುಡಕಟ್ಟು ಸಮುದಾಯ : ಒಂದು ಅಧ್ಯಯನ"** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಲು ಡಾ. ಕೇಶವನ್ ಪ್ರಸಾದ್ ಕೆ. ಮರಟ್ಟಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಈ ಮಹಾಪ್ರಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : 24:3:03

(ಎನ್. ಕೃಷ್ಣಮೂರ್ತಿ)
ಸಂಶೋಧಕ
ಬುಡಕಟ್ಟು ಅಧ್ಯಯನ ವಿಭಾಗ

# ದೃಢೀಕರಣ ಪತ್ರ

ಶ್ರೀ ಎನ್. ಕೃಷ್ಣಮೂರ್ತಿ ಇವರು "ಒಡಿಗ ಬುಡಕಟ್ಟು ಸಮುದಾಯ : ಒಂದು ಅಧ್ಯಯನ" ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : 24.03.03.

(ಡಾ. ಕೇಶವನ್ ಪ್ರಸಾದ್ ಕೆ. ಮರಟ್ಟಿ)
ಪ್ರವಾಚಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

# ನೆನಪುಗಳು

ಕರ್ನಾಟಕದಲ್ಲಿ ಅನೇಕ ಬುಡಕಟ್ಟು ಸಮುದಾಯಗಳ ಅಧ್ಯಯನ ನಡೆದಿದೆ. ಇನ್ನೂ ಕೆಲವು ಸಮುದಾಯಗಳ ಅಧ್ಯಯನ ಆಗಿಲ್ಲ. 'ಒಡಿಗ' ಸಮುದಾಯವೂ ಅಂತಹ ಅಲಕ್ಷಿತ ಸಮುದಾಯಗಳಲ್ಲಿ ಒಂದು. ಮೂಲತಃ ಬೇಡನಾಯಕರ ಒಂದು ಗುಂಪೆಂದು ಗುರುತಿಸಲಾಗುವ ಇತರ ಸಾಂಸ್ಕೃತಿಕ ಚರಿತ್ರೆಯನ್ನು ಅವರೊಂದಿಗಿದ್ದು, ಅವರ ಒಟ್ಟು ಬದುಕನ್ನು ಈ ಪ್ರಬಂಧದ ಮೂಲಕ ಅಧ್ಯಯನಕ್ಕೊಳಪಡಿಸಲು ನನಗೆ ಹರ್ಷವೆನಿಸುತ್ತದೆ. ಇಂತಹ ನನ್ನ ಪಿಎಚ್.ಡಿ. ಅಧ್ಯಯನಕ್ಕೆ ಅವಕಾಶ ಕಲ್ಪಿಸಿಕೊಟ್ಟ ಹಿಂದಿನ ಕುಲಪತಿಗಳಾದ ಎಂ.ಎಂ. ಕಲಬುರ್ಗಿ ಮತ್ತು ಕುಲಸಚಿವರಾಗಿದ್ದ ಮಲ್ಲೇಪುರಂ, ಜಿ. ವೆಂಕಟೇಶ್ ಹಾಗೂ ಇಂದಿನ ಕುಲಪತಿಗಳಾದ ಎಚ್.ಜೆ. ಲಕ್ಕಪ್ಪಗೌಡರು. ಕುಲಸಚಿವರಾದ ಕೆ.ವಿ. ನಾರಾಯಣರ ಮತ್ತು ಅಧ್ಯಯನಾಂಗದ ಹಿಂದಿನ ನಿರ್ದೇಶಕರಾಗಿದ್ದ ಬಾಲಸುಬ್ರಮಣ್ಯ, ಪ್ರೊ. ಹಿ.ಚಿ. ಬೋರಲಿಂಗಯ್ಯ, ಇಂದಿನ ನಿರ್ದೇಶಕರಾದ ಕರೀಗೌಡ ಬೀಚನಹಳ್ಳಿ ಅವರಿಗೆ.

ನನ್ನಲ್ಲಿ ಸಂಶೋಧನಾ ಪ್ರವೃತ್ತಿ ಬೆಳೆಸಿ ಅಧ್ಯಯನದಲ್ಲಿ ಹಾಗೂ ವೈಯಕ್ತಿಕ ಬದುಕಿನ ಪ್ರತಿ ಹಂತದಲ್ಲಿಯೂ ಸೂಕ್ತ ಸಲಹೆಗಳನ್ನು ನೀಡಿ ಪ್ರೋತ್ಸಾಹಿಸಿ ಮಾರ್ಗದರ್ಶನ ಮಾಡಿದ ಗುರುಗಳಾದ ಡಾ. ಕೇಶವನ್ ಪ್ರಸಾದ್, ಕೆ. ಮರಟ್ಟಿ ಅವರಿಗೆ ನಾನು ಚಿರಋಣಿ.

ನನ್ನ ಸಂಶೋಧನೆಗೆ ವಿಷಯವನ್ನು ಸೂಚಿಸಿದ ರಂಗಪ್ಪ ನಿವೃತ್ತ ತಹಸಿಲ್ದಾರ್, ಹೆಚ್.ಡಿ. ಕೋಟೆ ಹಾಗೂ ಕ್ಷೇತ್ರಕಾರ್ಯಕ್ಕೆ ಸಹಕರಿಸಿದ ತಾಲ್ಲೂಕು ಕಛೇರಿಯ ಸಿಬ್ಬಂದಿಗಳಾದ ರಾಮಯ್ಯ, ಚಲುವದಾಸಯ್ಯ ಮತ್ತು ಮೈಸೂರು ವಿ.ವಿ.ಯ ಗ್ರಂಥಾಲಯದ ಸಿಬ್ಬಂದಿವರ್ಗ, ಬೆಂಗಳೂರು. ವಿ.ವಿ.ಯ ಗ್ರಂಥಾಲಯದ ಸಿಬ್ಬಂದಿವರ್ಗ, ಮಿಥಿಕ್ ಸೊಸೈಟಿ ಬೆಂಗಳೂರು, ಟಿ.ಆರ್.ಸಿ ಉದಕ ಮಂಡಲದ ನಿರ್ದೇಶಕರು ಅವರಿಗೆ.

ಮುದ್ದಿನ ಕಣ್ಮಣಿಗಳಾದ ಮೇಘ, ಮಾನಸ, ಹರ್ಷಿತರ, ನೆನಪು.

ನನ್ನ ವಿದ್ಯಾಭ್ಯಾಸಕ್ಕಾಗಿ ಹಗಲಿರುಳು ಶ್ರಮಿಸಿ, ಛಲದಿಂದ ಸಾಗುವಂತೆ ಪ್ರೇರಣೆ ನೀಡಿದ ತಂದೆ, ತಾಯಿಗಳಾದ ನಾರಾಯಣಪ್ಪ ಆರ್. ಶ್ರೀಮತಿ ಓಬಳಮ್ಮ ನಾರಾಯಣಪ್ಪ ಅವರಿಗೆ.

ಕ್ಷೇತ್ರಕಾರ್ಯದಲ್ಲಿ ಸಹಕರಿಸಿ ಪ್ರೀತಿಯಿಂದ ಕಂಡ ಒಡಿಗ ಬುಡಕಟ್ಟು ಸಮುದಾಯದ ಎಲ್ಲಾ ವಕ್ತೃಗಳ ನೆನಪುಗಳು.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸದಾ ನನ್ನೊಡನೆ ಇದ್ದು ಪ್ರೀತಿಯಿಂದ ಕಂಡ ರಾಮು ಹಾಗೂ ವಿಷಯದೊಂದಿಗೆ ಚರ್ಚೆ ಮಾಡಿದ ಗೆಳೆಯ ಜಾಜಿದೇವೂ ಅವರಿಗೆ.

ನನಗೆ ಆರಂಭದಿಂದಲೂ ವಿದ್ಯೆ ಬೋಧಿಸಿದ ಗುರುವೃಂದಕ್ಕೆ ನನ್ನ ನೆನಪುಗಳು.

ಸಂಶೋಧನಾ ಕಾರ್ಯದುದ್ದಕ್ಕೂ ಪ್ರೋತ್ಸಾಹ ನೀಡಿದ ನನ್ನ ವಿಭಾಗದ ಡಾ. ಹಿ.ಚಿ.ಬೋರಲಿಂಗಯ್ಯ, ಡಾ. ಮೈತ್ರಿಕಾಮಣ್ಣ, ಗಂಗಾಧರ ದೈವಜ್ಞ, ಚೆಲುವರಾಜು, ಪ್ರಭಾಕರ ಅವರಿಗೆ.

ಅಧ್ಯಯನದ ಅವಧಿಯಲ್ಲಿ ಪೂರಕ ಸಲಹೆಗಳನ್ನು ನೀಡಿದ ಗುರುಗಳಾದ ಪ್ರೊ. ಜಿ. ವೆಂಕಟ ಸುಬ್ಬಯ್ಯ, ಡಿ.ವಿ. ಪರಮಶಿವಮೂರ್ತಿ, ಸಿದ್ದಗಂಗಮ್ಮ, ಚಿನ್ನಸ್ವಾಮಿ ಸೋಸಲೆ, ಕೆ.ಎಲ್. ರಾಜಶೇಖರ್, ಮಾಧವ ಪೆರಾಜೆ, ಲಕ್ಷ್ಮಣ ತೆಲಗಾವಿ, ಮಹಾದೇವ್, ಜಗದೀಶ್ ಹಾಗೂ ಲೈಬ್ರರಿ ಸಿಬ್ಬಂದಿವರ್ಗ, ನನ್ನ ವಿಶ್ವವಿದ್ಯಾಲಯದ ಎಲ್ಲರಿಗೂ ನಾನು ಅಭಾರಿ.

ದೊಡ್ಡಪ್ಪನವರಾದ ನಾರಾಯಣಪ್ಪ ಎ. ಚಿಕ್ಕಪ್ಪ ರಾಮಯ್ಯ ಹಾಗೂ ಮಾವಂದಿರಾದ ಓಬಳಯ್ಯ, ನರಸಿಂಗಪ್ಪ ಅವರಿಗೆ.

ಅಧ್ಯಯನಕ್ಕೆ ಪ್ರೋತ್ಸಾಹ ನೀಡಿದ ಪ್ರೀತಿಯ ಅಣ್ಣಂದಿರಾದ ಟಿ.ಎನ್. ನಾಗರಾಜು, ಟಿ.ಎನ್.ರಾಮಯ್ಯ ಟಿ.ಎನ್. ಚಂದ್ರಶೇಖರ್. ಟಿ.ಎನ್. ಪ್ರಕಾಶ್, ಪಿ. ಪ್ರಕಾಶ್, ಟಿ.ಎನ್. ಮಂಜುನಾಥ ಅತ್ತಿಗೆಯರಾದ ಶ್ರೀಮತಿ ಭಾರತಿ, ಕಮಲ, ಕಮಲ, ವಿಜಯ, ಜಯಲಕ್ಷ್ಮಿ ಅವರಿಗೆ.

ನನ್ನ ಪುಟಾಣಿ ಬಳಗ, ನೀತಾ, ಮುರಳಿ, ಮನೋಹರ, ಮನೋಜ್, ಮಧು, ಕಾಂಚನ, ಪೂಜಾ, ಅರುಣ, ತೇಜು, ಭೂಮಿಕ, ವಜ್ರೇಶ್, ಮಹೇಶ್, ರಾಕೇಶ್, ಮಾನಸ, ಮದನ್ ಅವರಿಗೆ.

ಪ್ರೀತಿ ಮಮತೆಯನ್ನು ನೀಡಿದ ಅಕ್ಕಂದಿರಾದ, ಶ್ರೀಮಣಿ, ರೇಣುಕ, ಪ್ರಮೀಳಾ, ಗಂಗಹನುಮಕ್ಕ. ಭಾವಂದಿರಾದ ಅರಸಪ್ಪ, ಜಗನ್ನಾಥ್, ರಾಜಣ್ಣ, ಗಂಗಣ್ಣ ಹಾಗೂ ತಂಗಿಯರಾದ ಉಮಾ, ಬೈಲಮ್ಮ ಅವರಿಗೆ.

ನನ್ನ ಅಧ್ಯಯನದ ಸಂದರ್ಭದಲ್ಲಿ ಆರೋಗ್ಯ, ಪ್ರಯಾಣ, ಅಧ್ಯಯನದ ಬಗ್ಗೆ ಅಪಾರ ಕಾಳಜಿವಹಿಸಿ ನನ್ನನ್ನೇ ಮರೆತ 'ಚಿನ್ನಿ'ಗೆ ಮರೆಯಲಾಗದ ನೆನಪು.

ಅಧ್ಯಯನದ ಸಮಯದಲ್ಲಿ ಪ್ರೀತಿ ತೋರಿದ ಶಾಂತ ಕೆ. ಪ್ರಸಾದ್ ಪುಟಾಣಿಗಳಾದ ಪ್ರಾಮಾಣಿಕ, ಆಕರ್ಷಕ, ಪ್ರಭಾ ಅವರಿಗೆ

ಪ್ರೀತಿ ತೋರಿದ ವಾಸುದೇವನಾಯಕ್, ತುಳಸಿನಾಯಕ್, ಟಿ.ಸಿ. ಮಂಜುನಾಥ, ಕೃಷ್ಣಮೂರ್ತಿ, ಜಯಣ್ಣ, ಜಯಪ್ರಕಾಶ್, ಯಡೆಯೂರಪ್ಪ, ಲಕ್ಷ್ಮಣ್ ಸಿಂಗ್, ರಾಜಣ್ಣ, ರಂಗಸ್ವಾಮಿ, ಮಡಿಯಪ್ಪ, ಗಂಗಪ್ಪ, ದಿ|| ಗೋಪಿನಾಥ್, ನಂಜುಂಡಪ್ಪ, ಶ್ರೀಮತಿ ಉಷಾ ಬಸವರಾಜ್ ಅವರಿಗೆ.

ನನ್ನ ಹಿರಿಯ ಅಣ್ಣಂದಿರಾದ ನರಸಿಂಹಮೂರ್ತಿ, ವೇಣುಗೋಪಾಲ್ ಟಿ.ಎನ್. ಕೃಷ್ಣ ಮೂರ್ತಿ, ಗಂಗಾಧರ್, ವಿಲ್ಸನ್. ಎನ್. ಸೋಮಶೇಖರ, ಡಾ. ವಿ.ಸಿ. ಮಾರುತಿ, ಡಾ.ಎಂ. ನಾಗರಾಜು ಅವರಿಗೆ.

ಆತ್ಮೀಯ ಸ್ನೇಹಿತರಾದ ಡಿ.ಆರ್. ಶಶಿಧರ, ಆರ್. ಸತೀಶ್‌ಕುಮಾರ್, ದಿ|| ಸೋಮಶೇಖರ್, ಶಂಕರನ್, ಗಂಗಾಧರ, ರಾಜಣ್ಣ, ದಿಲೀಪ್, ಧನಂಜಯ, ರಂಗನಾಥ, ಶ್ರೀಕಾಂತ, ರಾಜು, ದೀಪು, ಮುಕುಂದ, ಪಮ್ಮಿ, ರವಿ, ಶ್ರೀನಿವಾಸ, ಭರತೇಶ್, ಕೆ. ಮಹೇಶ್, ಬದ್ರಿ, ಸಣ್ಣ ಪಾಪಯ್ಯ, ಮಲ್ಲಿಕಾರ್ಜುನ ಕಿಚಡಿ, ಚಂದ್ರಣ್ಣ, ಅಕ್ಕಿಸುಜಾತ, ಕವಿತಾರಾಣಿ, ಭಾರತಿ ಅವರಿಗೆ.

ಈ ಮಹಾಪ್ರಬಂಧಕ್ಕೆ ಅಂದವಾಗಿ ಅಕ್ಷರ ಜೋಡಿಸಿದ ಯಾಜಿ ಗ್ರಾಫಿಕ್ಸ್‌ನ ಶ್ರೀಮತಿ ಸವಿತಾ ಯಾಜಿ ಹಾಗೂ ಗಣೇಶ್ ಯಾಜಿ. ಕೆ. ಗೀತಾ ಅವರಿಗೆ.

ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಅಧ್ಯಯನಕ್ಕೆ ಸಹಕರಿಸಿದ ಎಲ್ಲರಿಗೂ ನನ್ನ ಸವಿ ನೆನಪುಗಳು.

ದಿನಾಂಕ

ಸಂಶೋಧಕ

ಕೃಷ್ಣಮೂರ್ತಿ ಎನ್.

# ಹೆಗ್ಗಡದೇವನ ಕೋಟೆ ತಾಲ್ಲೂಕು




೧ ಗುಂಡತ್ತೂರು (ಜಕ್ಕಳ್ಳಿ)
೨ ಕಾರಾಪುರ
೩ ಉದ್ಬೂರು
೪ ಮಚ್ಚೂರು
೫ ಗೂಳೂರು
೬ ನಿಟ್ಟೆಲ್ಲುಂಡಿ
೭ ಹೊಸೂರು
೮ ಆನೆ ಮೊಳ
೯ ಚಿಕ್ಕಭೈರವನ ಕುಪ್ಪೆ
೧೦ ದೊಡ್ಡಭೈರವನ ಕುಪ್ಪೆ
೧೧ ತಿಮ್ಮನ ಹೊಸಹಳ್ಳಿ
೧೨ ವಡಕನಮಾಳ
೧೩ ಕಡಗಟ್ಟೆ
೧೪ ಬಾವಲಿ
೧೫ ಗುಂಡ್ರೆ

## ಮಾನಂದವಾಡಿ ತಾಲ್ಲೂಕು




೧ ಸಾಣಗಾಲ

೨ ಕೋಟೇರು

೩ ತಿರುನಳ್ಳಿ

೪ ಆದಂಡ

## ಸುಲ್ತಾನ್ ಬತ್ತೇರಿ ತಾಲ್ಲೂಕು




೧ ಕಬ್ಬಿನ ಗೆರೆ

೨ ಕಬ್ಬಿನ ಗದ್ದೆ

೩. ಪುಲಪಳ್ಳಿ

# ಪರಿವಿಡಿ

## ಅಧ್ಯಾಯ - ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ

**ಪ್ರವೇಶ**

೧ : ೧ ಉದ್ದೇಶ

೧ : ೨ ವ್ಯಾಪ್ತಿ

೧ : ೩ ವಿಧಾನ

೧ : ೪ ಮಿತಿಗಳು

೧ : ೫ ಕರ್ನಾಟಕದ ಬುಡಕಟ್ಟು ಅಧ್ಯಯನಗಳ ಸಂಕ್ಷಿಪ್ತ ವಿಷಯಾವಲೋಕನ

## ಪ್ರವೇಶ

ಒಂದು ದೇಶದ ಮೂಲ ನಿವಾಸಿಗಳೇ ಆದಿವಾಸಿಗಳು. ಸಾಮಾನ್ಯವಾಗಿ ಕಾಡು ಹಾಗೂ ಬೆಟ್ಟ-ಗುಡ್ಡ ಪ್ರದೇಶಗಳಲ್ಲಿ ವಾಸಿಸುತ್ತಾರೆ. ಇವರು ಅಲೆಮಾರಿಗಳಾಗಿದ್ದು ಒಂದೇ ಕಡೆ ಖಾಯಂ ಆಗಿ ವಾಸಿಸುವುದಿಲ್ಲ. ಕಾಡಿನಲ್ಲಿ ದೊರೆಯುವ ಪ್ರಕೃತಿದತ್ತ ಗಡ್ಡೆ, ಗೆಣಸು, ನಾರು-ಬೇರು, ಜೇನು ಸಂಗ್ರಹಿಸಿ ಆಹಾರಕ್ಕಾಗಿ ಉಪಯೋಗಿಸುತ್ತಿದ್ದರು. ಅಲ್ಲದೇ ಕಾಡಿನಲ್ಲಿ ದೊರೆಯುವ ಅನೇಕ ಪ್ರಾಣಿ-ಪಕ್ಷಿಗಳನ್ನು ಬೇಟೆಯಾಡುವುದು ಈ ಸಮುದಾಯಗಳ ಪ್ರವೃತ್ತಿ. ಆ ಮೂಲಕ ಮಾಂಸವನ್ನು ತಮ್ಮ ಆಹಾರದ ಮುಖ್ಯ ಅಂಗವನ್ನಾಗಿ ಸ್ವೀಕರಿಸಿದ್ದಾರೆ. ಕಾಡಿನಲ್ಲಿ ವಾಸಿಸುತ್ತಿದ್ದರೂ ಇವರು ತಮ್ಮದೇ ಆದ ಜೀವನ ಶೈಲಿಯನ್ನು ರೂಢಿಸಿಕೊಂಡಿದ್ದಾರೆ. ಸಾಂಸ್ಕೃತಿಕವಾಗಿ ಹಲವಾರು ವಿಶೇಷ ಸಂಗತಿಗಳಿಂದ ಆದಿವಾಸಿಗಳು ಬದುಕುತ್ತಿದ್ದಾರೆ. ಊರಿನ ಸಂಪರ್ಕವಿಲ್ಲದಿದ್ದರೂ, ಕಾಡಿನಲ್ಲಿದ್ದುಕೊಂಡೇ ಆಚರಣೆ, ಸಂಪ್ರದಾಯ, ನಂಬಿಕೆ, ಉಡುಗೆ-ತೊಡುಗೆ ಮುಂತಾದವುಗಳಿಂದ ಪ್ರತ್ಯೇಕವಾಗಿ ಕಂಡುಬರುತ್ತಾರೆ. ಈ ದೃಷ್ಟಿಯಿಂದ ಪ್ರತ್ಯೇಕ ಜೀವನ ಪದ್ಧತಿಯನ್ನು ರೂಢಿಸಿಕೊಂಡು, ಅನನ್ಯ ಸಾಂಸ್ಕೃತಿಕ ಮೌಲ್ಯಗಳನ್ನು ಉಳಿಸಿಕೊಂಡು ಬಂದಿರುವ ಜನ ಸಮುದಾಯವನ್ನು 'ಬುಡಕಟ್ಟು ಸಮುದಾಯ'ವೆಂದು ಗುರುತಿಸಲಾಗುತ್ತದೆ. ಆದಿವಾಸಿ ಜನರನ್ನು ಬುಡಕಟ್ಟು, ಗಿರಿವಾಸಿಗಳು, ಮೂಲವಾಸಿಗಳು, ಗಿರಿಜನರು, ಅರಣ್ಯವಾಸಿಗಳು ಎಂದೂ ಗುರುತಿಸಲಾಗುತ್ತಿದೆ.

ಒಂದು ನಿರ್ದಿಷ್ಟ ಭೂ ಪ್ರದೇಶದಲ್ಲಿ ವಾಸಿಸುವ ಹಾಗೂ ಇತರೆ ಜನಸಮುದಾಯಗಳಿಗಿಂತ ಭಿನ್ನವಾಗಿದ್ದು, ಸಾಕಷ್ಟು ಅನುವಂಶೀಯ ಲಕ್ಷಣಗಳನ್ನು ಹೊಂದಿರುವ ಒಂದು ಮಾನವ ಗುಂಪನ್ನು ಆದಿವಾಸಿ, ಬುಡಕಟ್ಟು ಎಂಬ ಹೆಸರುಗಳಿಂದ ಮಾನವ ಶಾಸ್ತ್ರಜ್ಞರು ಗುರುತಿಸುತ್ತಾರೆ. 'ಆದಿವಾಸಿ' ಎಂಬ ಪದವನ್ನು ಜಗತ್ತಿನಲ್ಲಿ ಪುರಾತನ ಶೈಲಿಯಲ್ಲಿ ಜೀವಿಸುವ ಜನಾಂಗಗಳು ಎಂಬರ್ಥದಲ್ಲಿ ಬಳಸಲಾಗುತ್ತಿದೆಯೆಂದು ಕೆಲವು ಮಾನವಶಾಸ್ತ್ರಜ್ಞರು ಅಭಿಪ್ರಾಯ ಪಡುತ್ತಾರೆ. ಬುಡಕಟ್ಟು ಸಮುದಾಯವನ್ನು ಕುರಿತು ಅನೇಕ ವ್ಯಾಖ್ಯಾನಗಳಿವೆ. "In India consideration of what a tribe is the form scheduled tribe along with of scheduled caste. Appeared for the first time ofter the constitution come into forceis 1950. The castom of identifying certain groups of people for the benefit of special welfare measures sanctioned by government goes back to pre-independence days. The government of India act 1935 categorized for the first time certain tribes as "Backward tribes" but already in the 1931 census certain in other as back ward classes."[೧]

The tribe should manifest indications of primifive fraits disctinctive culture. Geography calsation shyness of contact with the community and large and back wordness"[೨] ಅದರಂತೆ ''ಇತಿಮಿತಿ ಬೇಡಿಕೆಗಳನ್ನು ಹೊಂದಿರುವ ಬುಡಕಟ್ಟು ಸಮುದಾಯಗಳ ಜೀವನವು ಸರಳವಾಗಿರುತ್ತದೆ. ಬುಡಕಟ್ಟು ಎಂಬುದು ಅನೇಕ ಕುಲಗಳು, ಅಲೆಮಾರಿ ತಂಡಗಳು ನಿಶ್ಚಿತ ಭೌಗೋಳಿಕ ಪ್ರದೇಶಗಳೊಳಗೆ ವಾಸಿಸುವ ಒಳಗುಂಪುಗಳು

ಪ್ರತ್ಯೇಕ ಭಾಷೆ, ವಿಶಿಷ್ಟ ಸಂಸ್ಕೃತಿ ಮತ್ತು ಒಂದು ಸಾಮಾನ್ಯ ರಾಜಕೀಯ ಸಂಘಟನೆ ಅಥವಾ ಹೊರಗಿನವರ ವಿರುದ್ಧ ತಾವೆಲ್ಲಾ ಒಂದೇ ಎಂಬ ಏಕತಾ ಭಾವನೆ, ಇವುಗಳೆಲ್ಲವುಗಳಿಂದ ಕೂಡಿದ ಸಮೂಹ. ಇವರು ಸಾಮಾನ್ಯವಾಗಿ ಅರಣ್ಯ ಅಥವಾ ಗುಡ್ಡಗಾಡುಗಳ ದುರ್ಗಮ ಪ್ರದೇಶಗಳಲ್ಲಿ ನಾಗರಿಕ ಜಗತ್ತಿನಿಂದ ದೂರ ವಾಸಿಸುತ್ತಾರೆ''[3] ಎಂಬ ಹೇಳಿಕೆಯಲ್ಲಿ ಬುಡಕಟ್ಟು ಜನರೆಂದರೆ ಯಾರು, ಅವರ ವಾಸದ ನೆಲೆಗಳು ಯಾವುವು ಮತ್ತು ಆ ಸಮುದಾಯಗಳು ತಮ್ಮ ಸಂಸ್ಕೃತಿಯಲ್ಲಿ ಒಗ್ಗೂಡಿಕೊಂಡಿರುತ್ತವೆಂಬುದನ್ನು ವಿವರಿಸುವ ಪ್ರಯತ್ನ ಮಾಡಲಾಗಿದೆ.

ನಾಗರಿಕ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗದೆ ದಟ್ಟವಾದ ಕಾಡಿನಲ್ಲಿ ಹಾಗೂ ಗುಡ್ಡಗಾಡು ಪ್ರದೇಶಗಳಲ್ಲಿ ತಮ್ಮದೇ ಆದ ನೆಲೆಗಳನ್ನು ಕಟ್ಟಿಕೊಂಡು ವಾಸಿಸುತ್ತಾ, ನಾಗರಿಕ ಜೀವನ ಶೈಲಿಯ ಪ್ರಭಾವವಿಲ್ಲದೇ ಬದುಕುತ್ತಿದ್ದಾರೆ. ಆದರೂ ಇಂದು ಆಧುನಿಕತೆಯ ಪ್ರಭಾವದಿಂದ ಕಾಡಿನ ಜೀವನವನ್ನು ನಾಡಿನ ಜೀವನಶೈಲಿಯ ಪ್ರಭಾವಗೊಳಿಸಿದೆ. ನಾಡಿನ ಜೀವನದ ಅನುಕರಣೆಯು ಕಡಿಮೆ ಪ್ರಮಾಣದಲ್ಲಿ ಇದ್ದರೂ, ಕೊಂಚ ಪ್ರೇರಣೆಯಿಂದ ಇವರ ಸಂಸ್ಕೃತಿಯು ನಾಗರಿಕ ಸಾಮಾಜಿಕ ವ್ಯವಸ್ಥೆಯ ಕಡೆಗೆ ಬದಲಾವಣೆ ಹೊಂದುತ್ತಿದೆ.

**೧ : ೧ ಉದ್ದೇಶ**

''ಒಡಿಗ ಬುಡಕಟ್ಟು ಸಮುದಾಯ : ಒಂದು ಅಧ್ಯಯನ'' ಎಂಬುದು ಈ ಮಹಾಪ್ರಬಂಧದ ಶೀರ್ಷಿಕೆ. ಭಾರತದಲ್ಲಿ ಬುಡಕಟ್ಟುಗಳ ಅಧ್ಯಯನ ಹದಿನೆಂಟನೆಯ ಶತಮಾನದಿಂದ ಈಚೆಗೆ ನಡೆಯುತ್ತಿದೆ. ಕರ್ನಾಟಕದಲ್ಲಿಯೂ ಕೆಲವು ಬುಡಕಟ್ಟುಗಳ ಅಧ್ಯಯನ ಆರಂಭವಾಗಿ ಆ ಮೂಲಕ ಹಲವಾರು ಸಮುದಾಯಗಳನ್ನು ಕುರಿತು ಸಮಗ್ರ ಅಧ್ಯಯನ ನಡೆದಿದೆ. ಆದರೆ ಒಡಿಗ ಬುಡಕಟ್ಟು ಸಮುದಾಯ ಕುರಿತಾದ ಯಾವೊಂದು ಉಲ್ಲೇಖಗಳು, ಅಧ್ಯಯನಗಳು ಈವರೆಗೆ ದೊರೆತಿಲ್ಲ. ಮೈಸೂರು ಜಿಲ್ಲೆಯಲ್ಲಿ ವಾಸಿಸುವ ಈ ಸಮುದಾಯವು ಅಧ್ಯಯನಕಾರರ ಅಲಕ್ಷ್ಯಕ್ಕೆ ಒಳಪಟ್ಟಿದೆ. ಈ ಜಿಲ್ಲೆಯಲ್ಲಿರುವ ಇನ್ನಿತರ ಬುಡಕಟ್ಟು ಸಮುದಾಯಗಳ ಅಧ್ಯಯನ ಮಾಡುವಾಗಲೂ ಯಾವೊಬ್ಬ ವಿದ್ವಾಂಸರು ಒಡಿಗ ಸಮುದಾಯವನ್ನು ಪ್ರಾಸ್ತಾವಿಕವಾಗಿಯಾದರೂ ದಾಖಲಿಸಿಲ್ಲ. ಕರ್ನಾಟಕ ರಾಜ್ಯ ಗೆಝೆಟಿಯರ್ ಭಾಗ-೧ ರಲ್ಲಿ ಈ ಸಮುದಾಯದ ಹೆಸರನ್ನು ಮಾತ್ರ ಉಲ್ಲೇಖಿಸಿದ್ದು, ಅವರ ಜನಸಂಖ್ಯೆ, ಅವರು ವಾಸಿಸುವ ಭೌಗೋಳಿಕ ಪರಿಸರ, ಅವರ ಸಂಸ್ಕೃತಿ ಕುರಿತು ಯಾವ ಮಾಹಿತಿ ದೊರೆಯುವುದಿಲ್ಲ. ಒಡಿಗ ಬುಡಕಟ್ಟು ಸಮುದಾಯವು ಕರ್ನಾಟಕ ಮತ್ತು ಕೇರಳದ ಗಡಿಯಲ್ಲಿ ವಾಸಮಾಡುತ್ತಿದ್ದು, ಇವರು ತಮ್ಮದೇಯಾದ ಸಂಸ್ಕೃತಿಯನ್ನು ಮತ್ತು ಸಾಮಾಜಿಕ ವ್ಯವಸ್ಥೆಯನ್ನು ಹೊಂದಿದ್ದಾರೆ. ಈ ದೃಷ್ಟಿಯಿಂದ ಈ ಸಮುದಾಯದ ಅಧ್ಯಯನ ಅಗತ್ಯವೆಂದು ತೋರಿ ಬಂದಿತು. ಆ ಮೂಲಕ ಕರ್ನಾಟಕದಲ್ಲಿ ವಾಸಿಸುವ ಇತರ ಬುಡಕಟ್ಟು ಸಮುದಾಯಗಳಂತೆ, ಈ ಒಡಿಗ ಸಮುದಾಯದ ವಿಶಿಷ್ಟ ಸಂಸ್ಕೃತಿಯನ್ನು ಪರಿಚಯಿಸುವ ಕಾರಣದಿಂದ ಪ್ರಸ್ತುತ ಅಧ್ಯಯನವನ್ನು ಆಯ್ಕೆ ಮಾಡಿಕೊಂಡಿದ್ದೇನೆ.

ಚಿತ್ರದುರ್ಗದಿಂದ ಬಂದು ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ ಹಾಗೂ ಕೇರಳದ ವೈನಾಡು ಜಿಲ್ಲೆಯ ಗಡಿಭಾಗದಲ್ಲಿ ವಾಸಿಸುತ್ತಿರುವ ಒಡಿಗ ಸಮುದಾಯವು ಕಡಿಮೆ ಸಂಖ್ಯೆಯಲ್ಲಿದ್ದು, ಒಂದು ಸೀಮಿತ ಭೌಗೋಳಿಕ ವಲಯದಲ್ಲಿ ಇರುವುದರಿಂದ ಇವರ ಕುರಿತಾದ ಅಧ್ಯಯನ ಒಂದು ಹೊಸ ಮಾದರಿಯಾಗುವ ಸಾಧ್ಯತೆಗಳಿವೆ.

ಅಂತೆಯೇ ಈ ಸಮುದಾಯದ ಅಧ್ಯಯನದಿಂದ ಈ ಬಗೆಯ ಅವಜ್ಞೆಗೆ ಏಕೆ ಒಳಗಾಯಿತು ಎಂಬಂತಹ ಕೆಲವು ಆತಂಕಗಳಿಂದ ಈ ಅಧ್ಯಯನದಲ್ಲಿ ಕೆಲವು ಸವಾಲುಗಳನ್ನು ಎತ್ತಿಕೊಂಡು ಪ್ರಬಂಧ ರಚಿಸಲಾಗಿದೆ. ಅಂತಹ ಕೆಲವು ಸವಾಲುಗಳು ಹೀಗಿವೆ :

೧ ಕರ್ನಾಟಕದ ಎಲ್ಲ ಬುಡಕಟ್ಟು ಸಮುದಾಯಗಳ ಹೆಸರನ್ನು ಗಮನಿಸಿ, ಇವುಗಳ ಬಗೆಗೆ ಆದಂತಹ ಅಧ್ಯಯನವನ್ನು ಗಮನಿಸುವುದು.

೨ ಈವರೆಗೆ ನಡೆದ ಕೆಲವು ಬುಡಕಟ್ಟು ಸಮುದಾಯಗಳ ಅಧ್ಯಯನದಲ್ಲಿ ವ್ಯಕ್ತವಾದ ಸಂಸ್ಕೃತಿಯ ಮಾದರಿಗಳನ್ನು ಗಮನಿಸುವುದು.

೩ 'ಒಡಿಗ' ಎಂಬ ಸಮುದಾಯದ ಅಧ್ಯಯನವನ್ನು ಕೈಗೆತ್ತಿಕೊಳ್ಳುವುದು.

೪ ಒಡಿಗ ಸಮುದಾಯ ಒಂದು ಪ್ರತ್ಯೇಕ ಗುಂಪೇ? ಎಂಬುದನ್ನು ಚರ್ಚೆಗೆ ಒಳಪಡಿಸುವುದು ಮತ್ತು ಚಿತ್ರದುರ್ಗದ ಬೇಡ ಸಮುದಾಯದೊಂದಿಗೆ ಇವರ ಸಂಬಂಧವಿದೆಯೇ? ಈ ಎರಡು ಪಂಗಡಗಳ ನಡುವೆ ಸಾಂಸ್ಕೃತಿಕ ಕೊಡುಪಡೆ ಯಾವ ರೀತಿ ಇದೆಯೆಂಬುದನ್ನು ಗುರುತಿಸುವುದು.

೫ ಒಡಿಗ ಬುಡಕಟ್ಟು ಸಮುದಾಯ ಕೇವಲ ೪೪೩೨ ಜನಸಂಖ್ಯೆ ಇರುವುದಕ್ಕೆ ಕಾರಣವೇನು. ಇವರು ಮೈಸೂರು ಮತ್ತು ಕೇರಳದ ಗಡಿ ಭಾಗದಲ್ಲಿಯೇ ಏಕೆ ವಾಸಿಸುತ್ತಾರೆ. ಮಿತ ಸಂಖ್ಯೆಯಲ್ಲಿರುವ ಈ ಸಮುದಾಯ ಪ್ರತ್ಯೇಕ ಬುಡಕಟ್ಟೇ ಅಥವಾ ಬೇರೆ ಬುಡಕಟ್ಟಿನಿಂದ ಬೇರ್ಪಟ್ಟಿದೆಯೇ ಎಂಬುದನ್ನು ಕಂಡುಕೊಳ್ಳುವುದು.

೬ ಇವರು ಪ್ರತ್ಯೇಕ ಸಮುದಾಯವಾಗಿದ್ದರೆ ಇವರಿಗೆ ಯಾವುದಾದರೂ ಸ್ವಂತ ಭಾಷೆ ಇದೆಯೇ? ಎಂಬುದನ್ನು ಗಮನಿಸುವುದು. ಅಲ್ಲದೇ ಕನ್ನಡ, ಮಲೆಯಾಳಿ ಭಾಷೆಯನ್ನು ಮಾತನಾಡುವ ಇವರ ಭಾಷಿಕ ಚಹರೆ, ಸಾಹಿತ್ಯದ ಸೃಷ್ಟಿಯು ಹೇಗಿದೆಯೆಂಬುದನ್ನು ಗುರುತಿಸುವುದು.

೭ ಬೇಡ ಸಮುದಾಯದ ಒಂದು ಗುಂಪೇ ಒಡಿಗರು ಎಂಬುದನ್ನು ಕಂಡುಕೊಳ್ಳುವ ಪ್ರಯತ್ನ ಮಾಡುವುದು. ಆ ಮೂಲಕ ಎರಡೂ ಸಮುದಾಯಗಳ ಸಾಂಸ್ಕೃತಿಕ ಅಂಶಗಳನ್ನು ಗಮನಿಸುವುದು.

೮ ಒಡಿಗ ಸಮುದಾಯದ ಸಾಮಾಜಿಕ ವ್ಯವಸ್ಥೆ ಮತ್ತು ಜೀವನ ವಿಧಾನವನ್ನು ಅವರ ಕೌಟುಂಬಿಕ ಪದ್ಧತಿ, ಸಂಪ್ರದಾಯ, ನಂಬಿಕೆ, ನಿಷೇಧಗಳು ಮುಂತಾದ ಆಚರಣೆಗಳು, ಧಾರ್ಮಿಕ ಪರಿಸರ, ದೈವಗಳು, ಅವರ ಭಾಷೆ , ಸಾಹಿತ್ಯ, ಕಲೆ, ನ್ಯಾಯಪದ್ಧತಿ, ಆರ್ಥಿಕ ಸ್ಥಿತಿಗತಿಯನ್ನು ತಿಳಿಯುವುದು.

೯ ಒಡಿಗ ಸಮುದಾಯದ ಸಮಗ್ರ ಜೀವನ ವಿಧಾನವನ್ನು ಚರ್ಚಿಸಿ ಆ ಮೂಲಕ ಅವರ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ಎತ್ತಿ ಹಿಡಿಯುವುದು.

೧೦ ಒಡಿಗ ಸಮುದಾಯವೂ ಒಂದು ಪ್ರತ್ಯೇಕಿತ ಬೇಡ ಸಮುದಾಯದ ಗುಂಪು. ಅದನ್ನು ಅಲಕ್ಷ್ಯಕ್ಕೊಳಪಡಿಸದೇ, ಅಧ್ಯಯನದ ಮೂಲಕ ಅವರು ಈ ನಾಡಿನ ಸಂಸ್ಕೃತಿಯ ಒಂದು ಭಾಗವಾಗಿ ತಮ್ಮ ಕೊಡುಗೆಯನ್ನು ನೀಡಿದ್ದಾರೆಂಬುದನ್ನು ಕಂಡುಕೊಳ್ಳುವುದು.

ಮೇಲಿನ ಅಂಶಗಳು ಈ ಅಧ್ಯಯನದ ಮುಖ್ಯ ಉದ್ದೇಶಗಳಾಗಿವೆ. ಈ ಮುಖ್ಯ ಅಂಶಗಳನ್ನಿಟ್ಟುಕೊಂಡು ಆಯಾ ಅಧ್ಯಾಯಗಳ ಅಡಿಯಲ್ಲಿ ಚರ್ಚೆಗೆ ಒಳಪಡಿಸಲಾಗಿದೆ.

ಈ ಎಲ್ಲ ಕಾರಣಗಳಿಂದ ''ಒಡಿಗ ಬುಡಕಟ್ಟು ಸಮುದಾಯ : ಒಂದು ಅಧ್ಯಯನ'' ಎಂಬ ಮಹಾಪ್ರಬಂಧದಲ್ಲಿ ಮೊದಲ ಬಾರಿಗೆ ಒಡಿಗ ಸಮುದಾಯದ ಸಂಸ್ಕೃತಿಯನ್ನು ಕುರಿತು ಚರ್ಚೆ ಮಾಡಲಾಗಿದೆ.

### ೧ : ೨ ವ್ಯಾಪ್ತಿ

ಒಡಿಗ ಬುಡಕಟ್ಟು ಜನರು ಚಿತ್ರದುರ್ಗದಿಂದ ಬಂದು ಮೈಸೂರು ಜಿಲ್ಲೆ, ಕೇರಳ ರಾಜ್ಯದ ಗಡಿಭಾಗದಲ್ಲಿ ನೆಲೆಸಿದೆ. ಮದಕರಿನಾಯಕನ ಆಡಳಿತಾವಧಿಯಲ್ಲಿ ಹೈದರಾಲಿಯು ಚಿತ್ರದುರ್ಗದ ಮೇಲೆ ದಾಳಿಯನ್ನು ಆರಂಭಿಸಿದನು. ಈ ಅವಧಿಯಲ್ಲಿ ಜೀವಭಯದಿಂದ ಓಡಿ ಬಂದ ಕೆಲವರು ಒಡಿಗ ಎಂಬ ಹೆಸರಿನೊಂದಿಗೆ ಈ ಭೌಗೋಳಿಕ ವ್ಯಾಪ್ತಿಯಲ್ಲಿ ವಾಸಿಸುತ್ತಿದ್ದಾರೆ ಎಂಬುದಾಗಿ ತಿಳಿಯುತ್ತದೆ. ಕರ್ನಾಟಕದ ಇನ್ನಿತರ ಯಾವುದೇ ಭೌಗೋಳಿಕ ವಲಯದಲ್ಲಿ ಈ ಸಮುದಾಯದ ನೆಲೆಸುವಿಕೆಯ ಬಗ್ಗೆ ಮಾಹಿತಿಯಿಲ್ಲ. ಕಾರಣ ಅತ್ಯಂತ ಸೀಮಿತ ವಲಯದಲ್ಲಿ ಇವರು ವಾಸಿಸುತ್ತಿದ್ದಾರೆ. ಮುಖ್ಯವಾಗಿ ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ ತಾಲ್ಲೂಕಿನ ಮಚ್ಚೂರು, ಬಾವಲಿ, ದೊಡ್ಡಭೈರನಕುಪ್ಪೆ, ಚಿಕ್ಕಭೈರನಕುಪ್ಪೆ, ಗಂಡತ್ತೂರು, ಜಕ್ಕಹಳ್ಳಿ, ವಡಕನಮೊಳ, ಆನೆಮೊಳ ಮುಂತಾದ ಕಡೆಗಳಲ್ಲಿ ಮತ್ತು ಕೇರಳದ ವೈನಾಡು ಜಿಲ್ಲೆಯ ಮಾನಾಂದವಾಡಿ ತಾಲ್ಲೂಕಿನ ಆದಂಡ, ಕೋಟೇರು, ತಿರುನಲ್ಲಿ ಮತ್ತು ಸುಲ್ತಾನ್‌ಬತ್ತೇರಿ ತಾಲ್ಲೂಕಿನ ಕಬ್ಬಿನಗೆರೆ, ಕಬ್ಬಿನಗದ್ದೆ ಪ್ರದೇಶಗಳಲ್ಲಿ ಅಲ್ಲದೇ ಕೇರಳ, ಕರ್ನಾಟಕದ ಗಡಿಭಾಗದ ಅರಣ್ಯ ಪ್ರದೇಶಗಳಲ್ಲಿಯೂ ಇವರು ವಾಸಿಸುತ್ತಿದ್ದಾರೆ. ಈ ಕಾರಣದಿಂದಾಗಿ ಮೇಲೆ ಹೆಸರಿಸಿದ ಊರುಗಳನ್ನು ಈ ಅಧ್ಯಯನದ ಸಮಗ್ರ ವ್ಯಾಪ್ತಿಯೆಂದೇ ಸ್ವೀಕರಿಸಲಾಗಿದೆ.

### ೧ : ೩ ವಿಧಾನ

ಒಡಿಗ ಬುಡಕಟ್ಟು ಸಮುದಾಯದ ಅಧ್ಯಯನವು ಮುಖ್ಯವಾಗಿ ಕ್ಷೇತ್ರ ಮಾಹಿತಿಯನ್ನು ಅವಲಂಬಿಸಿದೆ. ಈ ಸಮುದಾಯದಲ್ಲಿ ಅನಕ್ಷರಸ್ಥ ಸಮೂಹವೇ ಹೆಚ್ಚಾಗಿ ಕಂಡು ಬಂದಿದೆ. ಇದರಿಂದ ಇವರಿಗೆ ಲಿಖಿತ ಪ್ರಶ್ನಾವಳಿಯ ಮೂಲಕ ಉತ್ತರಿಸುವುದು ಸಾಧ್ಯವಾಗಲಾರದು. ಆದ್ದರಿಂದ ಯಾವುದೇ ಲಿಖಿತ ಪ್ರಶ್ನೆಗಳನ್ನು ಮಾಡಿಕೊಳ್ಳದೇ, ನೇರವಾಗಿ ಅವರನ್ನು ಸಂದರ್ಶಿಸುವ ಮೂಲಕ ಮಾಹಿತಿಯನ್ನು ಪಡೆಯಲಾಗಿದೆ.

ಈವರೆಗೆ ಈ ಸಮುದಾಯದ ಅಧ್ಯಯನವಾಗಲಿ, ಉಲ್ಲೇಖಗಳಾಗಲಿ ಇಲ್ಲದೇ ಇರುವುದರಿಂದ ಗ್ರಂಥಗಳಿಂದ ಪಡೆಯಬಹುದಾದ ಪೂರಕ ಮಾಹಿತಿಯನ್ನು ದಾಖಲಿಸಿಲ್ಲ. ಬದಲಾಗಿ ಬುಡಕಟ್ಟು ಸಮುದಾಯಗಳ ದೃಷ್ಟಿಯಿಂದ

ವ್ಯಾಖ್ಯಾನ ಇತ್ಯಾದಿಗಳಿಗೆ ಅಲ್ಲಲ್ಲಿ ಕೆಲವು ಆಕರ ಗ್ರಂಥಗಳನ್ನು ಬಳಸಿಕೊಳ್ಳಲಾಗಿದೆ. ಇದರ ಹೊರತಾಗಿ ಇಲ್ಲಿ ಸಂಪೂರ್ಣ ಜನರನ್ನೇ ಅವಲಂಬಿಸಿದ ಅಧ್ಯಯನವಿದೆ. ಒಡಿಗರ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿರುವ ಆಚರಣೆಗಳು, ನಂಬಿಕೆಗಳು ಅವರ ಮೌಖಿಕ ಪರಂಪರೆಯಲ್ಲಿ ಅಡಗಿವೆ. ಅದನ್ನು ಸಂಗ್ರಹಿಸಿ ಈ ಅಧ್ಯಯನವನ್ನು ರೂಪಿಸಲಾಗಿದೆ.

**೧ : ೪ ಮಿತಿಗಳು**

ಒಡಿಗ ಬುಡಕಟ್ಟು ಸಮುದಾಯವು ಕರ್ನಾಟಕದ ಜನಸಂಖ್ಯೆಯಲ್ಲಿ ೪೪೩೨ ಜನರು ಮಾತ್ರ ಇದ್ದಾರೆ. ಅಲ್ಲದೇ ಇವರು ಮೈಸೂರು-ಕೇರಳದ ವೈನಾಡು ಜಿಲ್ಲೆಯ ಅತ್ಯಂತ ಸೀಮಿತ ಭೌಗೋಳಿಕ ಪರಿಸರದಲ್ಲಿ ವಾಸಿಸುತ್ತಿದ್ದಾರೆ. ಆದ್ದರಿಂದ ಇವರ ಸಂಸ್ಕೃತಿಯನ್ನು ಈ ಮಿತಿಯಲ್ಲಿಯೇ ಗಮನಿಸಬೇಕಾಗಿದೆ. ಕಡಿಮೆ ಜನಸಂಖ್ಯೆ ಇರುವುದರಿಂದ ಇವರ ಸಂಸ್ಕೃತಿಯ ವಿವಿಧ ಮುಖಗಳನ್ನು ಸಂಕ್ಷಿಪ್ತವಾಗಿಯೇ ವಿವರಿಸಲಾಗಿದೆ. ಇವರಲ್ಲಿ ಸಾಹಿತ್ಯವೂ ಅಷ್ಟಾಗಿ ದೊರೆಯುವುದಿಲ್ಲ ಆದ್ದರಿಂದ ಒಟ್ಟು ಈ ಸಂಶೋಧನ ಅಧ್ಯಯನದಲ್ಲಿ ಅವರ ಆಚರಣೆ, ಸಾಮಾಜಿಕ, ಆರ್ಥಿಕ, ರಾಜಕೀಯ ಅಂಶಗಳನ್ನು ಸಂಕ್ಷಿಪ್ತವಾಗಿಯೇ ವಿವರಿಸಿರುವುದು ಈ ಅಧ್ಯಯನದ ಮಿತಿಯಾಗಿದೆ.

**೧ : ೪ : ೧ ಕ್ಷೇತ್ರಕಾರ್ಯದ ಅನುಭವ**

ಒಡಿಗ ಸಮುದಾಯವನ್ನು ಈವರೆಗೆ ಯಾರೂ ಸಂದರ್ಶಿಸಿಲ್ಲವೆಂದು ತಿಳಿಯುತ್ತದೆ. ಅನಕ್ಷರಸ್ಥರೇ ಹೆಚ್ಚಾಗಿರುವ ಇವರು ಅಕ್ಷರಸ್ಥ ಪಟ್ಟಣಿಗರು ಬಂದಾಗ ಕುತೂಹಲದಿಂದ ಮತ್ತು ಅನುಮಾನಗಳಿಂದ ನೋಡುತ್ತಾರೆ. ಇತ್ತೀಚೆಗೆ ನಾಗರಿಕ ಸಂಪರ್ಕ ಹೊಂದಿದ ಕೆಲವರು ಈ ಆತಂಕಗಳಿಂದ ದೂರವಿದ್ದಾರೆ. ಆದರೆ ಕಾಡಿನಲ್ಲಿ ವಾಸಿಸುತ್ತಿರುವ ಕೆಲವರು ಈ ಬಗೆಯ ದ್ವಂದ್ವದಲ್ಲಿರುವುದು ತಿಳಿಯುತ್ತದೆ. ಸಂಶೋಧಕರು ಪ್ರಶ್ನಿಸುವ ಮಾತುಗಳಿಗೆ ಉತ್ತರ ನೀಡಲಾರರು. ಮಹಿಳೆಯರು, ಮಕ್ಕಳು ಒಂದು ರೀತಿಯ ಹಿಂಜರಿಕೆಯನ್ನು ವ್ಯಕ್ತಪಡಿಸುತ್ತಾರೆ. ಒಡಿಗ ಸಮುದಾಯದ ಮುಖಂಡರು, ಹಿರಿಯರಿಗೆ ನಮ್ಮ ಉದ್ದೇಶ ಮತ್ತು ಗುರಿಗಳನ್ನು ಮನವರಿಕೆ ಮಾಡಿದಾಗ, ಅವರು ತಮ್ಮ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುತ್ತಾರೆ. ಆರಂಭದಲ್ಲಿ ಇವರನ್ನು ಮನ ಒಲಿಸಿದಾಗ ತಮ್ಮ ಸಂಸ್ಕೃತಿಯ ಅನೇಕ ಮಾಹಿತಿಗಳನ್ನು ನೀಡಿದ್ದಾರೆ. ಯಾವುದೇ ರೀತಿಯ ಕಿರುಕುಳದ ಹಿಂಸಾ ಪ್ರವೃತ್ತಿಯ ಪ್ರಶ್ನೆಗಳನ್ನು ಇವರಿಗೆ ಕೇಳದೆ, ಅವರಿಗೆ ಅರ್ಥವಾಗುವಂತೆ ಸರಳವಾಗಿ ಪ್ರಶ್ನಿಸಿ ಉತ್ತರವನ್ನು ಪಡೆಯಲಾಗಿದೆ. ಇಲ್ಲಿ ವಾಸಿಸುವ ಒಡಿಗರು ತಮ್ಮ ಬಗ್ಗೆ ಮಾಹಿತಿಯನ್ನು ನೀಡಲು ಉತ್ಸುಕರಾಗಿದ್ದಾರೆ. ಅವರ ಸಂಸ್ಕೃತಿಯು ಮತ್ತೊಬ್ಬರಿಗೆ ತಿಳಿಯಬೇಕೆಂದು ಇಂದು ಅವರಿಗೆ ಕುತೂಹಲವಿದೆ. ಈ ಕಾರಣದಿಂದ ಮಹಿಳೆಯರು, ಮಕ್ಕಳು, ಹಿರಿಯರು, ಪುರುಷರು, ಅಕ್ಷರಸ್ಥರು ಈ ಬಗ್ಗೆ ಒಳ್ಳೆಯ ಮನೋಭಾವನೆಯನ್ನು ಹೊಂದಿದ್ದಾರೆ. ಒಡಿಗರಿಗೆ ಅಧ್ಯಯನಕಾರರ ಬಗ್ಗೆ ಪ್ರೀತಿಯಿದೆ. ತಮ್ಮ ಕುಟುಂಬದ ಸದಸ್ಯನಂತೆ ಕಂಡು ಅವರು ಮಾಹಿತಿ ನೀಡುವವರಾಗಿದ್ದಾರೆ. ಆ ಮೂಲಕ ಸೂಕ್ಷ್ಮ ಗ್ರಹಿಕೆಯಿಂದ ಅವರ ಸಂಸ್ಕೃತಿಯ ವಿವಿಧ ಮಜಲುಗಳನ್ನು ತಿಳಿಯುವ ಅವಕಾಶವಿದೆ. ಒಡಿಗರ ಮಹಿಳೆಯರು, ಪುರುಷರು ತಮ್ಮಲ್ಲಿರುವ ಹಾಡು, ಗಾದೆ, ಒಗಟು, ಕಥೆ ಮುಂತಾದ ಮೌಖಿಕ ಸಾಹಿತ್ಯವನ್ನು ಹೇಳುತ್ತಾರೆ. ಇವರಲ್ಲಿ ಹೇರಳವಾಗಿ

ಮೌಖಿಕ ಸಾಹಿತ್ಯವಿಲ್ಲವಾದರೂ, ಅವರ ಜನಸಂಖ್ಯೆಯ ಮಿತಿ ಮತ್ತು ಅವರ ಅಸ್ತಿತ್ವದ ಕಾಲಾವಧಿಯನ್ನು ಅವಲಂಬಿಸಿ ಸಾಹಿತ್ಯ ರೂಪುಗೊಂಡಿರುವುದು ತಿಳಿಯುತ್ತದೆ. ಒಡಿಗರು ಆಚರಿಸುವ ಹಬ್ಬಗಳು, ಮದುವೆ ಮುಂತಾದ ಶಾಸ್ತ್ರಗಳಲ್ಲಿ ತುಂಬಾ ಉತ್ಸುಕರಾಗಿರುತ್ತಾರೆ. ತಮ್ಮ ಆಚರಣೆಗಳ, ನಂಬಿಕೆಗಳ ಕುರಿತು ಗಾಢವಾದ ಗೌರವವನ್ನು ಹೊಂದಿದ್ದಾರೆ. ಆಚರಣೆಗಳಲ್ಲಿ ಪಾಲ್ಗೊಳ್ಳಲು ಅಧ್ಯಯನಕಾರರಿಗೆ ಅವರು ಸಹಕಾರ ನೀಡುತ್ತಾರೆ.

ಒಟ್ಟು ಒಡಿಗ ಸಮುದಾಯದವರು ತಮ್ಮ ಸಾಮಾಜಿಕ ವ್ಯವಸ್ಥೆ ಹಾಗೂ ಸಂಸ್ಕೃತಿಯನ್ನು ಪ್ರತ್ಯೇಕವೆಂಬಂತೆ ರೂಪಿಸಿಕೊಂಡಿರುವುದು ತಿಳಿಯುತ್ತದೆ.

**೧ : ೫ ಕರ್ನಾಟಕದ ಬುಡಕಟ್ಟು ಅಧ್ಯಯನಗಳ ಸಂಕ್ಷಿಪ್ತ ವಿಷಯಾವಲೋಕನ**

ಸ್ವಾಭಾವಿಕ ಸಂಪನ್ಮೂಲಗಳನ್ನು ಹೊಂದಿರುವ ಕರ್ನಾಟಕದ ಬೆಟ್ಟ ಗುಡ್ಡ ಪ್ರದೇಶಗಳಲ್ಲಿ ಹಾಗೂ ದಟ್ಟವಾಗಿರುವ ಅರಣ್ಯಗಳಲ್ಲಿ ಅನೇಕ ಆದಿವಾಸಿ ಬುಡಕಟ್ಟುಗಳನ್ನು ಕಾಣಬಹುದು. ಸುಮಾರು ೪೯ ಬುಡಕಟ್ಟುಗಳು ಕರ್ನಾಟಕದಲ್ಲಿರುವುದನ್ನು ಅನುಸೂಚಿಯಲ್ಲಿ ದಾಖಲಿಸಲಾಗಿದೆ. ಇವರಲ್ಲಿ ಕೆಲವು ಬುಡಕಟ್ಟುಗಳು ಮಾತ್ರ ಅರಣ್ಯದಲ್ಲಿ ವಾಸಿಸುತ್ತಿದ್ದಾರೆ. ಅವರಲ್ಲಿ ಹಸಲರು, ಇರುಳರು, ಹಕ್ಕಿಪಿಕ್ಕಿಗಳು, ಸೋಲಿಗರು, ಕಾಡುಕುರುಬ, ಜೇನುಕುರುಬ, ಯರವರು, ಪಣಿಯರು, ಸಿದ್ದಿಯರು, ಕೊರವರು, ಮೇದರು, ಬಡಗರು ಇನ್ನೂ ಅನೇಕ ಬುಡಕಟ್ಟು ಸಮುದಾಯಗಳು ನೆಲೆಗೊಂಡಿವೆ. ಕರ್ನಾಟಕದಲ್ಲಿನ ಬುಡಕಟ್ಟು ಸಮುದಾಯಗಳ ಅಧ್ಯಯನವನ್ನು ಅನೇಕ ವಿದ್ವಾಂಸರು, ಮಾನವ ಶಾಸ್ತ್ರಜ್ಞರು, ಸಮಾಜಶಾಸ್ತ್ರಜ್ಞರು, ಜಾನಪದ ವಿದ್ವಾಂಸರು ಮೊದಲಾದವರು ಅಧ್ಯಯನ ಮಾಡುತ್ತಿದ್ದಾರೆ.

ಭಾರತ ಹಾಗೂ ಕರ್ನಾಟಕ ಸೇರಿದಂತೆ ಹಲವಾರು ಬುಡಕಟ್ಟು ಸಮುದಾಯಗಳ ಅಧ್ಯಯನವನ್ನು ಸ್ವಾತಂತ್ರ್ಯ ಪೂರ್ವದಲ್ಲಿಯೇ ಆರಂಭಿಸಲಾಗಿದೆ. ''ವೆರಿಯರ್ ಎಲ್ವಿನ್''ರಂತಹ ಧರ್ಮ ಪ್ರಚಾರಕರು ಸಹ ಬುಡಕಟ್ಟುಗಳ ಆಚರಣೆ ಸಂಸ್ಕೃತಿಗಳಿಗೆ ಮಾರುಹೋಗಿ ಸಮುದಾಯದ ಒಬ್ಬ ಪ್ರಜೆಯಾಗಿ ಪರಿವರ್ತನೆಗೊಂಡು ಆ ಮೂಲಕ ಬುಡಕಟ್ಟು ಅಧ್ಯಯನ ಮಾಡಿದ ರೀತಿ ವಿಸ್ಮಯ. ಹಾಗೂ ಸರ್ ಹರ್ಬಟರಿಸ್ಲೆಯವರು ಭಾರತದ ಎಲ್ಲಾ ರಾಜ್ಯಗಳನ್ನು ದೃಷ್ಟಿಯಲ್ಲಿರಿಸಿಕೊಂಡು ಆ ರಾಜ್ಯಗಳ ಜಾತಿ ಹಾಗೂ ಬುಡಕಟ್ಟುಗಳ ಸಂಖ್ಯೆ, ಸ್ಥಳ, ಸಮುದಾಯ, ಆಚರಣೆ, ಆಚಾರ, ವಿಚಾರ ಇತ್ಯಾದಿಗಳ ಅಧ್ಯಯನ ಮಾಡಿ ಬೃಹತ್ ಸಂಪುಟಗಳ ಮೂಲಕ ಪ್ರಕಟಿಸಿದ್ದಾರೆ.

ಕರ್ನಾಟಕದ ಬುಡಕಟ್ಟುಗಳು ತಮ್ಮದೇ ಆದ ವಿಶಿಷ್ಟ ರೀತಿಯ ನೆಲೆ, ಸಂಸ್ಕೃತಿ, ಆಚರಣೆ ವಿಧಾನಗಳಿಂದ ಕೂಡಿದೆ. ಹಾಗೆಯೇ ಕಲೆ, ಕ್ರೀಡೆ, ಉಡುಗೆ-ತೊಡುಗೆಗಳು, ಆಹಾರ ಪದ್ಧತಿ ಅವರು ನೆಲೆಸಿರುವ ಭೌಗೋಳಿಕ ಪರಿಸರವನ್ನು ಅವಲಂಬಿಸಿರುತ್ತದೆ. ಬುಡಕಟ್ಟು ಸಮುದಾಯಗಳನ್ನು ಮಾನವಶಾಸ್ತ್ರಜ್ಞರು, ಸಮಾಜಶಾಸ್ತ್ರಜ್ಞರು, ವಿದ್ವಾಂಸರು ತಮ್ಮದೇ ಆದ ದೃಷ್ಟಿಕೋನದಲ್ಲಿ ಸಮುದಾಯಗಳ ಅಧ್ಯಯನ ನಡೆಸಿದ್ದಾರೆ. ಇವರು ಬುಡಕಟ್ಟುಗಳ ಮೂಲ, ಆಚರಣೆ, ಕುಟುಂಬ, ಸಂಸ್ಕೃತಿಗೆ ಹೆಚ್ಚು ಮಹತ್ವ ನೀಡಿ ಅಧ್ಯಯನ ನಡೆಸಿದ್ದಾರೆ. ಆದರೆ ಹತ್ತೊಂಬತ್ತನೆ

ದಶಕದಿಂದೀಚೆಗೆ ಜಾನಪದ ವಿದ್ವಾಂಸರು, ಸಾಹಿತ್ಯ, ಕಲೆ ಇತರೆ ಸಂಸ್ಕೃತಿಗಳಿಗೆ ಹೆಚ್ಚು ಮಹತ್ವ ನೀಡಿ ಸಮುದಾಯಗಳ ಅಧ್ಯಯನವನ್ನು ನಡೆಸುತ್ತಾ ಬಂದಿದ್ದಾರೆ.

ಆಗಿನ ಮೈಸೂರಿನ ಬುಡಕಟ್ಟುಗಳ ಬಗ್ಗೆ ಎಚ್.ವಿ. ನಂಜುಂಡಯ್ಯ ಹಾಗೂ ಎಲ್.ಕೆ. ಅನಂತ ಕೃಷ್ಣ ಅಯ್ಯರ್ ಒಂದು ದಶಕಗಳ ಅವಧಿಯಲ್ಲಿ ಆ ಪ್ರದೇಶದಲ್ಲಿ ಕ್ಷೇತ್ರಕಾರ್ಯ ಕೈಗೊಂಡು **''ದಿ ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್''** ಎಂಬ ಗ್ರಂಥವನ್ನು ನಾಲ್ಕು ಸಂಪುಟಗಳಲ್ಲಿ ಹೊರ ತಂದಿದ್ದಾರೆ. ಇದು ಮಾನವ ಶಾಸ್ತ್ರೀಯ ಅಧ್ಯಯನದ ಸಮೀಕ್ಷೆ. ಈ ಕೃತಿಗಳು ಸಂಶೋಧನೆ ನಡೆಸುವವರಿಗೆ ಕೈಪಿಡಿಯಂತಿವೆ.

೧೯೬೩ರಲ್ಲಿ ಎ.ಎ.ಡಿ. ಲೂಯಿಚ್ ಅವರು ತಮ್ಮ **''ಟ್ರೈಬ್ಸ್ ಆಫ್ ಮೈಸೂರು''** ಎಂಬ ಕೃತಿಯಲ್ಲಿ ಮೈಸೂರಿನಲ್ಲಿ ೨೭ ಬುಡಕಟ್ಟುಗಳನ್ನು ಕುರಿತು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಇದಲ್ಲದೆ ಎಡ್ಗರ್ ಥರ್‌ಸ್ಟನ್ ಮತ್ತು ಕೆ. ರಂಗಚಾರಿ ಅವರು **''ಕ್ಯಾಸ್ಟ್ ಅಂಡ್ ಟ್ರೈಬ್ಸ್ ಆಫ್ ಸೌತ್ ಇಂಡಿಯಾ''** ಎಂಬ ಏಳು ಸಂಪುಟಗಳ ಗ್ರಂಥವನ್ನು ಪ್ರಕಟಿಸಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಕುರಿತ ವಿವರಣೆಯನ್ನು ನೀಡಿದ್ದಾರೆ.

**''ಆಂತ್ರೊಪೋಲೋಜಿಕಲ್ ಸರ್ವೆ ಆಫ್ ಇಂಡಿಯಾ''** ಸಂಸ್ಥೆಯು ಕರ್ನಾಟಕದಲ್ಲಿ ಇರುವ ಕೆಲವು ಪರಿಶಿಷ್ಟ ಬುಡಕಟ್ಟುಗಳನ್ನು ಪರಿಚಯ ಮಾಡಿಕೊಡುವ ಕಿರು ಪುಸ್ತಕಗಳನ್ನು ಹೊರತಂದಿದ್ದಾರೆ. ಹಾಗೂ ಬೆಂಗಳೂರಿನ ಐ.ಬಿ.ಎಚ್. ಪ್ರಕಾಶನದವರು ಕೆಲವು ಜಾತಿ ಮತ್ತು ಬುಡಕಟ್ಟುಗಳನ್ನು ಕುರಿತು ಪರಿಚಯಾತ್ಮಕವಾದ ಕೃತಿಗಳನ್ನು ಪ್ರಕಟಿಸಿದ್ದಾರೆ. ಅವುಗಳಲ್ಲಿ ಬಡಗರು, ಕಚ್ಚೆಗೌಳಿಗರು, ಸೋಲಿಗರು, ಹಸಲರು, ಮ್ಯಾಸಬೇಡರು, ಕೊರಗರು, ಬುಡುಬುಡಿಕೆಯವರು, ಸುಡುಗಾಡು ಸಿದ್ಧರು, ಕಾಡುಗೊಲ್ಲರು, ಹಾಲಕ್ಕಿ ಒಕ್ಕಲಿಗರು, ಗೊಂಡರು ಮುಂತಾದ ಬುಡಕಟ್ಟು ಸಮುದಾಯಗಳ ಬಗ್ಗೆ ಕಿರು ವಿವರಣೆ ನೀಡಿದ್ದಾರೆ.

ಎಲ್.ಜಿ. ಹಾವನೂರು ಅವರು ಸಿದ್ಧಪಡಿಸಿರುವ **''ಕರ್ನಾಟಕ ಬ್ಯಾಕ್‌ವರ್ಡ್‌ಕಮಿಶನ್ ರಿಪೋರ್ಟ್''** (೧೯೭೩)ನ ವರದಿಯಲ್ಲಿ ಹಿಂದುಳಿದ ವರ್ಗಗಳು ಸಾಮಾಜಿಕವಾಗಿ, ರಾಜಕೀಯವಾಗಿ ಅಭಿವೃದ್ಧಿಯನ್ನು ಕೈಗೊಳ್ಳಲು ಸಲಹೆಗಳನ್ನು ನೀಡಿದ್ದಾರೆ. ಅವರಿಗೆ ಉತ್ತಮ ರೀತಿಯ ಸೌಲಭ್ಯಗಳನ್ನು ಕಲ್ಪಿಸಿಕೊಡುವ ಕುರಿತು ವಿವರಿಸಿದ್ದಾರೆ. ಡಾ. ತೀ.ನಂ. ಶಂಕರನಾರಾಯಣ ಅವರು **''ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು''** ಎಂಬ ಪ್ರೌಢ ಪ್ರಬಂಧವನ್ನು ಬರೆದಿದ್ದಾರೆ. ಡಾ. ಪುರುಷೋತ್ತಮ ಬಿಳಿಮಲೆ ಅವರು **''ಸುಳ್ಯ ಪರಿಸರದ ಗೌಡರು''** ಸಾಂಸ್ಕೃತಿಕ ಅಧ್ಯಯನ ಎಂಬ ವಿಷಯವನ್ನು ಕುರಿತು ಪ್ರೌಢ ಪ್ರಬಂಧವನ್ನು ರಚಿಸಿದ್ದಾರೆ. ಇದಲ್ಲದೆ ಪ್ರೊ. ಹಿ.ಚಿ. ಬೋರಲಿಂಗಯ್ಯ ಅವರು **''ಬುಡಕಟ್ಟುಗಳ ದೃಷ್ಟಿಕೋನ''** ಎಂಬ ಪ್ರೌಢ ಪ್ರಬಂಧವನ್ನು ಬರೆದಿದ್ದಾರೆ. ಡಾ. ಕಾಳೇಗೌಡ ನಾಗವಾರ ಅವರ **''ಕಾಡುಗೊಲ್ಲರ ಜಾನಪದ ಒಂದು ಅಧ್ಯಯನ''** ಎಂಬ ಪ್ರಬಂಧದ ಮೂಲಕ ಅಧ್ಯಯನ ನಡೆಸಿದ್ದಾರೆ. ಹತ್ತೊಂಬತ್ತರ ದಶಕದಿಂದೀಚೆಗೆ ಸಮಾಜಶಾಸ್ತ್ರಜ್ಞರು, ಮಾನವ ಕುಲ ಶಾಸ್ತ್ರಜ್ಞರು, ಜಾನಪದ ವಿದ್ವಾಂಸರು ಬುಡಕಟ್ಟು ಅಧ್ಯಯನವನ್ನು ಹೆಚ್ಚಾಗಿ ಕೈಗೊಂಡಿದ್ದಾರೆ.

ಕರ್ನಾಟಕ ಸಾಹಿತ್ಯ ಅಕಾಡೆಮಿಯು ಕನ್ನಡದಲ್ಲಿ ಉಪಸಂಸ್ಕೃತಿಗಳ ಅಧ್ಯಯನವನ್ನು ೧೯೯೩ರಲ್ಲಿ ಬುಡಕಟ್ಟುಗಳನ್ನು ಕುರಿತು ವಿಶಿಷ್ಟ ರೀತಿಯಲ್ಲಿ ಅಧ್ಯಯನವನ್ನು ಕೈಗೊಂಡು ಸುಮಾರು ೩೬ ಕೃತಿಗಳನ್ನು ಹೊರತಂದಿದ್ದಾರೆ. ಬರಗೂರು ರಾಮಚಂದ್ರಪ್ಪನವರು ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿದ್ದ ಅವಧಿಯಲ್ಲಿ ಅವರ ವೈಯಕ್ತಿಕ ಪ್ರಯತ್ನ ಹಾಗೂ ಸಂಸ್ಕೃತಿಯ ಬಗೆಗಿನ ಕಾಳಜಿಯಿಂದ ಉಪಸಂಸ್ಕೃತಿ ಮಾಲೆಗಳನ್ನು ಹೊರತಂದರು. ಅವುಗಳಲ್ಲಿ-

೧. ಮ್ಯಾಸಬೇಡರ ಸಂಸ್ಕೃತಿ ೨. ಸುಡುಗಾಡು ಸಿದ್ದರ ಸಂಸ್ಕೃತಿ ೩. ಯರವರ ಸಂಸ್ಕೃತಿ ೪. ಕಾಡುಕುರುಬರ ಮತ್ತು ಜೇನು ಕುರುಬರ ಸಂಸ್ಕೃತಿ. ೫. ಹೆಳವರ ಸಂಸ್ಕೃತಿ. ೬. ಸಿದ್ದಿಯರ ಸಂಸ್ಕೃತಿ ೭. ಹಗಲು ವೇಷದವರ ಸಂಸ್ಕೃತಿ ೮. ಹಸಲರ ಸಂಸ್ಕೃತಿ ೯. ಗೊಂಡರ ಸಂಸ್ಕೃತಿ ಹೀಗೆ ಇನ್ನು ಮುಂತಾದ ಸುಮಾರು ೩೬ ಬುಡಕಟ್ಟು ಸಮುದಾಯಗಳನ್ನು ಕುರಿತು ''ಬುಡಕಟ್ಟುಗಳ ಉಪಸಂಸ್ಕೃತಿ ಮಾಲೆ'' ಎಂಬ ಶೀರ್ಷಿಕೆಯಡಿಯಲ್ಲಿ ಹೊರತಂದಿದ್ದಾರೆ. ಇದು ಬುಡಕಟ್ಟುಗಳ ಅಧ್ಯಯನದಲ್ಲಿ ಮಹತ್ವದ ಪ್ರಯತ್ನವಾಗಿದೆ. ನಂತರ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯು ಪ್ರೊ.ಎಚ್.ಜೆ. ಲಕ್ಕಪ್ಪಗೌಡ ಇವರ ಅಧ್ಯಕ್ಷತೆಯಲ್ಲಿ ಕರ್ನಾಟಕದ ಬುಡಕಟ್ಟುಗಳು ಎಂಬ ಶೀರ್ಷಿಕೆಯಲ್ಲಿ ೨ ಸಂಪುಟಗಳನ್ನು ಹೊರತಂದಿದ್ದಾರೆ. ಹಸಲರು, ಸಿದ್ದಿಯರು, ಗೌಳಿಗರು, ಗೌಡಲು, ಮುಕ್ರಿಯರು, ಯರವರು, ಮಸ್ಸರು, ಹಕ್ಕಿ-ಪಿಕ್ಕಿಯವರು, ಗಾಮೊಕ್ಕಲು, ಕುಡುಬಿಯರು ಇನ್ನೂ ಮುಂತಾದ ಕರ್ನಾಟಕದ ಇಪ್ಪತ್ತು ಬುಡಕಟ್ಟುಗಳ ಬಗ್ಗೆ ಅಧ್ಯಯನವನ್ನು ನಡೆಸಿದ್ದಾರೆ.

೧೯೦೧ರಲ್ಲಿ ಪ್ರಕಟವಾದ ಮದ್ರಾಸ್ ಸೆನ್ಸಸ್ ರಿಪೋರ್ಟ್‌ನಲ್ಲಿ ಮೈಸೂರು ಜಿಲ್ಲೆಯ ಎಲ್ಲಾ ಜಾತಿ ಹಾಗೂ ಬುಡಕಟ್ಟುಗಳ ಬಗ್ಗೆ ಮಾಹಿತಿಗಳಿವೆ.

ಭಾರತ ಸರ್ಕಾರವು ಕರ್ನಾಟಕದಲ್ಲಿ ಸುಮಾರು ೬೩ ಪರಿಶಿಷ್ಟ ಬುಡಕಟ್ಟುಗಳಿವೆ ಎಂಬುದಾಗಿ ಸೂಚಿಸುತ್ತದೆ. ಈ ಪಟ್ಟಿಗೆ ಸೇರದಿರುವ ಕೆಲವು ಬುಡಕಟ್ಟುಗಳನ್ನು ''ಅಲೆಮಾರಿ ಬುಡಕಟ್ಟು''ಗಳೆಂದು (Nomadic Tribes) ಇನ್ನೂ ಕೆಲವು ಬುಡಕಟ್ಟುಗಳನ್ನು ''ಅರೆ ಅಲೆಮಾರಿ ಬುಡಕಟ್ಟು''ಗಳೆಂದು (Seminomadic Tribes) ಇವುಗಳನ್ನು ಇತರೆ ಹಿಂದುಳಿದ ಬುಡಕಟ್ಟುಗಳೆಂದು ಪರಿಗಣಿಸಲಾಗಿದೆ. ಸುಮಾರು ಎರಡು ಶತಮಾನಗಳಿಂದಲೂ ಒಡಿಗ ಬುಡಕಟ್ಟು ಸಮುದಾಯವು ಮೈಸೂರು ಜಿಲ್ಲೆಯ ಅರಣ್ಯ ಪ್ರದೇಶದಲ್ಲಿ ವಾಸಿಸುತ್ತಿದ್ದಾರೆ. ಆದರೆ ಈ ಸಮುದಾಯದ ಬಗ್ಗೆ ಈವರೆಗೆ ಪ್ರಕಟಗೊಂಡಿರುವ ಯಾವ ಗ್ರಂಥಗಳಲ್ಲಿಯು ಒಂದು ಚಿಕ್ಕ ಮಾಹಿತಿಯನ್ನು ಉಲ್ಲೇಖಿಸಿಲ್ಲ. 'ದಿ ಮೈಸೂರು ಕ್ಯಾಸ್ಟ್ ಆ್ಯಂಡ್ ಟ್ರೈಬ್ಸ್'ನ ನಾಲ್ಕು ಸಂಪುಟಗಳಲ್ಲಾಗಲಿ, 'ಕ್ಯಾಸ್ಟ್ ಆ್ಯಂಡ್ ಟ್ರೈಬ್ಸ್ ಆಫ್ ಸೌತ್ ಇಂಡಿಯಾ'ದ ಏಳು ಸಂಪುಟಗಳಲ್ಲಾಗಲಿ, ಟ್ರೈಬ್ಸ್ ಆಫ್ ಮೈಸೂರು ಮತ್ತು ಉಪಸಂಸ್ಕೃತಿ ಮಾಲೆಗಳಲ್ಲಾಗಲಿ ಇತರೆ ಯಾವ ಗ್ರಂಥಗಳಲ್ಲಿಯೂ ಮಾಹಿತಿ ದೊರೆಯುವುದಿಲ್ಲ.

೧೯೦೧ರ ಮದ್ರಾಸ್ ಜನಗಣತಿಯಲ್ಲಿ ಹಾಗೂ ೧೯೬೧ರ ಜನಗಣತಿಯ ''ಎಥ್ನಾಲಜಿಕಲ್ ನೋಟ್ಸ್ ಆಫ್ ಷೆಡೂಲ್ಡ್ ಟ್ರೈಬ್ಸ್''ನಲ್ಲಾಗಲಿ ಮಾಹಿತಿ ಇರುವುದಿಲ್ಲ. ಕರ್ನಾಟಕ ರಾಜ್ಯ ಗೆಝೆಟಿಯರ್ ಮೊದಲನೆಯ ಭಾಗದಲ್ಲಿ

ಕರ್ನಾಟಕದ ಕೆಲವು ಜಾತಿ ಮತ್ತು ಬಡುಕಟ್ಟುಗಳ ಪಟ್ಟಿಯಲ್ಲಿ ''ಒಡಿಗ'' ಎಂಬ ಪದ ಬಳಕೆಯ ಮಾಹಿತಿ ಮಾತ್ರ ಇದೆ. ಉಳಿದಂತೆ ಈ ಸಮುದಾಯವನ್ನು ಕುರಿತು ಮಾಹಿತಿ ಇಲ್ಲದಿರುವುದು ತಿಳಿಯುತ್ತದೆ.

**ಅಡಿ ಟಿಪ್ಪಣಿಗಳು**

೧ ಬೈರೇಗೌಡ ಎಂ : ಜಾನಪದ ವೈವಿಧ್ಯ : ಬುಡಕಟ್ಟು ಮತ್ತು ಜಾನಪದ ಸಂಬಂಧಿ ಲೇಖನಗಳ ಸಂಕಲನ : ಶಕ್ತಿ ಮುದ್ರಣ ಮತ್ತು ಪ್ರಕಾಶನ : ರಾಜಾಜಿನಗರ : ಬೆಂಗಳೂರು : ೧೯೯೯ (ಉದೃತ).

೨ ಅದೇ (ಉದೃತ)

೩ ಸೂರ್ಯನಾಥ ಕಾಮತ್ : ಕರ್ನಾಟಕ ರಾಜ್ಯ ಗೆಝೆಟಿಯರ್ ಭಾಗ-೧, ಬೆಂಗಳೂರು : ೧೯೮೪.

೪ ಖಂಡೋಬಾ ಪಿ.ಕೆ. : ಕರ್ನಾಟಕದ ಲಂಬಾಣಿಗಳು ಒಂದು ಸಾಂಸ್ಕೃತಿಕ ಅಧ್ಯಯನ : ದಿ. ತೇಜಸಿಂಗರಾಠೋಡ್. ಮೆಮೋರಿಯಲ್ ಟ್ರಸ್ಟ್ : ಗುಲಬರ್ಗಾ : ೧೯೯೧.

೫ ಶಂಕರ ನಾರಾಯಣ ತೀ.ನಂ. : ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು : ೧೯೮೨.

೬ Census Report of Madras : 1901

## ಅಧ್ಯಾಯ - ೨

# ಹಿನ್ನೆಲೆ

### ಪ್ರವೇಶ

## ಪ್ರವೇಶ

ಬುಡಕಟ್ಟು ಸಮುದಾಯಗಳು ಸಾಮಾನ್ಯವಾಗಿ ಬೆಟ್ಟಗುಡ್ಡ, ಅರಣ್ಯ ಪ್ರದೇಶದಲ್ಲಿ ವಾಸಿಸುತ್ತವೆ. ಅಲ್ಲದೇ ಇತ್ತೀಚೆಗೆ ಊರುಗಳಲ್ಲಿಯೂ ವಾಸಿಸುತ್ತಿದ್ದಾರೆ. ಕಾಡು ಮತ್ತು ನಾಡುಗಳಲ್ಲಿ ನೆಲೆಸುವಿಕೆಯಿಂದಾಗಿ ಅವರ ಸಂಸ್ಕೃತಿಯಲ್ಲಿ ಕೆಲವು ವೈವಿಧ್ಯತೆಗಳು ಅಥವಾ ಭಿನ್ನ ಅಂಶಗಳನ್ನು ಗುರುತಿಸಲು ಸಾಧ್ಯವಿದೆ. ಇದಕ್ಕೆ ಬಹುಮುಖ್ಯವಾಗಿ ಭೌಗೋಳಿಕ ಪರಿಸರವು ಕಾರಣವಾಗಿರುತ್ತದೆ. ಅಂದರೆ ಆಯಾ ಭೌಗೋಳಿಕ ಪರಸರದ ವೈವಿಧ್ಯತೆಯೊಂದಿಗೆ ಸಂಸ್ಕೃತಿಯೂ ಕೆಲವು ಅಂಶಗಳಿಂದ ಸ್ಥಿತ್ಯಂತರ ಗುಣವನ್ನು ಪಡೆಯುತ್ತದೆ. ಕಾಡಿನಲ್ಲಿ ವಾಸಿಸುತ್ತಿರುವ ಕೆಲವು ಬುಡಕಟ್ಟು ಸಮುದಾಯಗಳಿಗೆ ಆಧುನಿಕತೆಯ ಅಥವಾ ನಾಗರಿಕತೆಯ ಗಾಢವಾದ ಪ್ರೇರಣೆಯಿಲ್ಲದೇ ತಮ್ಮ ಸಂಸ್ಕೃತಿಯಲ್ಲಿ ಮೂಲ ಗುಣ ಮತ್ತು ಆಚರಣೆಗಳನ್ನು ಹಾಗೆಯೇ ಉಳಿಸಿಕೊಂಡಿವೆ. ನಾಗರಿಕರ ಪ್ರಭಾವವಿರುವ ಸಮುದಾಯಗಳಲ್ಲಿ ಆಚರಣೆ ಮುಂತಾದವುಗಳಲ್ಲಿ ಕೊಂಚ ಭಿನ್ನ ನೆಲೆಯಲ್ಲಿ ಸಂಸ್ಕೃತಿಯನ್ನು ರೂಢಿಸಿಕೊಂಡಿರುವುದು ತಿಳಿಯುತ್ತದೆ. ಅಲ್ಲದೆ ಒಂದು ಭೌಗೋಳಿಕ, ಭಾಷಾ ನೆಲೆಯಿಂದ ಮತ್ತೊಂದು ಭಾಷಾ ಭೂಗೋಳದಲ್ಲಿ ವಾಸಿಸುವ ಬುಡಕಟ್ಟು ಸಮುದಾಯಗಳಿಗೆ ಅಷ್ಟಾಗಿ ವ್ಯತ್ಯಾಸವಿಲ್ಲವಾದರೂ ಆಯಾ ಪ್ರಾದೇಶಿಕ ಸಂಸ್ಕೃತಿಯು ಅವರ ಮೇಲೆ ಪ್ರಭಾವ ಬೀರುತ್ತದೆ. ಒಡಿಗ ಸಮುದಾಯವು ಮೈಸೂರು ವೈನಾಡುಗಳಲ್ಲಿ ವಾಸಿಸುವುದರಿಂದ ಈ ಬಗೆಯ ಮಾರ್ಪಾಡುಗಳಿಗೆ ಕೊಂಚ ಮಟ್ಟಿಗೆ ಒಳಗಾಗಿದೆ.

ಈ ಅಧ್ಯಾಯದಲ್ಲಿ ಮುಖ್ಯವಾಗಿ ಒಡಿಗ ಸಮುದಾಯ ವಾಸಿಸುವ ಭೌಗೋಳಿಕ ಪರಿಸರದ ಹಿನ್ನೆಲೆ, 'ಒಡಿಗ' ಎಂಬ ಪದದ ನಿಷ್ಪತ್ತಿಯ ಚರ್ಚೆ, ಒಡಿಗರ ಮೂಲ, ಇವರ ಜನಸಂಖ್ಯೆ ಹಾಗೂ ಈ ಸಮುದಾಯದ ಹಿನ್ನೆಲೆಯನ್ನು ಗಮನದಲ್ಲಿಟ್ಟುಕೊಳ್ಳಲಾಗಿದೆ.

### ೨ : ೧ ಭೌಗೋಳಿಕ ಮತ್ತು ಸಾಂಸ್ಕೃತಿಕ ಪರಿಸರದ ಹಿನ್ನೆಲೆ

ಕರ್ನಾಟಕ ರಾಜ್ಯವು ಕನ್ನಡ ಭಾಷೆಯನ್ನು ಪ್ರಧಾನವಾಗಿ ಮಾತನಾಡುವ ಜನರು ವಾಸವಾಗಿರುವ ಪ್ರದೇಶವಾಗಿದ್ದು, ಭಾರತದ ಪರ್ಯಾಯ ದ್ವೀಪದ ಪಶ್ಚಿಮ-ಮಧ್ಯಭಾಗದಲ್ಲಿದೆ. ಇದರಲ್ಲಿ ಒಳಗೊಂಡಿರುವ ಪ್ರದೇಶಗಳೆಂದರೆ ಅರಬ್ಬಿ ಸಮುದ್ರಕ್ಕೂ, ಪಶ್ಚಿಮಘಟ್ಟಗಳಿಗೂ ಮಧ್ಯೆ ಸುಮಾರು ೪೦೦ ಕಿ.ಮೀ. ಉದ್ದ ಸುಂದರ ಮತ್ತು ಮನೋಹರವಾದ ಕರಾವಳಿ ಪ್ರದೇಶ. ನಿತ್ಯಹರಿದ್ವರ್ಣದ ಕಾಡು, ಎತ್ತರವಾದ ಪರ್ವತ ಶ್ರೇಣಿಗಳಿಂದಲೂ ಕೂಡಿ ರಮಣೀಯವಾಗಿ ತೋರುವ ಪ್ರದೇಶವೇ ಪಶ್ಚಿಮ ಘಟ್ಟಗಳ ಪ್ರದೇಶ.

ಪುರಾತನ ರಾಷ್ಟ್ರ ವಿಶಿಷ್ಟ ಸಂಸ್ಕೃತಿಯನ್ನು ಹೊಂದಿದ ಕನ್ನಡಿಗರು ವಾಸಿಸುವ ನಾಡನ್ನು ಕರ್ನಾಟಕ ಎಂಬ ಹೆಸರಿನಿಂದ ಕರೆಯಲಾಗುತ್ತದೆ. ದಕ್ಷಿಣ ಭಾರತದ ಮಧ್ಯವರ್ತಿ ಪ್ರದೇಶದಲ್ಲಿ ಸ್ವಲ್ಪ ಪಶ್ಚಿಮ ದಿಕ್ಕಿಗೆ ಅರಬ್ಬಿಸಮುದ್ರಕ್ಕೆ ಹೊಂದಿಕೊಂಡಂತಿರುವ ಕರ್ನಾಟಕ ಉತ್ತರ ಅಕ್ಷಾಂಶ ೧೧°-೩೦° ನಿಂದ ೧೮°-೪೫°ವರೆಗೂ ಪೂರ್ವರೇಖಾಂಶ ೭೪°-೧೨° ನಿಂದ ೭೮°-೩೦°ವರೆಗೂ ಹಬ್ಬಿವೆ. ಪೂರ್ವಪಶ್ಚಿಮವಾಗಿ ಸುಮಾರು ೪೦೦ ಕಿ.ಮೀ. ಮತ್ತು ಉತ್ತರ ದಕ್ಷಿಣವಾಗಿ

೭೭೦ ಕಿ.ಮೀ. ಇದೆ. ರಾಜ್ಯದ ಮೇರೆಗಳು ವಾಯುವ್ಯ ಮತ್ತು ಉತ್ತರ ದಿಕ್ಕುಗಳಲ್ಲಿ ಮಹಾರಾಷ್ಟ್ರ, ಪೂರ್ವದಲ್ಲಿ ಆಂಧ್ರಪ್ರದೇಶ, ಆಗ್ನೇಯ ದಕ್ಷಿಣಗಳಲ್ಲಿ ತಮಿಳುನಾಡು, ನೈಋತ್ಯದಲ್ಲಿ ಕೇರಳ, ಪಶ್ಚಿಮದಲ್ಲಿ ಅರಬ್ಬಿ ಸಮುದ್ರದಿಂದ ಕೂಡಿದೆ.

ಕರ್ನಾಟಕವು ೧,೯೧,೭೭೩ ಚ.ಕಿ.ಮೀ.ಗಳಷ್ಟು ವಿಸ್ತೀರ್ಣವನ್ನು ಹೊಂದಿದೆ. ದೇಶದಲ್ಲಿ ಎಂಟನೆಯ ಸ್ಥಾನವನ್ನು ಹೊಂದಿದೆ. ಮೊದಲು ''ಮೈಸೂರು ರಾಜ್ಯ''ವೆಂದು ಕರೆಯಲ್ಪಡುತ್ತಿದ್ದು, ೧೯೭೩ರ ನವೆಂಬರ್ ಒಂದರಂದು ಕರ್ನಾಟಕ ರಾಜ್ಯವೆಂದು ಅಧಿಕೃತವಾಗಿ ಘೋಷಿಸಲ್ಪಟ್ಟಿತ್ತು ರಾಜ್ಯದಲ್ಲಿ ಕನ್ನಡ ಮಾತೃಭಾಷೆ, ರಾಜಧಾನಿ ಬೆಂಗಳೂರು. ಕರ್ನಾಟಕ ರಾಜ್ಯವು ವೈವಿಧ್ಯಮಯವಾದ ಇತಿಹಾಸವನ್ನು ಹೊಂದಿದೆ. ಕದಂಬರು, ಶಾತವಾಹನರು, ಗಂಗರು, ವಿಜಯನಗರದ ಅರಸರು, ಹೊಯ್ಸಳರು, ಪಾಳೆಯಗಾರರು, ಮೈಸೂರು ರಾಜರು ಮುಂತಾದ ಪ್ರಸಿದ್ಧ ರಾಜಮನೆತನಗಳ ಆಡಳಿತಕ್ಕೆ ಒಳಪಟ್ಟಿದ್ದ ಈ ರಾಜ್ಯವು ಸುವರ್ಣಯುಗವನ್ನು ಸಹ ಕಂಡಿತ್ತು. ಕಲೆ, ಸಾಹಿತ್ಯದ ನೆಲೆಬೀಡು. ಇತಿಹಾಸ ಪ್ರಸಿದ್ಧ ದೇವಾಲಯಗಳು ಹಾಗೂ ಪುರಾಣ ಪುರುಷರು ಜನ್ಮವಿತ್ತ ನಾಡು. ಮಹಾಭಾರತ, ರಾಮಾಯಣದ ಕಾಲದಿಂದಲೂ ಈ ನಾಡಿನ ಬಗ್ಗೆ ಐತಿಹ್ಯಗಳುಂಟು. ಕ್ರಿಸ್ತಪೂರ್ವದಲ್ಲಿ ಅಶೋಕನ ಆಡಳಿತದಲ್ಲಿ ಚಿತ್ರದುರ್ಗ, ರಾಯಚೂರು, ತುಮಕೂರು ಮುಂತಾದ ಕಡೆ ದೊರೆತಿರುವ ಶಾಸನಗಳು ಸಹ ಈ ನಾಡಿನ ಬಗ್ಗೆ ತಿಳಿಸುತ್ತವೆ. ಇತಿಹಾಸ ಪ್ರಸಿದ್ಧ ರಾಜಮನೆತನಗಳು ಈ ನಾಡನ್ನು ಆಳ್ವಿಕೆ ಮಾಡಿವೆ. ಹಾಗೆಯೇ ಸ್ವಾತಂತ್ರ್ಯಕ್ಕೆ ಹೋರಾಡಿದ ಕನ್ನಡದ ಕಲಿಗಳು ಸಹ ಇದ್ದಾರೆ. ಪ್ರಸಿದ್ಧ ಕವಿಗಳು ನೆಲೆಸಿದ್ದ ನಾಡು. ಕದಂಬರ ಆಳ್ವಿಕೆಯಲ್ಲಿನ ಹಲ್ಮಿಡಿ ಶಾಸನವು ಕನ್ನಡದ ಮೊಟ್ಟ ಮೊದಲ ಶಾಸನ.

ಕರ್ನಾಟಕದ ಪ್ರಮುಖ ನದಿಗಳು ಕಾವೇರಿ, ತುಂಗಭದ್ರ, ಕೃಷ್ಣಾ, ಗೋದಾವರಿ, ಪಶ್ಚಿಮವಾಹಿನಿ ನದಿಗಳು ಇತಿಹಾಸ ಪ್ರಸಿದ್ಧವಾದ ಜೋಗ್‌ಫಾಲ್ಸ್ ಹಾಗೂ ಶಿವನಸಮುದ್ರ, ಗಗನಚುಕ್ಕಿ, ಭರಚುಕ್ಕಿ ಆಣೆಕಟ್ಟುಗಳಿವೆ. ಕಪ್ಪುಮಣ್ಣು, ಕೆಂಪುಮಿಶ್ರಿತ ಮರಳುಮಣ್ಣು, ಕೆಂಪುಮಣ್ಣು ಫಲವತ್ತತೆಯನ್ನು ಹೊಂದಿದೆ. ಈ ರಾಜ್ಯದಲ್ಲಿ ಬೆಳೆಯುವ ಮುಖ್ಯ ಆಹಾರ ಬೆಳೆಗಳು ಭತ್ತ, ರಾಗಿ, ಜೋಳ, ಮುಸುಕಿನ ಜೋಳ, ಸಜ್ಜೆ, ಬಾರ್ಲಿ, ನವಣೆ, ದ್ವಿದಳಧಾನ್ಯಗಳು ಅವರೆ, ತೊಗರಿಬೇಳೆ, ಹೆಸರು, ಅಲಸಂದಿ, ಉದ್ದು, ಹುರುಳಿ, ಕಡಲೆಕಾಯಿ ಮತ್ತು ಆಲೂಗಡ್ಡೆ, ಮೆಣಸಿನಕಾಯಿ, ಈರುಳ್ಳಿ, ಬೆಳ್ಳುಳ್ಳಿ ಮುಂತಾದ ತರಕಾರಿಗಳನ್ನು ಬೆಳೆಯುತ್ತಾರೆ. ತೋಟದ ಬೆಳೆಗಳು ತೆಂಗು, ಮಾವು, ಜಂಬೀರ, ಹಲಸು, ಬಾಳೆ, ದ್ರಾಕ್ಷಿ, ಸೀಬೆ, ಸಪೋಟ; ಅನಾನಸ್, ಕಾಫಿ, ಟೀ, ಅಡಿಕೆ, ಹತ್ತಿ, ತಂಬಾಕು ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ರಾಜ್ಯವು ಚಿನ್ನ, ಕಬ್ಬಿಣ, ಮ್ಯಾಂಗನೀಸ್, ಕ್ರೋಮೈಟ್, ತಾಮ್ರ, ಸೀಸ ಮುಂತಾದ ಖನಿಜ ನಿಕ್ಷೇಪಗಳಿಂದ ಕೂಡಿದೆ.

ಇತಿಹಾಸ ಪ್ರಸಿದ್ಧ ದೇವಾಲಯಗಳು ಬಾದಾಮಿ, ಐಹೊಳೆ, ಪಟ್ಟದಕಲ್ಲು, ಬೇಲೂರು, ಹಳೇಬೀಡು, ಹಂಪಿ, ಸೋಮನಾಥಪುರ ಮುಂತಾದ ಕಡೆಗಳಲ್ಲಿ ಕಂಡುಬರುತ್ತವೆ. ರಾಜ್ಯದಲ್ಲಿ ಪ್ರಸಿದ್ಧ ರಾಜರು ತಮ್ಮ ಆಳ್ವಿಕೆಯ ಕಾಲದಲ್ಲಿ ದೇವಾಲಯ, ವಾಸ್ತುಕಲೆ ಹಾಗೂ ಸಾಹಿತ್ಯದ ಹೊಳೆಯನ್ನು ಹರಿಸಿದ್ದಾರೆ.

ಕರ್ನಾಟಕ, ಕನ್ನಡನಾಡು, ಕನ್ನಾಡು ಎಂಬ ಪ್ರಖ್ಯಾತವಾಗಿದ್ದ ಈ ನಾಡಿನ ಭಾಗಗಳು ಪ್ರಾಚೀನ ಕಾಲದಲ್ಲಿ ಗಂಗವಾಡಿ, ನೊಳಂಬವಾಡಿ, ಕುಂತಳ, ಎಡೆನಾಡು, ತೊರೆನಾಡು, ಮರುಕೆರೆ, ವಿಷಯ ಇತ್ಯಾದಿ ನೂರಾರು ವಿಭಾಗಗಳಾಗಿ ವಿಂಗಡಿತವಾಗಿತ್ತಲ್ಲದೆ ಐತಿಹಾಸಿಕ ಕಾರಣಗಳಿಂದಾಗಿ ಹಲವು ರಾಜವಂಶದವರ ಆಡಳಿತದಲ್ಲಿ ಹಂಚಿಹೋಗಿತ್ತು.

ಕರ್ನಾಟಕ ಹೆಸರಿನ ಮೂಲವು ಕರುನಾಡು ಎಂದರೆ ಎತ್ತರವಾದ ಪ್ರದೇಶ ಹಾಗೂ ಕರಿನಾಡು, ಕಪ್ಪುನೆಲದ ಭೂಮಿ. ಕಪ್ಪು ಮಣ್ಣಿನ ಭೂಮಿ ಆದ್ದರಿಂದ ಕರನಾಡು (ಕಪ್ಪುನಾಡು) ಎಂಬುದು ಕರ್ನಾಟಕದ ಮೂಲರೂಪ. ಕರ+ನಾಟ್+ಅಗಂ ಎಂದರೆ ಕಪ್ಪುನಾಡಿನ ಒಳಭಾಗ ಎಂದು ಹೇಳುತ್ತಾರೆ. ಕರುನಡಂ : ಕರ್ಣಾಟ ಕರುನಡಂ ಎಂಬುದು. ಕನ್ನಡಂ ಎಂಬುದು ತಮಿಳು ಲಕ್ಷಣ ಗ್ರಂಥಗಳ ವೃತ್ತಿಗಳಲ್ಲಿ ಉಕ್ತವಾಗಿದೆ. ತಮಿಳಿನಲ್ಲಿ ಕರು ಎಂದರೆ ಬೆಟ್ಟ ಎಂದರ್ಥ. ಕೀಳ್ನಾಡಿನವರಾದ ತಮಿಳರು ಮೇಲ್ನಾಡನ್ನು ಕರುನಾಡು-ಕರುನಡ ಎಂದು ಕರೆದಿರಬಹುದು. ಕಮ್ಮಿತು+ನಡೆ (ಕಂ+ನಡೆ>ಕನ್ನಡ) ಕರಂ-ಕರು, ಕಡು ಎಂಬುವು ದೊಡ್ಡ, ವಿಸ್ತಾರವಾದ, ಮಹಾ ಎಂಬ ಅರ್ಥದ ಪದಗಳು. ಕನ್ನಡ ಸಮಾಸ ಪದವೇ ಸಂಸ್ಕೃತದಲ್ಲಿ ಕರ್ನಾಟಕ ಎಂದು ಆಗಿರಬೇಕು.

ಮೊಹೆಂಜೋದಾರೋ ಚಿತ್ರಲಿಪಿಯ ಸಂಕೇತವನ್ನು ಗಮನಿಸಿದರೆ ಕಣ್+ನೀರ್ ಪದದ ಸಂಸ್ಕೃತ ರೂಪ ಕರ್ನಾಟಕ ಆಗಿರಬಹುದು. ಅಡಿಯಲ್ಲಿ ಕಣ್ಣುಳ್ಳವರು ಯಾರೋ ಅವರು ಕನ್(ಣ್)+ಅಡಿಗರ್ ಅರ್ಥಾತ್ ಕನ್ನಡಿಗರು. ಕನ್ನಡದ ರಾಜ ಕುಲಕ್ಕೆ ಕದಂಬ ಅಥವಾ ಕರಂಬ ಎಂಬ ಹೆಸರಿದೆ. ಆಕರ್ ಅಲ್ಲವೆ ಕನ್ ಎಂಬ ದಸ್ಯು ವರ್ಗದಿಂದ ಕನ್ನಡ ಎಂಬ ಹೆಸರಾಗಿರಬಹುದು.

ತಮಿಳು ಪ್ರಾಚೀನ ಕೃತಿಗಳಾದ ತೋಲ್ಕಾಪ್ಪಿಯಂ ಮತ್ತು ಶಿಲಪ್ಪದಿಗಾರಂಗಳಲ್ಲಿ ಈ ಪದವನ್ನು ಬಳಸಿದೆ. ಕರುನಾಟ್ ಎಂದು ಈ ನಾಡನ್ನು ಅಲ್ಲಿ ಕರೆಯಲಾಗಿದೆ. ಈ ಔಚಿತ್ಯ ಪೂರ್ಣವಾದ ಹೆಸರನ್ನು ತಮಿಳರು ನೀಡುತ್ತಾರೆ. ಅವರ ಪ್ರಕಾರ ಕರ್ನಾಟಕವು ಪೂರ್ವ ಘಟ್ಟಗಳ ಮೇಲಕ್ಕಿರುವ ದೊಡ್ಡದಾದ ಅಥವಾ ಎತ್ತರವಾದ ಪ್ರದೇಶವಾಗಿದೆ. ಕರುನಾಟ್ ಅಥವಾ ಎತ್ತರವಾದ ಪ್ರದೇಶ ಎಂಬ ಶಬ್ದವು ಸಂಸ್ಕೃತದಲ್ಲಿಯು ಧ್ವನಿತವಾಗಿದೆ. ಮಹಾಭಾರತದ ಪುಣೆ ಆವೃತ್ತಿಯಲ್ಲಿ ಕರ್ನಾಟಕ ಎಂಬ ಪದಕ್ಕೆ ಸಂವಾದಿಯಾಗಿ ಉನ್ನತ್ಯಕ ಎಂಬುದನ್ನು ಬಳಸಿದೆ. (ಕುಂಬಕೋಣಂ ಪ್ರತಿಯಲ್ಲಿ ಕರ್ನಾಟಕ ಎಂಬ ಶಬ್ದವು ಉಲ್ಲೇಖವಾಗಿರುವ ಎಡೆಯೆಲ್ಲೆಲ್ಲ ಪುಣೆಯ ಪ್ರತಿಯಲ್ಲಿ 'ಉನ್ನತ್ಯಕ' ಎಂದು ಪ್ರಯೋಗಿಸಲಾಗಿದೆ). ಹೀಗೆ ಕರ್ನಾಟಕ ಎಂಬ ಶಬ್ದವು ಕರುನಾಟ್ ಎಂಬ ಶಬ್ದದಿಂದ ನಿಷ್ಪನ್ನವಾಗಿದೆ. ಇದರ ಅರ್ಥ ಉನ್ನತ್ಯಕ ಅಥವಾ ಎತ್ತರವಾದ ಭೂಮಿ ಎಂದು ಕರ್ನಾಟಕದ ಪ್ರಸ್ತಾಪವೂ ಮಹಾಭಾರತದಲ್ಲಿಯೂ ಶೂದ್ರಕನ 'ಮೃಚ್ಛಕಟಿಕ'ದಲ್ಲಿಯೂ ಮತ್ತು ವರಹಾಮಿಹಿರನ 'ಬೃಹತ್‌ಸಂಹಿತೆ'ಯಲ್ಲಿಯೂ ಬಂದಿದೆ. ಹೀಗೆ ಸುಮಾರು ೩೦೦೦ ವರ್ಷಗಳ ಹಿಂದಿನಿಂದಲೂ ಈ ಶಬ್ದ ಪ್ರಚುರದಲ್ಲಿರುವುದು ತಿಳಿಯುತ್ತದೆ. ಬಾದಾಮಿ ಚಾಳುಕ್ಯರ ಸೈನ್ಯಕ್ಕೆ ಹಿಂದೆಯೇ ಹೇಳಿರುವಂತೆ 'ಕರ್ಣಾಟ ಬಲ' ಎಂದು ಹೆಸರಿತ್ತು ಮತ್ತು ಜಾವಾದಲ್ಲಿನ ೧೨ನೆಯ ಶತಕದ ಒಂದು ಶಾಸನದಲ್ಲಿ ಕರ್ಣಾಟಕವನ್ನು ಉಲ್ಲೇಖಿಸಲಾಗಿದೆ.

ಕರ್ನಾಟಕ ರಾಜ್ಯದಲ್ಲಿ ಕನ್ನಡವು ಆಡಳಿತ ಭಾಷೆ. ಕಲೆ, ವಿಜ್ಞಾನ, ವಾಣಿಜ್ಯವು ಸೇರಿದಂತೆ ಹಲವು ಪದವಿ ಕಾಲೇಜುಗಳು, ತಾಂತ್ರಿಕ ಕಾಲೇಜುಗಳು, ವೈದ್ಯಕೀಯ ಕಾಲೇಜುಗಳು ಮತ್ತು ಕೃಷಿ ವಿಶ್ವವಿದ್ಯಾಲಯಗಳು ಆರು ಸ್ನಾತಕೋತ್ತರ ವಿಶ್ವವಿದ್ಯಾಲಯಗಳು ಸೇರಿದಂತೆ ಶಿಕ್ಷಣದಲ್ಲಿ ತುಂಬ ಮಹತ್ವವನ್ನು ಹೊಂದಿದೆ. ಅನೇಕ ವೃತ್ತಿಪರ ಕಾಲೇಜುಗಳು ಸಹ ಇವೆ. ರಾಜ್ಯದಲ್ಲಿ ಒಟ್ಟಾರೆ ಶೇಕಡ (೬೮%)ರಷ್ಟು ಅಕ್ಷರಸ್ಥರನ್ನು ಹೊಂದಿದೆ.[೧]

### ೨ : ೧ : ೧ ಮೈಸೂರು

ನಮ್ಮ ರಾಜ್ಯಕ್ಕೆ ಕರ್ನಾಟಕ ಎಂದು ನಾಮಕರಣವಾದದ್ದು ೧೯೭೩ರಲ್ಲಿ. ಅಲ್ಲಿಯವರೆಗೆ ಈ ರಾಜ್ಯವನ್ನು ಮೈಸೂರು ರಾಜ್ಯವೆಂದು ಕರೆಯಲಾಗುತ್ತಿತ್ತು. ಈಗ ಮೈಸೂರು ಎನ್ನುವ ಹೆಸರು ಒಂದು ಜಿಲ್ಲೆಗೆ ಮಾತ್ರ ಅನ್ವಯಿಸುತ್ತದೆ. ಮೈಸೂರು ಜಿಲ್ಲೆ ಕರ್ನಾಟಕ ರಾಜ್ಯದ ದಕ್ಷಿಣ ತುದಿಗೆ ಇದೆ. ಮೈಸೂರು ನಗರವೇ ಜಿಲ್ಲಾ ಕೇಂದ್ರ.

ರಾಜ್ಯದ ದಕ್ಷಿಣದ ಅಂಚಿನಲ್ಲಿರುವ ಈ ಜಿಲ್ಲೆಯನ್ನು ಪೂರ್ವ ಆಗ್ನೇಯ ಮತ್ತು ದಕ್ಷಿಣದಲ್ಲಿ ತಮಿಳುನಾಡು, ನೈಋತ್ಯದಲ್ಲಿ ಕೇರಳ ರಾಜ್ಯ, ಪಶ್ಚಿಮದಲ್ಲಿ ಕೊಡಗು ಜಿಲ್ಲೆ, ಉತ್ತರದಲ್ಲಿ ಹಾಸನ, ಮಂಡ್ಯ ಮತ್ತು ಬೆಂಗಳೂರು ಜಿಲ್ಲೆಗಳು ಸುತ್ತುವರಿದಿವೆ. ಈ ಜಿಲ್ಲೆಯ ಉತ್ತರ ಅಕ್ಷಾಂಶ ೧೧°-೩೦° ನಿಂದ ೧೨°-೪೫° ಪೂರ್ವರೇಖಾಂಶ ೭೫°-೪೫° ನಿಂದ ೭೭°-೪೫° ರವರೆಗೆ ಹರಡಿದೆ. ಜಿಲ್ಲೆಯು ೭ ತಾಲ್ಲೂಕುಗಳಿಂದ ಕೂಡಿದೆ. ಹಾಗೆಯೇ ಜಿಲ್ಲೆಯ ಒಟ್ಟು ವಿಸ್ತೀರ್ಣ ೧೧.೯೪೭ ಚ.ಕಿ.ಮೀ. ಹರಡಿದೆ.

ಈ ಜಿಲ್ಲೆಯ ಮುಖ್ಯ ನಗರವೆನಿಸಿದ ಮೈಸೂರಿಗೆ ಮೈಸೂರು ಜಿಲ್ಲೆ ಎಂಬ ಹೆಸರು ಬಂದಿದೆ. 'ದೀಪವಂಶ' ಎಂಬ ಬೌದ್ಧ ಗ್ರಂಥವೊಂದರಲ್ಲಿ ಪ್ರಸ್ತಾಪಿತವಾಗಿರುವ ಮಹಿಷರಾಷ್ಟ್ರ ಎಂಬುದು ಇದೇ ಮೈಸೂರು ಎನ್ನುತ್ತಾರೆ. ತಮಿಳು ಪ್ರಾಚೀನ ಗ್ರಂಥಗಳಲ್ಲಿ 'ಎರುವೈನಾಡು' ಎಂದು ಪ್ರಸ್ತಾಪಿತವಾಗಿರುವುದು ಮೈಸೂರು ಎಂಬ ಅಭಿಪ್ರಾಯವೂ ಇದೆ. ಮಂಡ್ಯದ ಕಡಲೂರಿನಲ್ಲಿ ಕ್ರಿ.ಶ. ೮೬೨ರ ಕಾಲದ ತಾಮ್ರ ಶಾಸನವೊಂದು ದೊರಕಿದ್ದು ಅದರಲ್ಲಿ ಈ ಊರನ್ನು ಮೇಸೂರು ಎನ್ನಲಾಗಿದೆ. ಮಹಿಷ ಅಂದರೆ ಕೋಣನ ತಲೆಯ ರಾಕ್ಷಸನೊಬ್ಬನು ಈ ಸ್ಥಳದಲ್ಲಿ ಊರದೇವತೆಯಾದ ಚಾಮುಂಡೇಶ್ವರಿಯಿಂದ ಹತನಾಗಿದ್ದರಿಂದ ಊರಿಗೆ ಈ ಹೆಸರು ಬರಲು ಕಾರಣವಾಯಿತು ಎಂಬ ಪೌರಾಣಿಕ ಕತೆಯೂ ಇದೆ.

ಸುಮಾರು ನಾಲ್ಕನೆಯ ಶತಮಾನದಿಂದ ಹತ್ತನೆಯ ಶತಮಾನದವರೆಗೂ ಗಂಗರು ಈ ಪ್ರದೇಶವನ್ನು ಆಳುತ್ತಿದ್ದರು, ಆಗ ಇದಕ್ಕೆ ಗಂಗವಾಡಿ ಎಂಬ ಹೆಸರಿತ್ತು. ನಂತರ ಚೋಳರು ಒಂದುನೂರು ವರ್ಷಗಳ ಕಾಲ ಆಳ್ವಿಕೆ ಮಾಡಿದರು. ೧೧೧೧ರಲ್ಲಿ ಹೊಯ್ಸಳರು ಮೈಸೂರನ್ನು ಗೆದ್ದುಕೊಂಡರು. ಹೊಯ್ಸಳ ಹಾಗೂ ವಿಜಯನಗರದ ಅರಸರ ಅಧೀನದಲ್ಲಿ ಚಂಗಾಳ್ವರು ಹಾಗೂ ಉಮ್ಮತ್ತೂರು ರಾಜ ಪ್ರಮುಖರು ಈ ಪ್ರದೇಶವನ್ನು ಆಳ್ವಿಕೆ ಮಾಡಿದರು. ಮುಂದೆ ಮೈಸೂರಿನ ಒಡೆಯರ ವಂಶದವರು ಈ ಪ್ರದೇಶದ ಮೇಲೆ ಸಂಪೂರ್ಣನಿಯಂತ್ರಣವನ್ನು ಹೊಂದಿದರು. ೧೬೧೦ರಲ್ಲಿ ರಾಜ ಒಡೆಯರು ಶ್ರೀರಂಗ ಪಟ್ಟಣವನ್ನು ರಾಜಧಾನಿಯಾಗಿ ಮಾಡಿಕೊಂಡರು. ೧೬೧೭ರ ವೇಳೆಗೆ ಈ ರಾಜ್ಯದಲ್ಲಿ ಮೈಸೂರು,

ಮಂಡ್ಯ ಹಾಗೂ ಹಾಸನದ ಕೆಲವು ಭಾಗಗಳು ಮಾತ್ರವೇ ಇದ್ದವಾದರೂ ಮುಂದೆ ಕಂಠೀರವನರಸರಾಜ ಒಡೆಯರು ಚಿಕ್ಕದೇವರಾಜ ಒಡೆಯರು, ಹೈದರ್ ಮತ್ತು ಟಿಪ್ಪುಸುಲ್ತಾನರ ಆಳ್ವಿಕೆಯ ಕಾಲದಲ್ಲಿ ವಿಸ್ತಾರಗೊಂಡಿತ್ತು. ಟಿಪ್ಪುವಿನ ನಂತರ ಕೃಷ್ಣರಾಜ ಒಡೆಯರ ಕಾಲಕ್ಕೆ ಮೈಸೂರು ಮತ್ತೆ ರಾಜಧಾನಿಯಾಯಿತು.

ಜಿಲ್ಲೆಗೆ ಕಾವೇರಿನದಿ ಹಾಗೂ ಅದರ ಉಪನದಿಗಳಾದ ಕಬಿನಿ, ಲಕ್ಷ್ಮಣತೀರ್ಥ ಹಾಗೂ ಸುವರ್ಣಾವತಿ ನದಿಗಳಿಂದ ನೀರು ಪೂರೈಕೆಯಾಗುತ್ತದೆ. ಇಲ್ಲಿ ಮಳೆಯಾಗುವುದು ವರ್ಷಕ್ಕೆ ೭೬೧ ಮಿಲಿ.ಮೀ.ನಷ್ಟು ಮಾತ್ರವೇ. ಆದರೂ ಜಿಲ್ಲೆಗೆ ಕಾಲುವೆಗಳಿಂದಾಗಿ ನೀರಾವರಿಯು ಪೂರೈಕೆಯಾಗುತ್ತದೆ. ನೀರಾವರಿಯ ಈ ಅದ್ಭುತ ಸಾಧನೆಯಲ್ಲಿ ಸರ್.ಎಂ. ವಿಶ್ವೇಶ್ವರಯ್ಯ, ನಾಲ್ವಡಿಕೃಷ್ಣರಾಜ ಒಡೆಯರು, ಮಿರ್ಜಾ ಇಸ್ಮಾಯಿಲ್ ಅವರ ಪಾತ್ರ ಮಹತ್ವದ್ದು. ಹವಾಮಾನವು ಸಾಮಾನ್ಯ ರೀತಿಯಲ್ಲಿರುತ್ತದೆ. ಅರಣ್ಯ ಸಂಪತ್ತಿನಲ್ಲಿ ಉತ್ತರ ಕನ್ನಡ ಜಿಲ್ಲೆಗೆ ಮೊದಲ ಸ್ಥಾನವಾದರೆ, ಮೈಸೂರಿಗೆ ಎರಡನೆಯ ಸ್ಥಾನ. ಮೈಸೂರು ಜಿಲ್ಲೆಯ ಪೂರ್ವ ಹಾಗೂ ಪಶ್ಚಿಮ ಘಟ್ಟಗಳು ಸೇರುವ ಮೂಲದಲ್ಲಿರುವ ಈ ಘಟ್ಟಗಳನ್ನು ನೀಲಗಿರಿ ಬೆಟ್ಟಗಳೆಂದು ಕರೆಯುತ್ತಾರೆ. ಬಿಳಿಗಿರಿರಂಗನಬೆಟ್ಟ, ಮಹದೇಶ್ವರಬೆಟ್ಟ, ಗೋಪಾಲಸ್ವಾಮಿ ಬೆಟ್ಟ, ಬೆಟ್ಟದಪುರದಬೆಟ್ಟ, ಚಾಮುಂಡಿಬೆಟ್ಟಗಳೂ ಖ್ಯಾತವಾಗಿವೆ.

ಪೂರ್ವ ಹಾಗೂ ಪಶ್ಚಿಮ ಘಟ್ಟಗಳಿಂದ ಆವೃತ್ತವಾದ ಈ ಜಿಲ್ಲೆಗೆ ಇಲ್ಲಿನ ದಟ್ಟವಾದ ಕಾಡುಗಳು ಒಂದು ವರದಾನ. ವಿವಿಧ ಪ್ರಾಣಿಪಕ್ಷಿಗಳು ಹಾಗೂ ಸಸ್ಯ ಸಂಪತ್ತುಗಳಿಂದ ಕೂಡಿದ ಈ ಕಾಡುಗಳಲ್ಲಿ ಪ್ರಕೃತಿ ಸೌಂದರ್ಯ ತುಂಬಿ ತುಳುಕಿದೆ. ಇಲ್ಲಿನ ಆನೆಗಳು ಹಾಗೂ ಶ್ರೀಗಂಧದ ಮರಗಳು ವಿಶ್ವದ ಗಮನ ಸೆಳೆದಿವೆ. ಒಂದು ಕಡೆ ನದಿ, ಜಲಪಾತಗಳು ಮತ್ತು ಕಾಡು, ಕಣಿವೆಗಳು ಸಹಜ ಪ್ರಕೃತಿಯ ಸುಂದರ ತಾಣಗಳು ಮತ್ತೊಂದು ಕಡೆ ಸುಂದರವಾದ ದೇವಾಲಯಗಳು ಈ ಜಿಲ್ಲೆಯಲ್ಲಿ ಕಂಡುಬರುತ್ತವೆ.

ಮೈಸೂರು ಜಿಲ್ಲೆಯು ಘಟ್ಟ ಪ್ರದೇಶಗಳಿಂದಲೂ, ಕಾಡುಗಳಿಂದಲೂ ಆವೃತವಾಗಿದೆ.ಈ ಕಾಡುಗಳಲ್ಲಿ ಕಂಡು ಬರುವ ಬುಡಕಟ್ಟು ಸಮುದಾಯಗಳೆಂದರೆ ಕಾಡುಕುರುಬ, ಜೇನುಕುರುಬ, ಯರವ, ಸೋಲಿಗ, ಹಸಲ, ಹಕ್ಕಿ-ಪಿಕ್ಕಿ, ಗೌಡಾಳು, ಕೊರಗ, ಇರುಳಿಗ, ಮುಳ್ಳುಕುರುಬ, ಒಕ್ಕಲುಕುರುಬ ಮತ್ತು ಮುಂತಾದವರಿದ್ದಾರೆ.[೨]

ಈ ಜಿಲ್ಲೆಯಲ್ಲಿ ಕನ್ನಡವನ್ನೇ ಮಾತೃಭಾಷೆಯನ್ನಾಗಿ ಮಾತನಾಡುವವರ ಸಂಖ್ಯೆ ಹೆಚ್ಚು. ಇಡೀ ರಾಜ್ಯದಲ್ಲಿ ಮಂಡ್ಯ, ಹಾಸನ ಜಿಲ್ಲೆಗಳನ್ನು ಬಿಟ್ಟರೆ ನಂತರದ ಸ್ಥಾನ ಮೈಸೂರು ಜಿಲ್ಲೆಯದಾಗಿದೆ. ತೆಲುಗು, ತಮಿಳು, ಹಿಂದಿ, ಉರ್ದು ಭಾಷೆಗಳನ್ನಾಡುವ ಜನರು ಕಂಡುಬರುತ್ತಾರೆ. ''೧೮೩೩ರಲ್ಲಿ ಅರಸರು ಮೈಸೂರಿನಲ್ಲಿ ಉಚಿತ ಇಂಗ್ಲೀಷ್ ಶಾಲೆಯನ್ನು ಪ್ರಾರಂಭಿಸಿದರು. ೧೯೧೩ರಲ್ಲಿಯೇ ಮೈಸೂರು ಸಂಸ್ಥಾನವು ಕಡ್ಡಾಯ ಪ್ರಾಥಮಿಕ ಶಿಕ್ಷಣವನ್ನು ಜಾರಿಗೊಳಿಸಿತ್ತು. ಮಹಾರಾಜರ ಕಾಲದ ಹೈಸ್ಕೂಲ್, ಕಾಲೇಜುಗಳು ಇವೆ. ೧೪೫ ಶಿಶುವಿಹಾರಗಳು, ೨೫೬ ಕಿರಿಯ ಪ್ರಾಥಮಿಕ ಶಾಲೆ, ೨೦೭ ಹಿರಿಯ ಪ್ರಾಥಮಿಕ ಶಾಲೆಗಳು ಇದ್ದವು. ೨೦ ಕಾಲೇಜುಗಳು, ೧೨ ಪ್ರಥಮದರ್ಜೆ ಕಾಲೇಜುಗಳು ಹಾಗೂ ತಾಂತ್ರಿಕ ಕಾಲೇಜುಗಳು, ಕೃಷಿ ವಿಶ್ವವಿದ್ಯಾಲಯ, ವೈದ್ಯಕೀಯ ಕಾಲೇಜುಗಳು ಸಹ ಇವೆ''.[೩]

ಜಿಲ್ಲೆಯಲ್ಲಿ ಶಿವರಾತ್ರೀಶ್ವರ ಮಠವು ತಾಂತ್ರಿಕ ಕಾಲೇಜು, ವೈದ್ಯಕೀಯ ಕಾಲೇಜು ಹಲವು ಶಾಲಾ ಕಾಲೇಜುಗಳನ್ನು ನಡೆಸುತ್ತಿದ್ದು ಸುಮಾರು ೧೫೦ಕ್ಕಿಂತ ಹೆಚ್ಚು ವಿದ್ಯಾಸಂಸ್ಥೆಗಳನ್ನು ನಿರ್ವಹಿಸುತ್ತಿದೆ. ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾಲಯ ಭಾರತದ ಅತ್ಯಂತ ಹಳೆಯ ವಿಶ್ವವಿದ್ಯಾಲಯುಗಳಲ್ಲಿ ಒಂದು.

ಅರಣ್ಯ ಸಂಪತ್ತನ್ನು ಬಿಟ್ಟರೆ ಜಿಲ್ಲೆಯಲ್ಲಿ ಹೇಳಿಕೊಳ್ಳುವಂತಹ ಖನಿಜ ಸಂಪತ್ತೇನೂ ಇಲ್ಲ. ಆದರೆ ಸಾಂಪ್ರದಾಯಿಕ ಉದ್ದಿಮೆಗಳಾದ ಅಗರಬತ್ತಿ, ರೇಷ್ಮೆ, ಕೈ ಮಗ್ಗ, ಸಾಬೂನು, ಜೇನುಸಾಕಾಣಿಕೆ ಹಾಗೂ ಕುಶಲಕಲೆಗಾರಿಕೆ, ಗುಡಿಕೈಗಾರಿಕೆಗಳು ಜಿಲ್ಲೆಯಲ್ಲಿ ಕಂಡುಬರುತ್ತವೆ.[೮]

**೨ : ೧ : ೨ ಹೆಗ್ಗಡದೇವನ ಕೋಟೆ**

ಮೈಸೂರು ಜಿಲ್ಲೆಯ ಒಂದು ತಾಲ್ಲೂಕು ಹಾಗೂ ತಾಲ್ಲೂಕಿನ ಆಡಳಿತಕೇಂದ್ರ. ಹಿಂದುಳಿದ ತಾಲ್ಲೂಕು ಎಂದು ಪರಿಗಣಿಸಲ್ಪಟ್ಟಿದ್ದರು ಹೇರಳವಾದ ನಿಸರ್ಗಸಂಪತ್ತನ್ನು ಹೊಂದಿದೆ. ಜಿಲ್ಲೆಯ ಪಶ್ಚಿಮಕ್ಕಿರುವ ಈ ತಾಲ್ಲೂಕನ್ನು ಉತ್ತರದಲ್ಲಿ ಹುಣಸೂರು, ಈಶಾನ್ಯದಲ್ಲಿ ಮೈಸೂರು, ಪೂರ್ವದಲ್ಲಿ ನಂಜನಗೂಡು, ಆಗ್ನೇಯದಲ್ಲಿ ಗುಂಡ್ಲುಪೇಟೆ ತಾಲ್ಲೂಕು ಮತ್ತು ಕೇರಳದ ಮಾನಾಂದವಾಡಿ ತಾಲ್ಲೂಕು ಸುಲ್ತಾನ್‌ಬತ್ತೇರಿ ತಾಲ್ಲೂಕುಗಳು ಸುತ್ತುವರಿದಿವೆ. ದಕ್ಷಿಣದಲ್ಲಿ ಕೊಡಗು ಜಿಲ್ಲೆಯ ವಿರಾಜಪೇಟೆ ತಾಲ್ಲೂಕು ಇದೆ. ಹಂಪಾಪುರ, ಹೆಗ್ಗಡದೇವನಕೋಟೆ, ಸರಗೂರು, ಕಂದಲಿಕೆ ಮತ್ತು ಅಂತರಸಂತೆ ಹೋಬಳಿಗಳು, ಎರಡು ಪಟ್ಟಣಗಳು ೨೮೧ ಗ್ರಾಮಗಳಿವೆ. ತಾಲ್ಲೂಕಿನ ವಿಸ್ತೀರ್ಣ ೧೬೦೬ಚ.ಕಿ.ಮೀ.ನಷ್ಟು ಇದೆ. ತಾಲ್ಲೂಕಿನಲ್ಲಿ ಸುಮಾರು ೨,೪೫,೦೬೮ ಜನಸಂಖ್ಯೆಯನ್ನು ಹೊಂದಿದೆ (ಆಧಾರ ೧೯೯೧ರ ಜನಗಣತಿ).

ಈ ತಾಲ್ಲೂಕಿನಲ್ಲಿ ಪಶ್ಚಿಮಘಟ್ಟ ಶ್ರೇಣಿಯಿದ್ದು ತಾಲ್ಲೂಕಿನ ಪೂರ್ವಭಾಗವೆಲ್ಲ ಈ ಘಟ್ಟಶ್ರೇಣಿಯ ನೆರಳಿನಲ್ಲಿದೆ. ತಾಲ್ಲೂಕಿನ ಪಶ್ಚಿಮ ಮತ್ತು ದಕ್ಷಿಣ ಪ್ರದೇಶವು ಅರಣ್ಯದಿಂದ ಕೂಡಿದೆ. ಅರಣ್ಯ ಪ್ರದೇಶದಲ್ಲಿ ಆನೆ, ಹುಲಿ, ಜಿಂಕೆ, ಕಡವೆ, ಚಿರತೆ, ಕರಡಿ, ತೋಳ, ಮೊಲ, ಕಪಿ, ಕಾಡೆಮ್ಮೆ, ಮುಳ್ಳುಹಂದಿ, ಉಡ, ಬಾವಲಿ, ಹೆಬ್ಬಾವು, ನಾಗರಹಾವು, ಕಾಡುಬೆಕ್ಕು, ಕಿನ್ನಾಯಿ, ನೀರುನಾಯಿ, ಕಾಡುಕೋಳಿ, ಗಿಡುಗ, ಹದ್ದು, ಕೋಬಕ್ಕಿ, ಗೀಜಗನಹಕ್ಕಿ, ಮರಕುಟುಗನ ಹಕ್ಕಿ, ಸೋರೆಹಕ್ಕಿ, ಬೆಳ್ಳಕ್ಕಿ, ಕಾಗೆ, ಗೂಬೆ, ಕೊಕ್ಕರೆ, ಮಿಂಚುಳ್ಳಿ, ನವಿಲು ಇತ್ಯಾದಿ ಪ್ರಾಣಿಪಕ್ಷಿಗಳಿವೆ. ಬೆಲೆಬಾಳುವ ಹೊನ್ನೇ, ಬೀಟೆ, ತೇಗಾ, ಶ್ರೀಗಂಧ, ಹಲಸು, ನೇರಳೆ, ಮಾವು, ಹೆಬ್ಬಲಸು, ಸಂಪಿಗೆ, ಗರಿಗೆ, ನಂದಿ, ದೇವದಾರು, ಸಾಗುವಾನಿ, ಬಿದಿರು, ಬಿಲುವಾರ ಮೊದಲಾದ ಹತ್ತು ಹಲವು ಜಾತಿಯ ಸಸ್ಯ ಸಂಪತ್ತು ಇಲ್ಲಿನ ಅರಣ್ಯವನ್ನು ಶ್ರೀಮಂತಗೊಳಿಸಿವೆ. ಬೆಟ್ಟ ಗುಡ್ಡಗಳಿಂದ ಕೂಡಿದ ಈ ತಾಲ್ಲೂಕಿನ ಮುಖ್ಯ ನದಿ ಕಪಿಲಾ. ಈ ನದಿಯು ತಾಲ್ಲೂಕಿನ ನೈಋತ್ಯದಲ್ಲಿ ಮೊದಲು ಕೇರಳ ರಾಜ್ಯವನ್ನು ಬೇರ್ಪಡಿಸುವ ಗಡಿಯಾಗಿ ಹಾಗೂ ಹೆಗ್ಗಡದೇವನಕೋಟೆ ತಾಲ್ಲೂಕಿನ ಗಡಿಯಾಗಿ ಸ್ವಲ್ಪ ದೂರ ಹರಿಯುತ್ತದೆ. ಮಟಕೆರೆ ಬಳಿ ಕಪಿಲಾ ನದಿಗೆ ಸೇರುವ ತಾರಕಾನದಿಯು ತಾಲ್ಲೂಕಿನ ಪೂರ್ವಾಭಿಮುಖವಾಗಿ ಹರಿಯುವುದು ಹಾಗೂ ನುಗುಹೊಳೆ, ಹೆಬ್ಬಳ್ಳ, ಮಾವಿನಹಳ್ಳ, ಬರಲಹೊಳೆ, ಸುತನಳ್ಳ,

ಸಾರ್ತಿಹೊಳೆ ಮೊದಲಾದವುಗಳಿಂದ ನೀರಾವರಿಯ ಅನುಕೂಲವಿದೆ. ನೀರಾವರಿಯ ಯೋಜನೆಗಳಲ್ಲಿ ನುಗು ಜಲಾಶಯವು ಒಂದು. ಬೀಚನಹಳ್ಳಿಯಲ್ಲಿ ಕಪಿಲಾ ನದಿಗೆ ಜಲಾಶಯವನ್ನು ನಿರ್ಮಿಸಿದ್ದಾರೆ. ತಂಪಾದ ಹವೆಯುಳ್ಳ ತಾಲ್ಲೂಕಿನಲ್ಲಿ ವಾರ್ಷಿಕ ಸರಾಸರಿ ಮಳೆ ೮೧೮.೨೫ ಮಿ.ಮೀ. ಬೀಳುತ್ತದೆ.

ತಾಲ್ಲೂಕಿನಲ್ಲಿ ಮರಳುಮಿಶ್ರಿತ ಕೆಂಪುಮಣ್ಣು, ಕಪ್ಪುಮಣ್ಣು, ಕೆಂಪುಮಿಶ್ರಿತ ಕಪ್ಪುಜೇಡಿಮಣ್ಣಿನ ಪ್ರದೇಶ. ಹೆಚ್ಚು ರಾಗಿ, ಭತ್ತ, ಜೋಳ, ತಂಬಾಕು, ಹತ್ತಿ, ದ್ವಿದಳಧಾನ್ಯಗಳು, ಮೆಣಸು, ಗೆಣಸು, ಬಾಳೆಯನ್ನು ಬೆಳೆಯುತ್ತಾರೆ. ಅರಣ್ಯೋತ್ಪಾದನೆ ಅವಲಂಬಿತ ಕೆಲವು ಗೃಹ ಕೈಗಾರಿಕೆಗಳಿವೆ. ಬ್ಯಾಂಕುಗಳು, ಆರೋಗ್ಯ ಕೇಂದ್ರಗಳು, ಔಷಧಾಲಯ, ಅಂಚೆ-ತಂತಿ ಕಛೇರಿಗಳು, ವಿದ್ಯುತ್ ಸೌಕರ್ಯಗಳಿವೆ. ತಾಲ್ಲೂಕಿನಲ್ಲಿ ರಾಜ್ಯ ಹೆದ್ದಾರಿ ಮತ್ತು ಜಿಲ್ಲೆಹೆದ್ದಾರಿಗಳಿವೆ. ತಾಲ್ಲೂಕಿನ ಮತ್ತು ಅದರ ಸುತ್ತಲ ಪಟ್ಟಣ ಮತ್ತು ಗ್ರಾಮಗಳಿಗೆ ರಸ್ತೆ ಸಂಪರ್ಕವಿದೆ.

ಸೋಲಿಗರು, ಎರವರು, ಪಣೆಯರು, ಕಾಡುಕುರುಬರು, ಜೇನುಕುರುಬರು, ಕೊರಮರು, ಒಡಿಗ ಮೊದಲಾದ ಬುಡಕಟ್ಟು ಸಮುದಾಯಗಳು ಈ ನಿಸರ್ಗದ ಮಡಿಲಿನಲ್ಲಿ ವಾಸವಾಗಿದ್ದಾರೆ.

ಹೆಗ್ಗಡದೇವನಕೋಟೆಯ ದಕ್ಷಿಣದಲ್ಲಿ ಸರಗೂರಿನ ಪಶ್ಚಿಮಕ್ಕೆ ೧೧.ಕಿ.ಮೀ.ದೂರದಲ್ಲಿರುವ ಕಿತ್ತೂರು ಕಪಿಲಾನದಿಯ ಬಲದಂಡೆಯ ಮೇಲಿದೆ. ಇದು ಪುನ್ನಾಡು ದೊರೆಗಳ ರಾಜಧಾನಿಯಾಗಿತ್ತೆಂದೂ ಇಲ್ಲಿಯ ದೊರೆ ಸ್ಕಂದವರ್ಮನ ಮಗಳನ್ನು ಗಂಗರ ದೊರೆ ಅವನೀತ ಮದುವೆಯಾಗಿದ್ದನೆಂದು ತಿಳಿದುಬರುವುದು. ಇಲ್ಲಿನ ಹನ್ನೊಂದನೆಯ ಶತಮಾನದ ಹಾಗೂ ಶಾಸನದಲ್ಲಿ ಇದನ್ನು ರಾಜವಾಸಸ್ಥಾನ, ಕೀರ್ತಿಪುರಪಟ್ಟಣ ಎಂದು ಕರೆಯಲಾಗಿದೆ. ಮೈಸೂರಿನ ರಾಜವಂಶದವರ ಆಳ್ವಿಕೆಗೂ ಒಳಪಟ್ಟಿತ್ತು. ತಾಲ್ಲೂಕಿನ ಮಳಲಿ ಗ್ರಾಮದಲ್ಲಿ ಎರಡು ಜೈನ ಬಸದಿಗಳಿವೆ. ತಾಲ್ಲೂಕಿನ ಪಶ್ಚಿಮದ ಎಲ್ಲೆಯಲ್ಲಿವ್ಯಾಪಿಸಿರುವ ಕಾಕನಕೋಟೆ ಕಾಡು ಖೆಡ್ಡ ಕಾರ್ಯಕ್ರಮಕ್ಕೆ ಹೆಸರಾದದ್ದು. ಹೆಗ್ಗಡದೇವನಕೋಟೆ ಪಟ್ಟಣವು ಪುರಸಭಾ ಆಡಳಿತಕ್ಕೆ ಒಳಪಟ್ಟಿದೆ.[೫]

**೨ : ೧ : ೩ ಕೇರಳ ರಾಜ್ಯದ ಭೌಗೋಳಿಕ ಹಾಗೂ ಸಾಂಸ್ಕೃತಿಕ ಹಿನ್ನೆಲೆ**

ನೂರಾರು ಮೈಲುಗಳ ಕರಾವಳಿ ಕನ್ನಡಿ ಹಾಸಿದಂತೆ ಕಾಣುವ ಹಿನ್ನೀರು, ಜಲರಾಶಿ ಬದಿಯಲ್ಲಿ ಎತ್ತರವಾಗಿ ಸೆಟೆದು ಬೆಳೆದು ನಿಂತಿರುವ ತೆಂಗಿನಮರಗಳಿಂದ ಕೂಡಿದ ಮೋಹಕ ನಿಸರ್ಗದ ನಾಡಾಗಿದೆ.

ಕೇರಮ್ ಎಂದರೆ ತೆಂಗಿನಕಾಯಿ : ತೆಂಗಿನನಾಡು ಕೇರಳ. ಅರಬ್ಬಿಸಮುದ್ರಕ್ಕೂ-ಪಶ್ಚಿಮ ಘಟ್ಟಗಳಿಗೂ ನಡುವೆ ಕಿರಿದಾದ ದಕ್ಷಿಣ ಭೂಭಾಗವಷ್ಟೇ ಕೇರಳ. ಇದರ ಉತ್ತರ ಮತ್ತು ಈಶಾನ್ಯಕ್ಕೆ ಕರ್ನಾಟಕ ರಾಜ್ಯ, ಪೂರ್ವ ಮತ್ತು ದಕ್ಷಿಣಕ್ಕೆ ತಮಿಳುನಾಡು ರಾಜ್ಯಗಳಿವೆ. ಕೇರಳದ ಅಕ್ಷಾಂಶ ೮°-೧೮°ನಿಂದ ೧೨°-೪೮°ವರೆಗೂ ರೇಖಾಂಶ ೭೪°-೫೨°ನಿಂದ ೭೭°-೭೪° ವರೆಗೂ ಹಬ್ಬಿವೆ. ಕೇರಳ ರಾಜ್ಯದ ಒಟ್ಟು ಭೂವಿಸ್ತೀರ್ಣವು ೩೮.೮೬೩ಚ.ಕಿ.ಮೀ.ಗಳಷ್ಟು ಹೊಂದಿದೆ. ೪೪ ನದಿಗಳನ್ನು ಹಾಗೂ ೫ ಕಾರ್ಪೋರೇಷನ್‌ಗಳನ್ನು, ೫೨ ನಗರಸಭೆಗಳನ್ನು, ೯೯೨ ಪಂಚಾಯ್ತಿಗಳನ್ನು ೧೪ ಜಿಲ್ಲೆಗಳನ್ನು ಹಾಗೂ ೬೩ ತಾಲ್ಲೂಕುಗಳನ್ನು ೧೫೨ ವಿಭಾಗ ೧೪೫೨ ಗ್ರಾಮಗಳನ್ನು ಹೊಂದಿದೆ. ಹವಾಮಾನವು ೩೫°c ನಿಂದ ೨೧°cನ ವರೆಗೆ ತಂಪಾದ ಹವಾಮಾನವನ್ನು ಹೊಂದಿರುತ್ತದೆ. ಕೇರಳ ರಾಜ್ಯವನ್ನು ಆಡಳಿತ ದೃಷ್ಟಿಯಿಂದ

ಉತ್ತರ ಕೇರಳ, ಮಧ್ಯ ಕೇರಳ ಹಾಗೂ ದಕ್ಷಿಣ ಕೇರಳ ಎಂದು ಮೂರು ವಿಭಾಗಗಳಾಗಿ ವಿಭಾಗಿಸಿದೆ.

ಉತ್ತರ ಕೇರಳ : ಕಾಸರಗೋಡು, ಕಣ್ಣೂರು, ವೈನಾಡು, ಮಲ್ಲಪುರಂ

ಮಧ್ಯ ಕೇರಳ : ಪಾಲಕಾಡ್, ತಿರುಚೂರು, ಎರಂಕುಲಂ, ಹಿಡುಕಿ

ದಕ್ಷಿಣ ಕೇರಳ : ತಿರುವನಂತಪುರ, ಕೊಲ್ಲಮ್, ಕೊಟ್ಟಾಯಂ, ಪಾಟ್ಟಂತಿಟ್ಟ ಸೇರಿವೆ.

ರಾಜ್ಯದ ಒಟ್ಟು ಜನಸಂಖ್ಯೆಯು ೨,೯೦,೯೮,೫೧೮ ಜನರಿದ್ದಾರೆ. ಮಹಿಳೆಯರು ೧,೪೮,೦೯,೫೨೩ ಮತ್ತು ಪುರುಷರು ೧,೪೨,೮೮,೯೯೫. ದೇಶದಲ್ಲಿ ಹೆಚ್ಚು ಸಾಕ್ಷರತರನ್ನು ಹೊಂದಿರುವ ರಾಜ್ಯ ಎಂಬ ಹೆಗ್ಗಳಿಕೆಯಿದೆ. ರಾಜ್ಯದ ಆಡಳಿತ ಭಾಷೆ ಮಲೆಯಾಳಂ ಆಗಿದ್ದು ಜೊತೆಗೆ ಹಿಂದಿ, ಉರ್ದು, ತೆಲುಗು, ತಮಿಳು ಭಾಷೆಯ ಜನರು ಇದ್ದಾರೆ. ತಿರುವನಂತಪುರ ರಾಜ್ಯದ ರಾಜಧಾನಿಯಾಗಿದೆ (ಆಧಾರ ೧೯೯೧ರ ಜನಗಣತಿ).

ಕೇರಳದ ಕೊಟ್ಟಾಯಂ ಜಿಲ್ಲೆಯಲ್ಲಿ ೮,೮೩೭ ಅಡಿ ಎತ್ತರದ ಆನೆಮುಡಿ, ಹಿಮಾಲಯವನ್ನು ಬಿಟ್ಟರೆ ನಂತರದ ಭಾರತದಲ್ಲಿನ ಅತ್ಯುನ್ನತ ಶಿಖರ ಘಟ್ಟಗಳಿಂದಾಗಿ ಕೇರಳದಲ್ಲಿ ಒಳ್ಳೆಯ ಮಳೆ ಬರುತ್ತದೆ.

ಕೇರಳದ ಇನ್ನೊಂದು ಹೆಸರು ಮಲೆಯಾಳ : ಎಂದರೆ ಮಲೆ -ಬೆಟ್ಟಗಳ ನೆಲ. ಯಾಳ-ಜನ : ಮಲೆಯಾಳಿಗಳು ಅಥವಾ ಕೇರಳಿಯರು. ಕೇರಳದ ಭೂಭಾಗವನ್ನು ವಿಷ್ಣುವಿನ ಅವತಾರವಾದ ಪರಶುರಾಮ ಸಮುದ್ರದಿಂದ ಮೇಲಕ್ಕೆತ್ತಿದನೆಂಬ ಐತಿಹ್ಯವಿದೆ. ಸಮುದ್ರದ ನೀರು ಸ್ವಲ್ಪ ಸ್ವಲ್ಪವಾಗಿ ಹಿಂದೆ ಸರಿದು ಘಟ್ಟಗಳಿಗೂ ಸಮುದ್ರಕ್ಕೂ ನಡುವೆ ಈ ನಾಡು ಹುಟ್ಟಿತೆಂದು ಭೂ ವಿಜ್ಞಾನಿಗಳ ಅಭಿಪ್ರಾಯ.

ಇತಿಹಾಸದಲ್ಲಿ ಕೇರಳದ ಬಗೆಗೆ ಮೊತ್ತ ಮೊದಲ ಪ್ರಸ್ತಾಪ ದೊರೆಯುವುದು ಅಶೋಕನ ಶಾಸನಗಳಲ್ಲಿ. ಒಂಬತ್ತನೆಯ ಶತಮಾನದಲ್ಲಿ ಮಾಲೆಯಾಳಂ ಭಾಷೆ ಆಡುವ ಜನರು ಒಂದಾಗಬೇಕು ಎಂಬ ಭಾವನೆ ಜಾಗೃತಗೊಂಡಿತು. ೮೨೫ರಲ್ಲಿ 'ಕೊಲ್ಲ' ಎಂಬ ಶಕೆಯ ಎಣಿಕೆ ಆರಂಭವಾಯಿತು. ಈಗಲೂ ಕೇರಳದ ಧಾರ್ಮಿಕ ಮತ್ತು ಸಾಂಸ್ಕೃತಿಕ ದಿನಾಚರಣೆಗಳಲ್ಲಿ 'ಕೊಲ್ಲ'ದ ಕಾಲಗಣನೆಯನ್ನು ಅನುಸರಿಸುತ್ತಾರೆ.

ಕೇರಳದಲ್ಲಿ ರಾಜಕೀಯ ಐಕ್ಯ ಏರ್ಪಟ್ಟಿದ್ದು ಅಲ್ಲಿನ ಚಿಕ್ಕ ಪುಟ್ಟ ಪಾಳೆಯಗಾರರಲ್ಲಿ. ಚೇರವಂಶದವರ ಮೇಲಾಧಿಕಾರವನ್ನೊಪ್ಪಿದಾಗ ಆ ವಂಶದ ರಾಜರಿಗೆ 'ಚೇರಮನ್' 'ಪೆರುಮಾಳರು' ಎಂದು ಕರೆಯುತ್ತಾರೆ. ಇವರ ಕಾಲದಲ್ಲಿ ರಾಜ್ಯ ಬಹಳ ಏಳಿಗೆ ಹೊಂದಿತ್ತು. ೧೫ನೆಯ ಶತಮಾನದ ಕೊನೆಯ ವೇಳೆಗೆ ಕೇರಳದ ಅರ್ಧಭಾಗ ಕಲ್ಲಿಕೋಟೆಯ ಜಾಮೊರಿನ್ನರ ಆಡಳಿತಕ್ಕೆ ಒಳಪಟ್ಟಿತ್ತು. ಪೋರ್ಚುಗೀಸರು ಕಲ್ಲಿಕೋಟೆಗೆ ಬಂದಿಳಿದಿದ್ದು ಆ ಕಾಲದಲ್ಲಿಯೇ. ವಾಸ್ಕೊ-ಡಿ-ಗಾಮನಿಗೆ ಜಾಮೊರಿನ್ನರ ದೊರೆ ಸತ್ಕಾರ ಕೂಟವನ್ನು ಏರ್ಪಡಿಸಿದ್ದನು. ಕೊಚ್ಚಿನ್‌ನಲ್ಲಿ ''ರಾಜ'' ಎಂಬ ಬಿರುದುಳ್ಳ ಮನೆತನದ ದೊರೆಗಳು ಆಳುತ್ತಿದ್ದರು. ೧೭೭೬ರಲ್ಲಿ ಹೈದರಾಲಿಯು ಆಕ್ರಮಣ ಮಾಡಿದಾಗ ಅವನಿಗೆ ಸಾಮಂತರಾಗಿರಲು ಕೊಚ್ಚಿಯ ಅರಸರು ಒಪ್ಪಿಕೊಂಡರು. ನಂತರ ''ಈಸ್ಟ್ ಇಂಡಿಯಾ ಕಂಪನಿ''ಯು

ಪ್ರಬಲವಾದ ಮೇಲೆ ಅರಸರು ಬ್ರಿಟೀಷರ ಆಶ್ರಿತರಾದರು. ೧೯೩೬ರಲ್ಲಿ ತಿರುವಾಂಕೂರಿನ ಮಹಾರಾಜರು ರಾಜ್ಯದ ಎಲ್ಲಾ ದೇವಸ್ಥಾನಗಳಿಗೆ ಹರಿಜನರ ಪ್ರವೇಶಕ್ಕೆ ಅವಕಾಶ ಮಾಡಿಕೊಟ್ಟರು. ಗಾಂಧೀಜಿಯವರು ಇದನ್ನು ''ಆಧುನಿಕ ಯುಗದ ಪವಾಡ'' ಎಂದು ಕರೆದರು. ಭಾರತಕ್ಕೆ ಸ್ವಾತಂತ್ರ್ಯ ಬಂದ ಮೇಲೆ ಕೊಚ್ಚಿ-ತಿರುವಾಂಕೂರುವರೆಗೆ ರಾಜ್ಯ ರೂಪುಗೊಂಡಿತು. ರಾಜ್ಯ ಪುನರ್ವಿಗಂಡಣೆಯ ಕಾಲದಲ್ಲಿ ಮಲಬಾರ್ ಜಿಲ್ಲೆ ಮತ್ತು ಕಾಸರಗೋಡು ತಾಲ್ಲೂಕುಗಳನ್ನು ಕೊಚ್ಚಿ-ತಿರುವಾಂಕೂರು ರಾಜ್ಯವನ್ನೇ ಸೇರಿಸಿ ಕೇರಳ ರಾಜ್ಯವನ್ನು ರೂಪಿಸಲಾಯಿತು. ಈ ರಾಜ್ಯದಲ್ಲಿ ಓಣಂ, ಬೀಷು ಹಬ್ಬಗಳು ಪ್ರಮುಖವಾದವುಗಳು.

ರಾಜ್ಯದ ಅತಿ ದೊಡ್ಡ ನದಿ ಪೆರಿಯಾರ್. ಹೆಚ್ಚಿನ ನದಿಗಳಲ್ಲಿ ಜಲಪಾತಗಳಿವೆ. ಇದರಿಂದ ಜಲವಿದ್ಯುದಾಗಾರಗಳನ್ನು ಸ್ಥಾಪಿಸಲು ಒಳ್ಳೆಯ ಅವಕಾಶವಿದೆ. ಮೀನುಗಾರಿಕೆ ಇಲ್ಲಿನ ಒಂದು ಮುಖ್ಯ ಉದ್ಯಮ. ಶಾರ್ಕ್‌ಲಿವರ್‌ಎಣ್ಣೆ-ಆಮೆ ಎಣ್ಣೆ ಇಲ್ಲಿನ ಉತ್ಪನ್ನಗಳು. ತ್ರಿಪಾಂಗ್ ಎಂಬ ಸಮುದ್ರ ಜಂತು, ಸಮುದ್ರಕಳೆ, ಆಯೊಡಿನ್‌ಗಾಗಿ ಬೇಕಾಗುವ ಸಾರ್ಗಾಸಮ್, ಮುತ್ತಿನ ಮಣಿ, ಸಿಗಡಿ ಮೊದಲಾದ ಸಾಗರೋತ್ಪನ್ನಗಳು ಕೇರಳದ ಕೆಲವು ಸಂಪನ್ಮೂಲಗಳು.

ಕೇರಳವು ನಿಸರ್ಗದ ಒಂದು ಕೊಡುಗೆ. ನಿಬಿಡವಾದ ಅರಣ್ಯವನ್ನು ಹೊಂದಿದೆ. ಸುಮಾರು ೧೧.೧೨ಚ.ಕಿ.ಮಿಗಳಷ್ಟು ಅರಣ್ಯ ಪ್ರದೇಶವನ್ನು ಹೊಂದಿದೆ. ೨೮.೯೦% ಭಾಗ ಕಾಡನ್ನು ಹೊಂದಿದೆ. ಅಲ್ಲಿ ವಾಸಿಸುವ ಕಾಡು ಪ್ರಾಣಿಗಳೆಂದರೆ, ಆನೆ, ಕಾಡೆಮ್ಮೆ, ಚಿರತೆ, ಕಾಡುಹಂದಿ, ಜಿಂಕೆ, ಕರಡಿ, ಸಾರಂಗ, ಮೊಲ, ನವಿಲು, ಗೊರವಂಕ, ಕಾಡುಕೋಳಿ ಇವು ಮುಖ್ಯ ವನ್ಯಮೃಗಗಳು. ತೇಗ, ಕರಿಮರ, ಎಬಿನಿ, ಮೆದುಮರ, ಜೊಂಡು, ಶ್ರೀಗಂಧ, ಬಿದಿರು, ಜೇನು, ಔಷಧಿ ಮೂಲಿಕೆಗಳು ಇವು ಕಾಡಿನಲ್ಲಿ ಲಭ್ಯವಿರುವ ಉತ್ಪನ್ನಗಳು.

ಮಾನಜೈಟ್, ಇಲ್‌ಮನೈಟ್, ಕೆವೂಲಿನ್, ಜೇಡಿ ಕ್ಯಾಲ್ಸಿಯಂ ಕಾರ್ಬೊನೇಟ್ ಇವು ಇಲ್ಲಿನ ಖನಿಜಸಂಪತ್ತು. ಕೃಷಿ ಉತ್ಪನ್ನಗಳೆಂದರೆ ಭತ್ತ, ದ್ವಿದಳ ಧಾನ್ಯಗಳು, ಮರಗೆಣಸು, ಅಡಿಕೆ, ಶುಂಠಿ, ಬಾಳೆ, ಹಲಸು, ಮಾವು, ಅನಾನಸ್, ತೆಂಗು, ಗೇರುಬೀಜ, ಕಬ್ಬು, ರಬ್ಬರ್, ಟೀ, ಕಾಫಿ, ಏಲಕ್ಕಿ, ಮೆಣಸು ಮುಂತಾದವು ಪ್ರಮುಖ ಬೆಳೆಗಳು. ಬೈಸಿಕಲ್ ಭಾಗಗಳು, ಪದರ ಹಲಗೆ, ಕುಂಭ ಪದಾರ್ಥಗಳು, ಸಾಬೂನು, ದಂತದ ಕೆಲಸ, ಕೈಮಗ್ಗದ ಬಟ್ಟೆ, ತೆಂಗಿನನಾರಿನ ಸಾಮಾನುಗಳು ಕೇರಳದ ಮುಖ್ಯ ಉದ್ಯಮಗಳು. ಹಿಂದೂಸ್ತಾನ್ ಮಿಷನ್‌ಟೂಲ್ಸ್ ಮುಂತಾದ ಕೈಗಾರಿಕಾ ಕೇಂದ್ರಗಳು ಕೇರಳ ರಾಜ್ಯದಲ್ಲಿವೆ. ಮತ್ತು ಶಿಕ್ಷಣಕ್ಕೆ ತುಂಬ ಮಹತ್ವವನ್ನು ನೀಡಿದೆ. ಕೃಷಿ ವಿಶ್ವವಿದ್ಯಾಲಯ ಹಾಗೂ ನಾಲ್ಕು ವಿಶ್ವವಿದ್ಯಾಲಯಗಳಿವೆ.

ಪೆರಿಯಾರ್ ಅಭಯಾರಣ್ಯ ಪ್ರದೇಶವು ಸೇರಿದಂತೆ ತಿರುವನಂತಪುರದ ಪದ್ಮನಾಭಸ್ವಾಮಿ ದೇವಸ್ಥಾನ ದಕ್ಷಿಣ ಭಾರತದ ಒಂದು ಮುಖ್ಯ ದೇವಾಲಯವಾಗಿದೆ. ಕಥಕ್ಕಳಿ, ಯಕ್ಷಗಾನ ಕಲೆಗೆ ಈ ರಾಜ್ಯ ಪ್ರಸಿದ್ಧವಾಗಿದೆ. ಕಣ್ಣನೂರು, ಕಲ್ಲಿಕೋಟೆ ರಾಜ್ಯದ ಪ್ರಮುಖ ರೇವು ಪಟ್ಟಣಗಳು. ರಾಜ್ಯದಲ್ಲಿ ಅಂತರ್ ರಾಷ್ಟ್ರೀಯ ವಿಮಾನ ನಿಲ್ದಾಣವು ಇದೆ.

### ೨ : ೧ : ೪ ವೈನಾಡು ಜಿಲ್ಲೆ

ವೈನಾಡು ಜಿಲ್ಲೆಯು ಹೆಚ್ಚು ಬೆಟ್ಟ-ಗುಡ್ಡಗಳಿಂದ ಕೂಡಿದ ಹೇರಳವಾದ ಅರಣ್ಯಪ್ರದೇಶವನ್ನು ಹೊಂದಿದೆ. ಜಿಲ್ಲೆಯು ಒಟ್ಟು ೨೧೩೧ ಕಿ.ಮೀ.ಗಳಷ್ಟು ಭೂವಿಸ್ತೀರ್ಣವಿದೆ. ೬,೭೨,೧೨೮ ಜನಸಂಖ್ಯೆಯನ್ನು ಹೊಂದಿದೆ. ಪುರುಷರು ೩,೪೧,೯೫೮ ಸ್ತ್ರೀಯರು ೩,೩೦,೧೭೦ ಇದ್ದಾರೆ. ಜಿಲ್ಲೆಯಲ್ಲಿ ಮೂರು ತಾಲ್ಲೂಕುಗಳಿವೆ. ಮಾನಾಂದವಾಡಿ, ಸುಲ್ತಾನ್‌ಬತ್ತೇರಿ, ವೈತ್ತೇರಿ ಮೂರು ತಾಲ್ಲೂಕುಗಳ ಚಿಕ್ಕ ಜಿಲ್ಲೆಯಾಗಿದೆ. ೧೯೮೦ರಲ್ಲಿ ಕೇರಳ ರಾಜ್ಯವು ೧೨ನೇ ಜಿಲ್ಲೆಯಾಗಿ ವೈನಾಡನ್ನು ಗುರುತಿಸಿತು. ಜಿಲ್ಲೆಯ ಆಡಳಿತ ಕೇಂದ್ರವು ಕಾಲ್‌ಪೇಟೆ.

ವೈನಾಡು ಜಿಲ್ಲೆಯು ಉತ್ತರಪೂರ್ವಕ್ಕೆ ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಿಂದ ಆವೃತ್ತವಾಗಿದೆ. ದಕ್ಷಿಣ ಪೂರ್ವದಲ್ಲಿ ತಮಿಳುನಾಡಿನ ನೀಲಗಿರಿ ಜಿಲ್ಲೆಯಿದೆ. ದಕ್ಷಿಣಕ್ಕೆ ಮಲ್ಲಪುರನ್ ಮತ್ತು ಪಶ್ಚಿಮಕ್ಕೆ ಕಾಜಿಗುಡ್ಡ ಜಿಲ್ಲೆಯಿದೆ.

ವೈನಾಡು ಎಂದರೆ ಭತ್ತದ ಭೂಮಿ ಎಂದು ಕರೆಯುತ್ತಾರೆ. "The name wayanad is belived to have been derived from the "Vayal nadu" meaning. The land of Paddy Fields" ಎಂದು ಹೇಳುತ್ತಾರೆ.[೬]

ವೈನಾಡು ಜಿಲ್ಲೆಯು ಕೇರಳದ ಅತಿ ಹಿಂದುಳಿದ ಜಿಲ್ಲೆಯಾಗಿದೆ. ಇದು ಅತಿ ಕಡಿಮೆ ಜನಸಂಖ್ಯೆಯನ್ನು ಹೊಂದಿದ ಪ್ರದೇಶವಾಗಿದೆ. ಇದನ್ನು ಹಿಂದುಳಿದ ಕೈಗಾರಿಕ ಜಿಲ್ಲೆ ಎಂದು ಗುರುತಿಸಿದ್ದಾರೆ. ಜಿಲ್ಲೆಗೆ ಪ್ರಮುಖ ಆದಾಯವು ಕೃಷಿಯಿಂದ ಬರುತ್ತದೆ. ಜಿಲ್ಲೆಯು ಸ್ವಾತಂತ್ರ್ಯ ಪೂರ್ವದಲ್ಲಿ ಮೈಸೂರು ರಾಜರ ಆಳ್ವಿಕೆಗೆ ಒಳಪಟ್ಟಿದ್ದು, ನಂತರದಲ್ಲಿ ಹೈದರಾಲಿ, ಟಿಪ್ಪುವಿನ ಆಡಳಿತದಲ್ಲಿ ಟಿಪ್ಪುವು ಜಿಲ್ಲೆಯ ಬತ್ತೇರಿ ತಾಲ್ಲೂಕಿಗೆ ಬಂದು ವಿಶ್ರಾಂತಿ ತೆಗೆದುಕೊಂಡು ಹೋಗುತ್ತಿದ್ದರಿಂದ ಈ ತಾಲ್ಲೂಕಿಗೆ ಸುಲ್ತಾನ್‌ಬತ್ತೇರಿ ಎಂಬುದಾಗಿ ಕರೆಯುತ್ತಾರೆ. ಹಾಗೆಯೇ ಕೊಡಗು ರಾಜರ ಆಳ್ವಿಕೆಗೂ ಒಳಪಟ್ಟಿದ್ದು ನಂತರ ಡಚ್ಚರು, ಇಂಗ್ಲೀಷರು ಜಿಲ್ಲೆಯನ್ನು ತಮ್ಮ ಈಸ್ಟ್ ಇಂಡಿಯಾ ಕಂಪನಿಗೆ ಸೇರಿಸಿಕೊಂಡಿದ್ದರು.

ವೈನಾಡು ಜಿಲ್ಲೆಯು ಹೆಚ್ಚು ಅರಣ್ಯ ಪ್ರದೇಶವನ್ನು ಹೊಂದಿದೆ. ಜಿಲ್ಲೆಗೆ ಮೂಲ ಆದಾಯ ಕೃಷಿಯಿಂದಲೇ ಬರುತ್ತದೆ. ಜಿಲ್ಲೆಯಲ್ಲಿ ಭತ್ತ, ದ್ವಿದಳ ಧಾನ್ಯಗಳನ್ನು ಬೆಳೆಯುತ್ತಾರೆ. ಮುಖ್ಯವಾಗಿ ತೋಟಗಾರಿಕೆ ಹಾಗೂ ವಾಣಿಜ್ಯ ಬೆಳೆಗಳಿಗೆ ಹೆಸರು ವಾಸಿಯಾಗಿದೆ. ತೆಂಗು, ರಬ್ಬರ್, ಮೆಣಸು, ಕಾಫಿ, ಟೀ, ಏಲಕ್ಕಿ, ಶುಂಠಿ ಮುಖ್ಯ ಬೆಳೆಗಳು ಜೊತೆಗೆ ಬಾಳೆ, ಹಲಸು ಮುಂತಾದ ತೋಟದ ಬೆಳೆಗಳನ್ನು ಬೆಳೆಯುತ್ತಾರೆ. ಕಬಿನಿ ನದಿಯು ಜಿಲ್ಲೆಯಲ್ಲಿ ಹುಟ್ಟಿ ನೀರಾವರಿಗೆ ಆಸರೆಯಾಗಿದೆ. ಕೇರಳ ಹಾಗೂ ಕರ್ನಾಟಕ ರಾಜ್ಯದ ಗಡಿಯಾಗಿ ಮಾನಂದವಾಡಿ ತಾಲ್ಲೂಕಿನ ಮೂಲಕ ಕರ್ನಾಟಕದ ಹೆಗ್ಗಡದೇವನಕೋಟೆಯ ತಾಲ್ಲೂಕಿನ ಮುಖಾಂತರ ಕಾವೇರಿಯನ್ನು ಸೇರುತ್ತದೆ. ಕಪ್ಪುಮಣ್ಣು, ಕೆಂಪು ಮಿಶ್ರಿತ ಮರಳು, ಕೆಂಪುಮಿಶ್ರಿತ ಕಪ್ಪುಮಣ್ಣಿನಿಂದ ಕೂಡಿದ್ದು ತೋಟಗಾರಿಕೆ ಬೆಳೆಗಳಿಗೆ ಯೋಗ್ಯವಾದ ಮಣ್ಣು ಇದಾಗಿದೆ.

ಜಿಲ್ಲೆಯಲ್ಲಿ ಕೊರಮ, ಪಣಿಯ, ಯರವ, ಕೊರಚ ಮೊದಲಾದ ಬುಡಕಟ್ಟು ಸಮುದಾಯಗಳು ವಾಸಿಸುತ್ತಿವೆ. ಕಾಡಿನಲ್ಲಿ ಬಿದಿರು, ತೇಗ, ಕರಿಮರ, ಎಬಿನಿ, ಮೆದುಮರ, ಶ್ರೀಗಂಧ, ಹೊನ್ನೆ ಹಾಗೂ ಔಷಧಿ ಮೂಲಿಕೆಗಳು ಜಿಲ್ಲೆಯಲ್ಲಿ ಸಿಗುವ ಪ್ರಮುಖ ಕಾಡಿನ ಉತ್ಪನ್ನಗಳು ಕಾಡಿನಲ್ಲಿ ಜಿಂಕೆ, ಕಡವೆ, ಚಿರತೆ, ಆನೆ, ಕರಡಿ, ಕಾಡೆಮ್ಮೆ, ಕಾಡುಹಂದಿ ಮುಂತಾದ ವನ್ಯಮೃಗಗಳು ಕಂಡು ಬರುತ್ತವೆ.

ಜಿಲ್ಲೆಯು ಶಿಕ್ಷಣದಲ್ಲಿ ಈಗ ಪ್ರಬುದ್ಧಮಾನವಾಗಿ ಬೆಳೆಯಲು ಪ್ರಾರಂಭಿಸಿದೆ. ಆರು ಕಾಲೇಜುಗಳು, ಒಂದು ವೃತ್ತಿಪರ ಶಿಕ್ಷಣದ ಕಾಲೇಜು, ಹೈಸ್ಕೂಲ್‌ಗಳು, ಹಿರಿಯ, ಕಿರಿಯ ಪ್ರಾಥಮಿಕ ಶಾಲೆಗಳು ಸೇರಿದಂತೆ ನಾಲ್ಕುನೂರ ತೊಂಬತ್ತೈದು ಶಾಲೆಗಳಿವೆ. ಜಿಲ್ಲೆಯಲ್ಲಿ ಮೂರು ಸರ್ಕಾರಿ ಆಸ್ಪತ್ರೆಗಳು ಹಾಗೂ ಇತರೆ ಆಸ್ಪತ್ರೆಗಳು ಸೇರಿ ತೊಂಭತ್ತೂರು ಆಸ್ಪತ್ರೆಗಳಿವೆ. ಜಿಲ್ಲೆಯು ಕೇರಳ ರಾಜ್ಯದ ಅತೀ ಹಿಂದುಳಿದ ಜಿಲ್ಲೆಗಳಲ್ಲಿ ಒಂದಾಗಿದೆ. ಅತೀ ಕಡಿಮೆ ಜನಸಾಂದ್ರತೆಯನ್ನು ಹೊಂದಿರುವ ಜಿಲ್ಲೆಯೂ ಇದಾಗಿದೆ.

**೨ : ೧ : ೫ ಮಾನಂದವಾಡಿ ತಾಲ್ಲೂಕು**

ವೈನಾಡು ಜಿಲ್ಲೆಯ ಒಂದು ತಾಲ್ಲೂಕು ಹಾಗೂ ತಾಲ್ಲೂಕಿನ ಆಡಳಿತ ಕೇಂದ್ರ. ಜಿಲ್ಲೆಯ ಉತ್ತರ ಪಶ್ಚಿಮಕ್ಕಿರುವ ತಾಲ್ಲೂಕು ಹೇರಳವಾದ ನಿಸರ್ಗ ಸಂಪತ್ತಿನಿಂದ ಕೂಡಿದೆ. ತಾಲ್ಲೂಕು ಒಟ್ಟು ೮೬೨ ಕಿ.ಮೀ.ಗಳಷ್ಟು ಭೂ ವಿಸ್ತೀರ್ಣವಿದ್ದು, ೨,೪೦,೧೧೫ ಜನಸಂಖ್ಯೆಯನ್ನು ಹೊಂದಿದೆ. ತಾಲ್ಲೂಕಿಗೆ ಆದಾಯವು ಕೃಷಿಯಿಂದ ಬರುತ್ತದೆ. ಸ್ವಾತಂತ್ರ್ಯ ಪೂರ್ವದಲ್ಲಿ ಮೈಸೂರು ರಾಜರ ಆಳ್ವಿಕೆಗೆ ಒಳಪಟ್ಟಿದ್ದಲ್ಲದೆ ಕೊಡಗು ಅರಸರ ಆಳ್ವಿಕೆಗೂ ಒಳಪಟ್ಟಿತ್ತು. ಇದು ಕರ್ನಾಟಕದ ಒಂದು ಭಾಗವಾಗಿತ್ತು. ೧೮೦೫ರಲ್ಲಿ ಬ್ರಿಟಿಷ್ ಅಧಿಕಾರಿಗಳು ಸೈನಿಕರಿಗೆ ಮಿಲಿಟರಿ ತರಬೇತಿಯನ್ನು ಇಲ್ಲಿನ ದಟ್ಟ ಅರಣ್ಯ ಹಾಗೂ ಗುಡ್ಡಗಾಡು ಪ್ರದೇಶದಲ್ಲಿ ನೀಡುತ್ತಿದ್ದರು.

ತಾಲ್ಲೂಕು ಹೆಚ್ಚು ಅರಣ್ಯ ಪ್ರದೇಶದಿಂದ ಕೂಡಿದ್ದು ಭತ್ತ, ದ್ವಿದಳ ಧಾನ್ಯಗಳು, ತೋಟಗಾರಿಕೆ ಬೆಳೆಗಳು ಮತ್ತು ವಾಣಿಜ್ಯ ಬೆಳೆಗಳಿಗೆ ಹೆಸರುವಾಸಿಯಾಗಿದೆ. ತೆಂಗು, ರಬ್ಬರ್, ಏಲಕ್ಕಿ, ಕಾಫಿ, ಟೀ, ಮೆಣಸು, ಶುಂಠೀ ಮುಖ್ಯ ಬೆಳೆಗಳು. ತಾಲ್ಲೂಕಿಗೆ ಕಪಿಲ ನದಿಯು ವರಪ್ರಸಾದವಿದ್ದಂತೆ. ತಾಲ್ಲೂಕಿನ ಉದ್ದಗಲ್ಲಕ್ಕೂ ಹರಿದು ಹೆಗ್ಗಡದೇವನ ಕೋಟೆ ತಾಲ್ಲೂಕಿನ ಮೂಲಕ ಕಾವೇರಿಯನ್ನು ಸೇರುತ್ತದೆ. ಕಪ್ಪುಮಣ್ಣು, ಮರಳು ಮಿಶ್ರಿತ ಕೆಂಪುಮಣ್ಣು, ಕಪ್ಪುಮಿಶ್ರಿತ ಕೆಂಪುಮಣ್ಣಿನಿಂದ ಕೂಡಿದ್ದು ವಾಣಿಜ್ಯ ಬೆಳೆಗಳಿಗೆ ತುಂಬಾ ಅನುಕೂಲಕರವಾಗಿದೆ.

ತಾಲ್ಲೂಕಿನ ತಿರುನಳ್ಳಿಯ ದೇವಶಿನಾರಾಯಣನ ಗುಡಿಯು ಪ್ರಸಿದ್ಧ ದೇವಾಲಯಗಳಲ್ಲಿ ಒಂದು. ಸೂರ್ಯಮಾನ ಯುಗಾದಿಯ ದಿನದಂದು ಕೇರಳದವರಲ್ಲದೆ ಕರ್ನಾಟಕ, ತಮಿಳುನಾಡು ರಾಜ್ಯದ ಜನರು ಸೇರಿ ವೈಭವದಿಂದ ವಿಶೇಷ ಪೂಜೆ ಸಲ್ಲಿಸುತ್ತಾರೆ. ಪ್ರಕೃತಿಯಿಂದ ಕೂಡಿರುವ ಸುಂದರಬೆಟ್ಟಗುಡ್ಡಗಳ ತಾಣ ಇದಾಗಿದೆ. ಹೊನ್ನೆ, ಬೀಟೆ, ಬಿದಿರು, ತೇಗ, ಶ್ರೀಗಂಧ, ಎಬಿನಿಮರ, ಕರಿಮರ, ಮೆದುಮರ, ಔಷಧಿಯಿಂದ ಕೂಡಿದ ಗಿಡಮೂಲಿಕೆಗಳು ಪ್ರಮುಖ ಅರಣ್ಯ ಉತ್ಪನ್ನಗಳಾಗಿವೆ. ಜಿಂಕೆ, ಸಾರಂಗ, ಕಡವೆ, ಕಾಡುಹಂದಿ, ಚಿರತೆ, ಆನೆ, ಕರಡಿ, ಕಾಡೆಮ್ಮೆ, ಕಪಿ, ನವಿಲು, ಗೊರವಂಕ,

ಮಿಂಚುಳ್ಳಿ, ಸೂರೆಹಕ್ಕಿ, ಕೊಕ್ಕರೆ, ಹದ್ದು, ಮರಕುಟಿಗನಹಕ್ಕಿ, ಕೋಗಿಲೆ, ಕಾಡುಕೋಳಿ ಮುಂತಾದ ವನ್ಯ ಜೀವಿಗಳು ಕಂಡುಬರುತ್ತವೆ.

ತಾಲ್ಲೂಕಿನಲ್ಲಿ ಪಣಿಯ, ಯರವ, ಕೊರಮ, ಕೊರಚ, ಒಡಿಗ ಮುಂತಾದ ಬುಡಕಟ್ಟುಗಳು ಹಾಗೂ ಇತರೆ ಹಿಂದೂಗಳು, ಮುಸ್ಲಿಂ ಮತ್ತು ಕ್ರಿಶ್ಚಿಯನ್ ಧರ್ಮೀಯರು ಈ ತಾಲ್ಲೂಕಿನಲ್ಲಿ ವಾಸಿಸುತ್ತಿದ್ದಾರೆ.

ತಾಲ್ಲೂಕಿನ ಶಿಕ್ಷಣವು ಒಂದು ಪದವಿಕಾಲೇಜು, ಮೂರು ಪದವಿ ಪೂರ್ವ ಕಾಲೇಜುಗಳು, ಎಂಟು ಪ್ರೌಢಶಾಲೆಗಳು, ಹದಿನಾರು ಕಿರಿಯ ಮತ್ತು ಹಿರಿಯ ಶಾಲೆಗಳಿವೆ. ಒಂದು ಸರ್ಕಾರಿ ಆಸ್ಪತ್ರೆ, ಏಳೆಂಟು ಪ್ರಾಥಮಿಕ ಆರೋಗ್ಯ ಕೇಂದ್ರಗಳು, ಪಶು ಆರೋಗ್ಯ ಕೇಂದ್ರ, ಅಂಚೆ ಮತ್ತು ತಂತಿ ಕಛೇರಿ, ಬ್ಯಾಂಕುಗಳು ತಾಲ್ಲೂಕಿನಲ್ಲಿ ಕಂಡು ಬರುತ್ತವೆ.

### ೨ : ೧ : ೬ ಸುಲ್ತಾನ್ ಬತ್ತೇರಿ

ವೈನಾಡು ಜಿಲ್ಲೆಯ ಒಂದು ತಾಲ್ಲೂಕು ಕೇಂದ್ರ. ಜಿಲ್ಲೆಯ ದಕ್ಷಿಣ-ಪಶ್ಚಿಮಕ್ಕಿರುವ ಬತ್ತೇರಿ ತಾಲ್ಲೂಕು ವ್ಯಾಪಾರ ಕೇಂದ್ರವಾಗಿದ್ದು, ನಿಸರ್ಗ ಸಂಪತ್ತಿನಿಂದ ಕೂಡಿದೆ. ಒಟ್ಟು ೮೪೦ ಕಿ.ಮೀ.ಗಳಷ್ಟು ಭೂ ವಿಸ್ತೀರ್ಣವಿದ್ದು, ೨,೧೫,೦೧೯ ಜನಸಂಖ್ಯೆಯನ್ನು ಹೊಂದಿದೆ. ತಾಲ್ಲೂಕಿಗೆ ಆದಾಯವು ವಾಣಿಜ್ಯ ಬೆಳೆಗಳ ವ್ಯಾಪಾರ ಕೇಂದ್ರಗಳಿಂದ ಹಾಗೂ ಕೃಷಿಯಿಂದ ಬರುತ್ತದೆ. ತಾಲ್ಲೂಕು ಸ್ವಾತಂತ್ರ್ಯ ಪೂರ್ವದಲ್ಲಿ ಮೈಸೂರು ರಾಜರ ಆಳ್ವಿಕೆಗೆ ಹಾಗೂ ಹೈದರಾಲಿ ಮತ್ತು ಟಿಪ್ಪುವಿನ ಆಡಳಿತಕ್ಕೆ ಒಳಪಟ್ಟಿತ್ತು. ಕೊಡಗು ಅರಸುಮನೆತನದವರು, ಡಚ್ಚರು ಹಾಗೂ ಇಂಗ್ಲೀಷರ ಆಡಳಿತಕ್ಕೆ ಒಳಪಟ್ಟಿತ್ತು.

ತಾಲ್ಲೂಕಿಗೆ 'ಸುಲ್ತಾನ್' ಎಂದು ಹೆಸರು ಬರಲು ಕಾರಣ ಟಿಪ್ಪುಸುಲ್ತಾನನು ತನ್ನ ಆಳ್ವಿಕೆಯ ಕಾಲದಲ್ಲಿ ಇಲ್ಲಿನ ಸುಂದರ ಪ್ರಕೃತಿಯಲ್ಲಿ ಬಂದು ವಿಶ್ರಾಂತಿ ಪಡೆಯುತ್ತಿದ್ದನಲ್ಲದೆ ಇಲ್ಲಿ ಒಂದು ವಿಶ್ರಾಂತಿ ಧಾಮವನ್ನು ನಿರ್ಮಿಸಿದ್ದಾನೆ. ಆದ್ದರಿಂದ ಬತ್ತೇರಿಯು ಇಂದು ಸುಲ್ತಾನ್ ಬತ್ತೇರಿ ಆಗಿದೆ.

ತಾಲ್ಲೂಕಿನಲ್ಲಿ ಭತ್ತ, ದ್ವಿದಳಧಾನ್ಯಗಳು, ಶುಂಠಿ, ಮೆಣಸು, ರಬ್ಬರ್, ಏಲಕ್ಕಿ, ತೆಂಗು, ಕಾಫಿ, ಟೀ ಮುಂತಾದ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ. ಕಪ್ಪುಮಣ್ಣು, ಕೆಂಪುಮಿಶ್ರಿತ ಕಪ್ಪುಮಣ್ಣು, ಮರಳುಮಿಶ್ರಿತ ಕೆಂಪುಮಣ್ಣು ತೋಟಗಾರಿಕೆ ಬೆಳೆಗೆ ತುಂಬಾ ಸಹಕಾರಿಯಾಗಿದೆ. ಹೊನ್ನೆ, ಬೀಟೆ, ತೇಗ, ಶ್ರೀಗಂಧ, ಕರಿಮರ, ಮೆದುಮರ, ಬಿದಿರು, ಗಿಡಮೂಲಿಕೆಗಳು ಇಲ್ಲಿನ ಅರಣ್ಯ ಉತ್ಪನ್ನಗಳು. ಜಿಂಕೆ, ಕಡವೆ, ನರಿ, ಕಾಡುಹಂದಿ, ಕೆನ್ನಾಯಿ, ಆನೆ, ಕಾಡೆಮ್ಮೆ, ನವಿಲು, ಕೋಗಿಲೆ, ಕಾಡುಕೋಳಿ, ನಾಗರಹಾವು, ಹೆಬ್ಬಾವು ಮುಂತಾದ ವನ್ಯಜೀವಿಗಳು ಕಾಣುತ್ತವೆ. ತಾಲ್ಲೂಕಿನ ಪುಲಪಳ್ಳಿಯ ಸೀತಾರಾಮದೇವಾಲಯ ಟಿಪ್ಪುವಿನಿಂದ ನಿರ್ಮಿಸಲ್ಪಟ್ಟ ವಿಶ್ರಾಂತಿಧಾಮ ಹಾಗೂ ನಿಸರ್ಗದಿಂದ ಕೂಡಿರುವ ಬೆಟ್ಟಗುಡ್ಡಗಳ ಸಾಲು ಸುಂದರವಾಗಿವೆ.

ಪಣಿಯ, ಯರವ, ಕೊರಚ, ಕೊರಮ ಮತ್ತು ಒಡಿಗ ಬುಡಕಟ್ಟು ಸಮುದಾಯಗಳಿವೆ. ಇವರಲ್ಲದೆ ಹಿಂದೂಗಳು ಹಾಗೂ ಮುಸ್ಲಿಂ ಕ್ರಿಶ್ಚಿಯನ್ ಧರ್ಮೀಯರು ಇದ್ದಾರೆ.

ತಾಲ್ಲೂಕಿನಲ್ಲಿ ಪದವಿ ಕಾಲೇಜು, ಪದವಿಪೂರ್ವ ಕಾಲೇಜುಗಳು ಹಾಗೂ ಪ್ರೌಢಶಾಲೆಗಳು, ಕಿರಿಯ ಮತ್ತು ಹಿರಿಯ ಶಾಲೆಗಳು, ಸರ್ಕಾರಿ ಆಸ್ಪತ್ರೆ, ಪ್ರಾಥಮಿಕ ಆರೋಗ್ಯ ಘಟಕಗಳು, ಅಂಚೆತಂತಿ ಕಛೇರಿ ಮತ್ತು ಬ್ಯಾಂಕುಗಳು ಇವೆ.[೮]

**೨ : ೨ ಒಡಿಗ ಪದದ ನಿಷ್ಪತ್ತಿ**

'ಒಡಿಗ' ಎಂಬುದು ಇಂದು ಒಂದು ಸಮುದಾಯಕ್ಕೆ ಆರೋಪಿತವಾಗಿ ಬಳಕೆಯಾಗುತ್ತಿದೆ. ಒಡಿಗ ಎಂಬ ಸಮುದಾಯಕ್ಕೆ ಒಡಿಗರು, ಒಡಿಗಗೌಡರೂ ಎಂದು ಕರೆಯಲಾಗುತ್ತಿದೆ. 'ಒಡಿಗ' ಎಂಬ ಪದದ ಕುರಿತಾಗಿ ಕುತೂಹಲಕರ ಜಿಜ್ಞಾಸೆಗಳು ವಿದ್ವಾಂಸರಲ್ಲಿವೆ.

೧ ಒಡಿಗ ಎಂದರೆ ಸಂದೇಶವನ್ನು ತಲುಪಿಸುವವರು (Messengers) ಎಂಬರ್ಥವಿದೆ. ಹಿಂದೆ ರಾಜರ ಕಾಲದಲ್ಲಿ ಒಂದು ಸಂಸ್ಥಾನದಿಂದ ಮತ್ತೊಂದು ಸಂಸ್ಥಾನಕ್ಕೆ ಓಡಿಹೋಗಿ ಸುದ್ದಿಗಳನ್ನು ಮುಟ್ಟಿಸಲು ಕೆಲವು ಪ್ರತ್ಯೇಕ ಸಮುದಾಯಗಳಿದ್ದವು. ಈ ಗುಂಪನ್ನು 'ಒಡಿಗ' ಎಂದು ಕರೆದಿರಬಹುದು ಎಂಬ ಕೆಲವು ಅಭಿಪ್ರಾಯಗಳಿವೆ.

ಆದರೆ ಕರ್ನಾಟಕದಾದ್ಯಂತ ರಾಜ್ಯಾಡಳಿತ ನಡೆಸಿದ ರಾಜಪ್ರಭುತ್ವಕ್ಕೆ ಸುದ್ದಿಯನ್ನು ಮುಟ್ಟಿಸುವವರು ಇದ್ದರು. ಆದರೆ ಇಂದು ಕೇವಲ ಸೀಮಿತ ಪ್ರದೇಶದಲ್ಲಿ ಮಾತ್ರ ಒಡಿಗರಿದ್ದಾರೆ. ಸುದ್ದಿ ಮುಟ್ಟಿಸುವರೇ ಇವರಾಗಿದ್ದರೆ ಕರ್ನಾಟಕ ದಾದ್ಯಂತ ಇರಬೇಕಿತ್ತು ಎಂಬ ಅನುಮಾನಗಳೂ ಬರುತ್ತವೆ. ಇದಕ್ಕೆ ಸಂಸ್ಕೃತದಲ್ಲಿ -

ಓಲೆಕಾರ = ಹರಿಕಾರ

ಓಲೆಗಾರ = ಲಿಪಿಗಾರ ಎಂಬರ್ಥಗಳಿವೆ. ಬಹುಶಃ ಶಬ್ದಾರ್ಥದ ದೃಷ್ಟಿಯಿಂದ ಒಡಿಗ ಮತ್ತು ಒಲಿಗ ಎಂಬ ಪದಗಳ ನಡುವೆ ಅಂತರ ಹೆಚ್ಚಾಗಿ ಇಲ್ಲವಾದರೂ, ಈ ಬದಲಾವಣೆಯ ಸಾಧ್ಯತೆಗಳ ಬಗ್ಗೆ ಇನ್ನೂ ಚರ್ಚಿಸಬೇಕಾಗಿದೆ.

೨ ಒಡಿಗ=ಓಡಿ ಹೋಗುವವನು, ಹೇಡಿ, ಶಿವನ ಬಲದಿಂದಲೂ ಧನುಜ ತಾಮಸಿಯಾದ ಮೊದಲೆವೋಡಿಗ ನೆನೆಗ್ಗೆಸುವನೆನುತ್ತಾ : ಪಲಾಯನಮಾಡು, ವೇಗವಾಗಿ ಹೋಗು, ತೆಲುಗು, ತಮಿಳು, ಮಲಯಾಳಂ, ತುಳು

- ಓದಕೊಡ, ಓಡ್, ಓಢಿ, ಪಾರು ಎಂಬರ್ಥಗಳಿವೆ.

ಒಡು - ನಾವೆ - ದೋಣಿ

ಒಡಿಗ - ನಾವೆ ನಡೆಸುವವ

ಒಡು - ವಾಡು - ಪ್ರದೇಶ, ಸ್ಥಳ (ಕನ್ನಡ ನಿಘಂಟು ಪು. ೧೨೫೮)[೯]

೩ ಒಡಿಗ : ಗುಂಪಿನಿಂದ ಒಡೆದು ಬೇರೆಯಾದವನು. ಚದುರಿ ಹೋದವನು ಎಂದು ಭಾಷಾ ವಿಜ್ಞಾನಿ, ಪ್ರೊ.ಜಿ. ವೆಂಕಟಸುಬ್ಬಯ್ಯನವರು ಅಭಿಪ್ರಾಯ ಪಡುತ್ತಾರೆ.

೪ ಸ್ಥಳೀಯ ಒಡಿಗ ಸಮುದಾಯದ ಮಾಹಿತಿಯಂತೆ ನಾವು ಚಿತ್ರದುರ್ಗದಿಂದ ಯುದ್ಧದ ಸಂದರ್ಭದಲ್ಲಿ ಹೆದರಿ ಪ್ರಾಣ ಭಯದಿಂದ ಓಡಿ ಬಂದವರಾದ್ದರಿಂದ 'ಒಡಿಗರು' ಎಂಬುದಾಗಿ ಕರೆಯಲಾಗುತ್ತದೆ. ಆದರೆ ನಾವು ಮೂಲತಃ ಬೇಡ ಸಮುದಾಯಕ್ಕೆ ಸೇರಿದವರು ಎಂದು ಹೇಳುತ್ತಾರೆ.

೫ ಒಡಿ=ಬೇರ್ಪಡು-ಸೋಲು-ಎದೆಗೆಡು : ಎಂಬ ಅರ್ಥವಿದೆ.[೧೦]

೧ ಗುಂಪಿನಿಂದ ಬೇರ್ಪಟ್ಟು ಹೋದವರು 'ಒಡಿಗ'ರಾಗಿರುವ ಸಾಧ್ಯತೆ ಇದೆ.

೨ ಹೈದರಾಲಿಯು ಚಿತ್ರದುರ್ಗದ ಮೇಲೆ ದಾಳಿ ಮಾಡಿದಾಗ ಮದಕರಿ ನಾಯಕನಿಗೆ ಸೋಲುಂಟಾಯಿತು. ಆಗ ಬೇಡ ನಾಯಕ ಬುಡಕಟ್ಟು ಸಮುದಾಯದವರು ನಾನಾ ಭಾಗಗಳಿಗೆ ಓಡಿಹೋದ ಐತಿಹ್ಯ ಇದೆ. ಸೋತು ಓಡಿಹೋದವರೆ ಈ ಒಡಿಗರಿರಬಹುದು.

೩ ಹೈದರಾಲಿಯು ಚಿತ್ರದುರ್ಗವನ್ನು ವಶಪಡಿಸಿಕೊಂಡ ಮೇಲೆ ಅವನ ಸೈನಿಕರು ಚಿತ್ರದುರ್ಗದವರಿಗೆ ಚಿತ್ರ ಹಿಂಸೆ ನೀಡುತ್ತಿದ್ದರಿಂದಲೂ ಅಥವಾ ಹೈದರಾಲಿಯು ಚಿತ್ರದುರ್ಗದ ಬೇಡನಾಯಕರ ಹದಿನಾರು ಸಾವಿರ ಸೈನಿಕರನ್ನು ತನ್ನ ಬಿಗಿ ಪಹರೆಯಲ್ಲಿ ತೆಗೆದುಕೊಂಡು ಹೋಗಿ ಶ್ರೀರಂಗಪಟ್ಟಣದ ಹತ್ತಿರ ಇವರಿಗಾಗಿಯೇ ಒಂದು ಊರನ್ನು ಕಟ್ಟಿಸಿಕೊಟ್ಟು ಅದಕ್ಕೆ ಬೇಡರಹಳ್ಳಿ ಎಂದು ನಾಮಕರಣ ಮಾಡಿದನು (ಶ್ರೀನಿವಾಸ ಜೋಯಿಸರು ತಮ್ಮ ''ಚಿತ್ರದುರ್ಗದ ಐತಿಹಾಸಿಕ ದಾಖಲೆಗಳು'' ಎಂಬ ಗ್ರಂಥದಲ್ಲಿ ಪ್ರಕಟಿಸಿದ್ದಾರೆ). ಹೈದರಾಲಿಯ ನಂತರ ಅವನ ಮಗ ಟಿಪ್ಪುಸುಲ್ತಾನನು ಈ ಸಮುದಾಯವನ್ನು ಮತಾಂತರಗೊಳಿಸಲು ಪ್ರಯತ್ನಿಸಿದಾಗ ಎದೆಗೆಟ್ಟು ದಕ್ಷಿಣ ಭಾಗದ ದಟ್ಟ ಅರಣ್ಯಕ್ಕೆ ಓಡಿ ಹೋಗಿರಬಹುದು.

ಒಡಿ + ಗ = 'ಗ' ಪುರುಷ ಸಂಬಂಧವಾಚಿ ಪದ ಇರುವುದರಿಂದ ಇದು ವ್ಯಕ್ತಿಯನ್ನು ಸೂಚಿಸುತ್ತದೆ.

ಸಮುದಾಯದಿಂದ ಬೇರ್ಪಟ್ಟು ಅಥವಾ ಯುದ್ಧದಲ್ಲಿ 'ಸೋತು' ಹೈದರಾಲಿ ಸೈನಿಕರ ಚಿತ್ರಹಿಂಸೆ ತಾಳಲಾರದೆ 'ಎದೆಗೆಟ್ಟು' ಹೋದವರೆ 'ಒಡಿಗ'ರಿರಬಹುದು.

ಒಡಿಗರಿಗೆ, ಒಡಿಗಗೌಡ ಎಂಬ ಹೆಸರಿನಿಂದಲೂ ಕರೆಯಲಾಗುತ್ತದೆ. 'ಗೌಡ' ಎಂಬ ಪದ ವೃತ್ತಿವಾಚಿಯಾಗಿದೆ. ಅಲ್ಲದೇ ಈ ಪದ ಮುಖಂಡ, ನಾಯಕ, ಪ್ರಧಾನ, ಪಟೇಲ ಮುಂತಾದ ಅರ್ಥವನ್ನು ನೀಡುತ್ತದೆ. ಆದರೆ 'ಒಡಿಗ' ಎಂಬ ಪದ ನಿಖರವಾಗಿ ವೃತ್ತಿಯ ಒಂದು ಸೂಚಕ ಪದವಾಗಿ ಬಳಕೆಯಾಗುತ್ತಿರಬಹುದೇ? ಆಲೋಚಿಸಲು ಅವಕಾಶವಿದೆ.

ಒಡಿಗರು ತಮ್ಮ ಶಾಲಾ ದಾಖಲಾತಿಯಲ್ಲಿ ಬ್ಯಾಡ-ಬೇಡ, ಬೇಡಗ-ಬೇಡಗೌಡ ಎಂಬುದಾಗಿ ನೋಂದಾಯಿಸಿದ್ದಾರೆ. ೧೯೨೪ರಲ್ಲಿ 'ಲಕ್ಷ್ಮಿನಾರಾಯಣ ಬೇಡರ ಸಹಕಾರ ಸಂಘ' ಎಂಬ ಬ್ಯಾಂಕ್‌ನ್ನು ದೊಡ್ಡಬೈರನಕುಪ್ಪೆಯಲ್ಲಿ ಸ್ಥಾಪಿಸಿದ್ದರು. ಇಂದು ಕಾರಣಾಂತರದಿಂದ ಅದನ್ನು ಮುಚ್ಚಿದ್ದಾರೆ.

ಇದರಿಂದಾಗಿ ಬೇಡರ ಒಂದು ಗುಂಪೇ ಒಡಿಗರು ಇರಬಹುದೆಂಬುದು ಇದರಿಂದ ತಿಳಿಯುತ್ತದೆ. ೧೯೮೪ರ ಕರ್ನಾಟಕ ರಾಜ್ಯ ಗೆಝೆಟಿಯರ್ ಭಾಗ-೧ ರಲ್ಲಿ ಕರ್ನಾಟಕದ ಕೆಲವು ಜಾತಿ ಮತ್ತು ಬುಡಕಟ್ಟುಗಳನ್ನು ಗುರುತಿಸುವಾಗ 'ಒಡಿಗ' ಎಂಬುದು ದಾಖಲಾಗಿದೆ. ಇದರಿಂದ ಇದೊಂದು ಪ್ರತ್ಯೇಕ ಬುಡಕಟ್ಟು ಇರಬಹುದೇ ಎಂಬ ಅನುಮಾನಗಳು ಬರುತ್ತವೆ. ಮಿಕ್ಕಂತೆ ಈ ಪದದ ಬಗ್ಗೆ ಎಲ್ಲಿಯೂ ವಿವರವಾದಂತಹ ಮಾಹಿತಿಗಳು ಲಭ್ಯವಿರುವುದಿಲ್ಲ.

ದ್ರಾವಿಡ ಪರಿಸರದಲ್ಲಿ ರಚಿತವಾದ ದ್ರಾವಿಡಿಯನ್ ಎಟಿಮೊಲಾಜಿಕಲ್ ಡಿಕ್ಷ್ನರಿಯಲ್ಲಿಯೂ ಒಡಿಗ ಪದದ ಉಲ್ಲೇಖ ಕಂಡು ಬರುವುದಿಲ್ಲ. ಕಾರಣ ಆ ಸಮುದಾಯದ ಐತಿಹ್ಯ. ಅವರು ಹೇಳುವ ಮಾಹಿತಿಯನ್ನೇ ಮೂಲವನ್ನಾಗಿ ಸ್ವೀಕರಿಸುವುದು ಅನಿವಾರ್ಯ ಮತ್ತು ಸಾಧುವಾಗಿದೆ.

೨ : ೩ ಮೂಲ

ಒಂದು ಸಮುದಾಯದ ಚರಿತ್ರೆಯು ಬಹುಶಃ ಆ ಸಮುದಾಯದ ಮೂಲದಿಂದ ಆರಂಭವಾಗುತ್ತದೆ. ಮೂಲ ಪುರುಷರು ಆ ಸಮುದಾಯದ ಮೂಲನೆಲೆ, ದೈವ, ಆಚರಣೆ, ನಂಬಿಕೆ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಚಟುವಟಿಕೆಗಳು ಮುಖ್ಯವಾಗಿ ತಿಳಿಯಬೇಕಾಗುತ್ತದೆ. ಆ ಮೂಲಕ ಪ್ರಸ್ತುತ ಸಂದರ್ಭದಲ್ಲಿ ಜೀವಿಸುತ್ತಿರುವ ಸಮುದಾಯಗಳ ಸಾಂಸ್ಕೃತಿಕ ಚರಿತ್ರೆಯನ್ನು ತಿಳಿಯಲು ಸಾಧ್ಯವಾಗುತ್ತದೆ. ಕರ್ನಾಟಕದಲ್ಲಿ ಜೀವಿಸುತ್ತಿರುವ ಅನೇಕ ಬುಡಕಟ್ಟು ಸಮುದಾಯಗಳಿಗೆ ತನ್ನದೇ ಆದಂತಹ ಮೂಲವಿರುವುದನ್ನು ಕಾಣಬಹುದು. ಕಾಡುಕುರುಬ, ಜೇನುಕುರುಬ, ಸೋಲಿಗ, ಇರುಳಿಗ, ಮ್ಯಾಸಬೇಡರು ಮುಂತಾದ ಸಮುದಾಯಗಳು ತಮ್ಮದೇ ಮೂಲವನ್ನು ಹೊಂದಿವೆ. ಅಲ್ಲದೇ ಪೂಜಿಸುವ ದೈವ, ಆಚರಣೆಗಳನ್ನು ಆ ಸಮುದಾಯದಲ್ಲಿ ಮೌಖಿಕ ಕಥಾನಕಗಳ ಮೂಲಕ ವಿವರಿಸುವ ವಿಪುಲ ಸಾಹಿತ್ಯವಿದೆ. ಅಲ್ಲದೇ ಕೆಲವು ಲಿಖಿತ ಆಕರಗಳು ಈ ಸಮುದಾಯಗಳ ಸಾಂಸ್ಕೃತಿಕ ಅಂಶಗಳನ್ನು ದಾಖಲಿಸಿರುವುದು ಕಂಡುಬರುತ್ತದೆ.

ಆದರೆ 'ಒಡಿಗ' ಎಂಬ ಸಮುದಾಯವನ್ನು ಕುರಿತು ಮೂಲನೆಲೆ, ಮೂಲ ಪುರುಷ, ಮೂಲದೈವ, ಕಥೆ ಸಾಹಿತ್ಯ, ಲಿಖಿತ, ಅಲಿಖಿತ ಆಧಾರಗಳು ದೊರೆಯುವುದಿಲ್ಲ. ಒಡಿಗರು ಎಲ್ಲಿಂದ ಬಂದರು, ಇವರು ಬುಡಕಟ್ಟು ಸಮುದಾಯವೇ, ಎಂಬ ವಿಷಯಗಳ ಬಗೆಗೆ ನಿಖರವಾದ ಮಾಹಿತಿಯು ದೊರೆಯುವುದಿಲ್ಲ.

ಒಡಿಗರ ಮೂಲವನ್ನು ತಿಳಿಯಬಹುದಾದಂತಹ ಅವರ ಕುಲದ ಬಳ್ಳಿ, ಗೋತ್ರಗಳು, ಸ್ಥಳೀಯ ಪ್ರಾದೇಶಿಕ ಕೆಲಸಗಳು, ಹಿರಿಯರು, ಮರಗಳು ಮುಂತಾದುವುಗಳಿಂದ ತಮ್ಮ ಕುಲದ ಬಳ್ಳಿಯನ್ನು ಗುರುತಿಸುವ ಕೆಲವು ಚಹರೆಗಳಿವೆ. ಈ ಮೂಲಕ ಇವರ ಮೂಲದ ಮಾಹಿತಿಯು ಅಷ್ಟಾಗಿ ದೊರೆಯುವುದಿಲ್ಲವಾದರೂ ಕಾಲವನ್ನು ಗುರುತಿಸಲು ಸಾಧ್ಯವಿದೆ.

ಮದಕರಿನಾಯಕನ ಮೇಲೆ ಹೈದರಾಲಿಯು ದಾಳಿಯನ್ನು ಮಾಡಿದಾಗ ಮದಕರಿನಾಯಕನಿಗೆ ಸೋಲಾಯಿತು. ಈ ಸಂದರ್ಭದಲ್ಲಿ ಕೆಲವು ಬೇಡರಿಗೆ ಮುಸ್ಲಿಂ ಸೈನಿಕರು ಚಿತ್ರಹಿಂಸೆಯನ್ನು ಮಾಡತೊಡಗಿದರು. ಇದನ್ನು ತಾಳಲಾರವ ಕೆಲವು ಸೈನಿಕರು ಜೀವಭಯದಿಂದ ಓಡಿಹೋಗಿ ಮೈಸೂರು ಜಿಲ್ಲೆ ಮತ್ತು ಕೇರಳದ ವೈನಾಡು ಜಿಲ್ಲೆಯ ಅರಣ್ಯ

ಪ್ರದೇಶಗಳಲ್ಲಿ ಆಶ್ರಯ ಪಡೆದರು. ಕ್ರಮೇಣ ಈ ಸಮುದಾಯವನ್ನು ಗುರುತಿಸಲು ಚಿತ್ರದುರ್ಗದಿಂದ ಓಡಿಬಂದವರಾದ್ದರಿಂದ ''ಒಡಿಗರು'' ಎಂದೇ ಕರೆಯಲಾಯಿತು. ಮೂಲತಃ ಇವರು ಬೇಡ (ನಾಯಕ)ರ ಒಂದು ಗುಂಪು. ಆರಂಭದಲ್ಲಿಕೇರಳದ ಭಾಗದಲ್ಲಿ ಹೆಚ್ಚಾಗಿ ವಾಸಿಸುತ್ತಿದ್ದ ಇವರು ಅಲ್ಲಿನ ಮುಸ್ಲಿಂ ದಾಳಿಯಿಂದ ಮತ್ತೆ ಮೈಸೂರು ಭಾಗದಲ್ಲಿ ನೆಲೆಸಿದ್ದಾರೆ. ಚಿತ್ರದುರ್ಗದ ಬೇಡನಾಯಕರೇ ಒಡಿಗರು ಎಂಬುದಾಗಿ ಆ ಸಮುದಾಯದವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

ಒಡಿಗ ಸಮುದಾಯದ ದೈಹಿಕ ಲಕ್ಷಣಗಳು ಬುಡಕಟ್ಟು ಜನರ ಪ್ರತ್ಯೇಕತೆಯನ್ನು ಹೇಳುತ್ತವೆ. ಸಧೃಡ ಮೈಕಟ್ಟು, ಎತ್ತರವಿಲ್ಲದ, ಗಿಡ್ಡನಾಗಿಯೂ ಅಲ್ಲದ ಮಧ್ಯ ಎತ್ತರವನ್ನು ಹೊಂದಿದ್ದಾರೆ. ಗೋಧಿಯುಕ್ತ ಮೈಬಣ್ಣ (ಗೌರವವರ್ಣ) ಹೊಂದಿದ್ದಾರೆ. ಕಪ್ಪುಮಿಶ್ರಿತ ಕೆಂಪು ಬಣ್ಣದವರೂ ಇದ್ದಾರೆ. ಉದ್ದವಾದ ಮೂಗು, ಆಕರ್ಷಕ ಕಣ್ಣು ಮತ್ತು ಮುಖಭಾವವಿರುತ್ತದೆ. ಇವರು ಬೇರೆ ಬುಡಕಟ್ಟು ಸಮುದಾಯಕ್ಕಿಂತ ಭಿನ್ನವಾಗಿ ಕಂಡುಬರುತ್ತಾರೆ.

ಅದೇನಿದ್ದರೂ 'ಒಡಿಗ' ಸಮುದಾಯದ ಮೂಲವನ್ನು, ಅವರ ದೈಹಿಕ ಚಹರೆಗಳು, ಅವರ ಆಚರಣೆ, ಸಂಪ್ರದಾಯ ಗಳು, ಭಾಷೆ ಮತ್ತು ಆ ಸಮುದಾಯದವರು ಹೇಳಿಕೆಗಳಿಂದ ಚಿತ್ರದುರ್ಗದ ಬೇಡನಾಯಕ ಸಮುದಾಯದಿಂದ ಬೇರ್ಪಟ್ಟ ಗುಂಪೆಂದು ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ಚದುರಿದ ಈ ಗುಂಪು 'ಒಡಿಗ' ರೆಂದು ಕರೆದುಕೊಂಡು ಕೆಲವು ಆಚರಣೆ ಸಂಪ್ರದಾಯಗಳಲ್ಲಿ ಭಿನ್ನತೆಯನ್ನು ರೂಢಿಸಿಕೊಂಡಿರುವುದು ತಿಳಿಯುತ್ತದೆ.

**೨ : ೪ ಜನಸಂಖ್ಯೆ**

ಈ ಬುಡಕಟ್ಟು ಸಮುದಾಯವು ಕರ್ನಾಟಕದ ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ ತಾಲ್ಲೂಕು ಮತ್ತು ಕೇರಳರಾಜ್ಯದ ವೈನಾಡು ಜಿಲ್ಲೆಯ ಮಾನಂದವಾಡಿ ತಾಲ್ಲೂಕು ಮತ್ತು ಸುಲ್ತಾನ್‌ಬತ್ತೇರಿ ತಾಲ್ಲೂಕುಗಳಲ್ಲಿ ನೆಲೆಸಿರುವ ಜನಸಂಖ್ಯಾ ವಿವರವನ್ನು ನೋಡಲಾಗಿ ಸಮುದಾಯದಲ್ಲಿ ಒಟ್ಟು ಜನಸಂಖ್ಯೆಯು ೪೪೩೨ ಆಗಿರುತ್ತದೆ. ಒಟ್ಟಾ ರೆ ಇವರ ಸಂಖ್ಯೆ ೫೦೦೦ ದಾಟಲಾರದು.

**ಕರ್ನಾಟಕ ಮತ್ತು ಕೇರಳದಲ್ಲಿ ನೆಲೆಸಿರುವ ಜನಸಂಖ್ಯಾ ಪಟ್ಟಿ**

| ತಾಲ್ಲೂಕುಗಳು | ಗಂಡಸರು | ಹೆಂಗಸರು | ಮಕ್ಕಳು | | ಉದ್ಯೋಗಿಗಳು | |
|---|---|---|---|---|---|---|
| | | | ಗಂಡು | ಹೆಣ್ಣು | ಗಂಡು | ಹೆಣ್ಣು |
| ಹೆಗ್ಗಡದೇವನ ಕೋಟೆ | ೯೮೪ | ೧೦೨೨ | ೯೧೯ | ೯೦೫ | ೨ | ಇಲ್ಲ |
| ಸುಲ್ತಾನ್ ಬತ್ತೇರಿ | ೮೬ | ೮೦ | ೫೯ | ೫೪ | ಇಲ್ಲ | ಇಲ್ಲ |
| ಮಾನಂದವಾಡಿ | ೯೨ | ೮೮ | ೬೭ | ೭೬ | ಇಲ್ಲ | ಇಲ್ಲ |
| ಒಟ್ಟು | ೧೧೬೨ | ೧೧೯೦ | ೧೦೪೫ | ೧೦೩೫ | ೨ | ೦೦ |

ಎರಡನೆಯ ಆಧಾರವಾಗಿ ನಾವು ಚಿತ್ರದುರ್ಗದ ರಾಜನ ಮನೆಗೆ ಹೆಣ್ಣು ಕೇಳಲು ಹೋಗಿದ್ದೆವು. ಆ ಸಂದರ್ಭದಲ್ಲಿ ರಾಜರು ನಮ್ಮನ್ನು ವೈಭವದಿಂದ ಬರಮಾಡಿಕೊಂಡರು. ಅಂದು ಅರಮನೆಯಲ್ಲಿಯೇ ವೈಭೋಗ ಪೂರಿತವಾದ ಭೋಜನ ಕೂಟವನ್ನು ನೀಡಿದರು. ಭೋಜನ ನಡೆಯುವಾಗ ನಮ್ಮಲ್ಲಿ ಒಬ್ಬ ಹಿರಿಯ ಏನೇ ಆದರೂ ಒಂದು ತಲೆಕಾಲಿನ ಮಾಂಸದ ಊಟಕ್ಕೆ ಇದು ಸಮನಾಗಲಿಲ್ಲ ಎಂದನು. ಇದು ರಾಜನಿಗೆ ತಿಳಿದು ರಾಜನು ಕೋಪದಿಂದ ಇವರಿಗೆ ಕಠಿಣ ಶಿಕ್ಷೆ ನೀಡಲು ಆಜ್ಞೆ ಮಾಡಿದನು. ಇದರಿಂದ ಹೆದರಿ ಅಲ್ಲಿಂದ ತಪ್ಪಿಸಿಕೊಂಡು ಈ ಅರಣ್ಯ ಪ್ರದೇಶಕ್ಕೆ ಓಡಿ ಬಂದಿರುವುದಾಗಿ ಹೇಳುತ್ತಾರೆ.

ಮೂರನೆಯದಾಗಿ ನಾವು ಚಿತ್ರದುರ್ಗದ ಅಕ್ಕಪಕ್ಕದ ಹಳ್ಳಿಯವರು. ನಾವು ಚಿತ್ರದುರ್ಗಕ್ಕೆ ವ್ಯಾಪಾರಕ್ಕಾಗಿ ಹೊರಟಿದ್ದೇವು, ಆ ಸಂದರ್ಭದಲ್ಲಿ ಕೆಲವರು ಚಿತ್ರದುರ್ಗದ ಕಡೆಯಿಂದ ಹೆದರಿ ಓಡಿಬರುತ್ತಿದ್ದರು. ನಾವು ಕಾರಣ ಕೇಳಲು ಅವರು ದುರ್ಗದ ಕೋಟೆಯ ಮೇಲೆ ಹೈದರಾಲಿಯ ಸೈನ್ಯವು ಮುತ್ತಿಗೆ ಹಾಕಿದೆ. ಹೈದರಾಲಿಯ ಸೈನ್ಯವು ಬಲಾಢ್ಯವಾಗಿದ್ದು ಮದಕರಿನಾಯಕನಿಗೆ ಸೋಲುಂಟಾಗಿದೆ. ಹೈದರಾಲಿಯ ಸೈನಿಕರು ಸಿಕ್ಕ ಸಿಕ್ಕವರಿಗೆ ಉಗ್ರವಾದ ಶಿಕ್ಷೆಯನ್ನು ವಿಧಿಸುತ್ತಿದ್ದಾರೆ ಎಂದು ಹೇಳಿದರು. ಇದರಿಂದ ನಾವು ಪ್ರಾಣ ಭಯದಿಂದ ಹೆದರಿ ಅಲ್ಲಿಂದ ಇಲ್ಲಿಗೆ ಓಡಿ ಬಂದಿರುವುದಾಗಿ ಹೇಳುತ್ತಾರೆ.

ಹೈದರಾಲಿಯು ಚಿತ್ರದುರ್ಗದ ಮದಕರಿನಾಯಕನ ಮೇಲೆ ದಂಡೆತ್ತಿ ಹೋಗಿ ಅವನನ್ನು ಸೋಲಿಸಿ. ''ಮದಕರಿ ನಾಯಕನನ್ನು ಹಾಗೂ ಅವನ ಇಪ್ಪತ್ತು ಸಾವಿರ ಬೇಡರ ಸೈನ್ಯವನ್ನು ಬಿಗಿ ರಕ್ಷಣೆಯೊಂದಿಗೆ ಶ್ರೀರಂಗಪಟ್ಟಣಕ್ಕೆ ಕರೆತರುತ್ತಾನೆ. ಮದಕರಿನಾಯಕನನ್ನು ಶ್ರೀರಂಗಪಟ್ಟಣದಲ್ಲಿ ಸೆರೆಮನೆಗೆ ಹಾಕುತ್ತಾನೆ. ಹಾಗೆಯೇ ಈ ಬೇಡರ ಸೈನ್ಯವನ್ನು ಚಿತ್ರದುರ್ಗದಲ್ಲಿಯೇ ಬಿಟ್ಟರೆ ಮತ್ತೆ ನಮಗೆ ತೊಂದರೆ ತಪ್ಪಿದ್ದಲ್ಲ ಎಂದು ತಿಳಿದು ಹೈದರಾಲಿಯು ಅವರನ್ನು ಸೆರೆ ಹಿಡಿದುಕೊಂಡು ತಂದು ಶ್ರೀರಂಗಪಟ್ಟಣದ ಹತ್ತಿರ ಇವರಿಗೆ ಒಂದು ಊರನ್ನು ಕಟ್ಟಿಸಿ ಅದಕ್ಕೆ ಬೇಡರಹಳ್ಳಿ ಎಂದು ಕರೆಯುತ್ತಾನೆ''. ಇವನ ಕಾಲದಲ್ಲಿ ಮುಸಲ್ಮಾನರು ನಮ್ಮ ಸಮುದಾಯದ ಹೆಣ್ಣು ಮಕ್ಕಳಿಗೆ ಹಾಗೂ ಹಿರಿಯರಿಗೆ ತುಂಬಾ ತೊಂದರೆ ನೀಡುತ್ತಿದ್ದರು. ನಮ್ಮ ಹಿರಿಯರು ನಾಯಿ ಮುಟ್ಟಿದ ಮೂಳೆ ನಾಯಿಗೆ ಎಸೆಯುವುದು ಎಂದು ಹೇಳಿ ಅವರಿಗೆ ಬಿಟ್ಟು ಬಿಡುತ್ತಿದ್ದರು. ಆದರೆ ಅವರ ಹೆಣ್ಣು ಮಕ್ಕಳನ್ನು ನಮ್ಮವರು ಹಿಂಸಿಸಿದರೆ ಅವರಿಗೆ ಕಠಿಣ ಶಿಕ್ಷೆ, ಮರಣದಂಡನೆಯನ್ನು ವಿಧಿಸುತ್ತಿದ್ದರು. ಅದಕ್ಕಾಗಿ ಜೀವಭಯದಿಂದ ಹೆದರಿ, ಓಡಿ ಬಂದಂತಹ ಇವರು ದಕ್ಷಿಣದ ದಟ್ಟ ಅರಣ್ಯದಲ್ಲಿ ಆಶ್ರಯ ಪಡೆದು ಜೀವನ ನಡೆಸತೊಡಗಿದರು. ಸ್ಥಳೀಯ ಆದಕಾರಣ ಜನತೆಯು ಓಡಿ ಬಂದ ಇವರನ್ನು ಒಡಿಗರು ಎಂದು ಗುರುತಿಸಿದ್ದಾರೆ.

**ಅಡಿ ಟಿಪ್ಪಣಿಗಳು**

೧ ನಿರಂಜನ : ಜ್ಞಾನಗಂಗೋತ್ರಿ, ಕಿರಿಯರ ವಿಶ್ವಕೋಶ : (ಸಂಪುಟ-೭) : ೧೯೭೪.

೨ ಅದೇ

೩ ಭಟ್ಟ ಜಿ.ಎಸ್. : ಮೈಸೂರು ತಾಲ್ಲೂಕು ದರ್ಶನ : ಐ.ಬಿ.ಎಚ್. ಪ್ರಕಾಶನ : ಬೆಂಗಳೂರು : ೧೯೮೬.

೪ ನಿರಂಜನ : ಜ್ಞಾನಗಂಗೋತ್ರಿ, ಕಿರಿಯರ ವಿಶ್ವಕೋಶ : (ಸಂಪುಟ-೭) : ೧೯೭೪.

೫ ಅದೇ

೬ ನಾಯಕ ಹಾ.ಮಾ. : ಕನ್ನಡ ವಿಷಯ ವಿಶ್ವಕೋಶ : ಮೈಸೂರು ವಿಶ್ವವಿದ್ಯಾಲಯ : ಮೈಸೂರು : ೧೯೭೯.

೭ Discovery of wayanad : The Green Paradise : Kalpeta : 1994.

೮ ಅದೇ

೯ ನರಸಿಂಹಾಚಾರ್ ಡಿ.ಎಲ್. : ಕನ್ನಡ ನಿಘಂಟು (ಸಂ-೧) : ಕನ್ನಡ ಸಾಹಿತ್ಯ ಪರಿಷತ್ತು : ಬೆಂಗಳೂರು : ೧೯೭೦.

೧೦ ಕೂಳಂಬೆ ಪುಟ್ಟಣ್ಣಗೌಡರು : ಅಚ್ಚಗನ್ನಡ ನುಡಿಕೋಶ : ಪುಸ್ತಕ ಪ್ರಕಾಶನ ಸರಸ್ವತಿಪುರಂ : ಮೈಸೂರು : ೧೯೯೩.

೧೧ ಲಕ್ಷ್ಮಣ್ ತೆಲಗಾವಿ, ಶ್ರೀನಿವಾಸ್ ಎಂ.ವಿ. : ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು : ಚಿತ್ರದುರ್ಗ: ೧೯೭೬.

## ಅಧ್ಯಾಯ - ೩

# ಸಾಮಾಜಿಕ ವ್ಯವಸ್ಥೆ

### ಪ್ರವೇಶ

## ಪ್ರವೇಶ

ಸಮಾಜವು ಕೇವಲ ಜನರ ಒಂದುಗೂಡುವಿಕೆ ಮಾತ್ರವಲ್ಲ. ಅದು ಸಾಮಾಜಿಕ ಸಂಬಂಧಗಳ ಬಲೆ. ಸಮಾಜವು ತನ್ನ ಕ್ರಮಬದ್ಧತೆಯನ್ನು, ವ್ಯವಸ್ಥೆಯನ್ನು ಕಾಯ್ದುಕೊಳ್ಳಲು ಪರಂಪರೆಗಳು, ಲೋಕ ರೂಢಿಗಳು, ಧರ್ಮ, ನೀತಿ, ಕಟ್ಟುಪಾಡುಗಳು, ಸಾಂಸ್ಕೃತಿಕ ಮೌಲ್ಯಗಳು ಮುಂತಾದ ಅಂಶಗಳ ಮೂಲಕ ಸಮಾಜದಲ್ಲಿ ಬದುಕುವ ವ್ಯಕ್ತಿಯನ್ನು ನಿಯಂತ್ರಿಸಲಾಗುತ್ತದೆ. ಪ್ರತಿಯೊಬ್ಬ ವ್ಯಕ್ತಿಯೂ ಸಮಾಜದ ಒಬ್ಬ ಸದಸ್ಯನಾಗಿ, ಅಲ್ಲಿನ ಸಂವಿಧಾನ ಬದ್ಧ ನಿಯಮಗಳಿಗೆ ಹೊಂದಿಕೊಂಡು ಪಾಲಿಸಬೇಕಾಗುತ್ತದೆ. ಈ ದೃಷ್ಟಿಯಿಂದಲೇ ಮನುಷ್ಯ ಸಮಾಜಜೀವಿ. ಆ ಬಗ್ಗೆ ಅವನಿಗೆ ಅರಿವಿರುತ್ತದೆ, ಗೌರವವಿರುತ್ತದೆ.

ಸಮಾಜಕ್ಕೆ ಕುಟುಂಬವೇ ಮೂಲಾಧಾರ. ಸಮಾಜದ ಎಲ್ಲ ಸಂಸ್ಥೆಗಳು, ಪಂಗಡಗಳು, ವೃತ್ತಿಗಳು, ರೀತಿ ನೀತಿಗಳು, ಆಚರಣೆಗಳು ಮುಂತಾದ ಹತ್ತು ಹಲವಾರು ಸಂಗತಿಗಳು ಇಲ್ಲಿ ಸಮಾವೇಶಗೊಳ್ಳುತ್ತವೆ. ಸಮಾಜದಲ್ಲಿ ಜೀವಿಸುವ ಹಲವಾರು ಭಿನ್ನ ರೀತಿಯ ವ್ಯಕ್ತಿಗಳು ತಮ್ಮದೇ ಆದಂತಹ ಜಾತಿ, ವರ್ಗ, ವರ್ಣದ ನೆಲೆಯಲ್ಲಿ ವಿಭಜನೆಗೊಂಡಿದ್ದಾರೆ. ಈ ಒಂದೊಂದು ವಿಭಜಿತ ಘಟಕಗಳು ತಮ್ಮದೇ ಆದ ಜೀವನ ವಿಧಾನ, ವಾಸದ ನೆಲೆ, ಆಚಾರ-ವಿಚಾರ, ಸಂಪ್ರದಾಯಗಳನ್ನು ರೂಢಿಸಿಕೊಂಡಿದ್ದಾರೆ. ಆ ಮೂಲಕ ಸಾಮಾಜಿಕ ವ್ಯವಸ್ಥೆಯಲ್ಲಿ ವಿಭಿನ್ನ ಬಗೆಯ ಸಾಂಸ್ಕೃತಿಕ ಅಂಶಗಳನ್ನು ಉಳಿಸಿಕೊಂಡಿದ್ದಾರೆ.

ಸಮಾಜ ಕೇವಲ ಕುಟುಂಬದಲ್ಲಿನ ವ್ಯಕ್ತಿಗಳ ಸಮೂಹವಾಗಿರದೇ ''ಪರಸ್ಪರ ವಿವಿಧ ಬಗೆಯ ಕುಟುಂಬ, ಕುಲವೃಂದ ಸಂಬಂಧವುಳ್ಳ ಜನತೆಯ ಒಂದು ಆಂತರಿಕ ವ್ಯವಸ್ಥೆ. ವಿಶಾಲಾರ್ಥದಲ್ಲಿ ಇದು ಇತರೆ ಕೀಟ, ಪ್ರಾಣಿ, ಪಕ್ಷಿಗಳು, ನೀರು, ಆಹಾರಗಳು ಈ ಆಹಾರಕ್ಕಾಗಿ ಸಂಚರಿಸುವ ರೀತಿ ಹೀಗೆ ಹಲವಾರು ಬಗೆಯ ಅನ್ಯೋನ್ಯ ಸಂಬಂಧಗಳೂ ಇವೆ. ಇವು ಆಯಾ ಜೀವಿಗಳ ಒಂದು ಬಗೆಯ ಒಗ್ಗಟ್ಟು ಅಥವಾ ಏಕತೆಯ ಸಂಕೇತ. ಆದರೆ ಮಾನವ ಸಮುದಾಯದಲ್ಲಿ ಈ ಬಗೆಯ ಏಕತೆಯು ಅವರವರ ನಡುವೆ ಏರ್ಪಟ್ಟ ವಾಸ್ತವ ನೆಲೆಯ ಆಂತರಿಕವಾದ ಗಾಢ ನಿಕಟ ಸಂಬಂಧಗಳನ್ನು ಅವಲಂಬಿಸಿರುತ್ತದೆ. ಕೆಲವು ನೀತಿ ಸೂತ್ರ ಶಿಸ್ತುಗಳಿಗೆ ಒಳಪಟ್ಟು ಸುಸಂಘಟಿತ ಸಮುದಾಯವನ್ನು ನಾವು ಸಮಾಜ ಎನ್ನುತ್ತೇವೆ. ವ್ಯಕ್ತಿಗಳ ವ್ಯವಸ್ಥಿತ ಸಮೂಹಕ್ಕೆ ಸಮಾಜವೆಂಬ ಪದ ಅನ್ವಯಿಸುತ್ತದೆ. ಇಂಥ ಒಂದು ಸಮಾಜದಲ್ಲಿ ವಿವಿಧ ಅಂಗಗಳಿರುತ್ತವೆ. ಕುಟುಂಬ, ವರ್ಗ, ಗುಂಪು ಮುಂತಾದವು ಆಯಾ ಸಾಮಾಜಿಕ ನಡೆವಳಿಕೆ ಅವರವರ ರಾಜಕೀಯ, ಆರ್ಥಿಕ, ಧಾರ್ಮಿಕ ನೆಲೆಗಟ್ಟಿನ ಮೇಲೆ ನಿಂತಿರುತ್ತವೆ.''[1]

ಸಾಮಾಜಿಕ ಸಂಸ್ಥೆಗಳಲ್ಲಿ ಕುಟಂಬವು ಅತ್ಯಂತ ಚಿಕ್ಕ ಘಟಕ. ಆದರೂ ಅವುಗಳಲ್ಲಿ ಮೂಲ ಸಂಸ್ಥೆ. ಏಕೆಂದರೆ ಇತರ ಎಲ್ಲ ಘಟಕಗಳು ಆಧಾರವಾಗಿರುವುದು ಈ ಕುಟುಂಬದ ಮೇಲೆ. ಕುಟುಂಬವಿಲ್ಲದೇ ಸಮಾಜವಿರಲು ಸಾಧ್ಯವಿಲ್ಲ.

ಬುಡಕಟ್ಟು ಸಮುದಾಯಗಳು ಮೇಲ್ನೋಟಕ್ಕೆ ಸರಳವೆಂದು ಕಂಡುಬಂದರೂ ಕುಟುಂಬ ವ್ಯವಸ್ಥೆಯಲ್ಲಿ ತಮ್ಮದೇ ಆದಂತಹ ವೈಶಿಷ್ಟ್ಯಗಳನ್ನು ಹೊಂದಿದ್ದಾರೆ. ಅವರು ಕಾಡುವಾಸಿಗಳಾದರೂ, ಅಲ್ಲಿಯೇ ಒಂದು ಸಮಾಜವನ್ನು

ನಿರ್ಮಿಸಿಕೊಂಡಿದ್ದಾರೆ. ಆ ಮೂಲಕ ತಮ್ಮ ಸಮುದಾಯದ ಸಂಪ್ರದಾಯ, ನಂಬಿಕೆ, ನಿಷೇಧಗಳಂತಹ ಸಾಂಸ್ಕೃತಿಕ ಅಂಶಗಳನ್ನು ಉಳಿಸಿಕೊಂಡಿದ್ದಾರೆ. ಅದರಂತೆ ಒಡಿಗ ಬುಡಕಟ್ಟು ಸಮುದಾಯವೂ ಆರಂಭದ ಕಾಡು ಜೀವನ ಮತ್ತು ಇಂದಿನ ನಾಡು ಜೀವನದ ನಡುವಿನ ಸಾಮಾಜಿಕ ಜೀವನದಲ್ಲಿ ತನ್ನದೇ ವೈಶಿಷ್ಟ್ಯವನ್ನು ಪಡೆದುಕೊಂಡಿದೆ. ಇವರಲ್ಲಿ ಇರುವ ಅಂತಹ ಸಾಮಾಜಿಕ ಅಂಶಗಳನ್ನು ಕೆಲವು ಮುಖ್ಯ ಅಂಶಗಳ ಮೂಲಕ ಹೀಗೆ ವಿವರಿಸಬಹುದು.

**೩ : ೧ ಕುಟುಂಬ (ಜೀವನ) ಪದ್ಧತಿ**

ಒಡಿಗ ಸಮುದಾಯದಲ್ಲಿ ಮುಖ್ಯವಾಗಿ ಪಿತೃಪ್ರಧಾನ ಕುಟುಂಬ ಪದ್ಧತಿ ರೂಢಿಯಲ್ಲಿದೆ. ಇವರಲ್ಲಿ ಮಾತೃಪ್ರಧಾನ ವ್ಯವಸ್ಥೆಯಿಲ್ಲ. ಮನೆಯ ಒಡೆತನವನ್ನು ಪುರುಷನೇ ನಿರ್ವಹಿಸುತ್ತಾನೆ. ಒಡಿಗರಲ್ಲಿ ಅವಿಭಕ್ತ ಕುಟುಂಬ ಮತ್ತು ವಿಭಕ್ತ ಕುಟುಂಬ ವ್ಯವಸ್ಥೆಯಿದೆ. ಈ ಸಮುದಾಯದಲ್ಲಿ ವಿಭಕ್ತ ಕುಟುಂಬಗಳೇ ಹೆಚ್ಚು. ಅಲ್ಲಲ್ಲಿ ಕೂಡು ಕುಟುಂಬವಿರುವುದು ಕಂಡುಬಂದಿದೆ. ಅವಿಭಕ್ತ ಕುಟುಂಬ ವ್ಯವಸ್ಥೆಯಲ್ಲಿ ಸಾಮಾನ್ಯವಾಗಿ ೧೫-೨೦ ರವರೆಗೆ ಜನಸಂಖ್ಯೆಯಿರುತ್ತದೆ. ಇವರಲ್ಲಿ ಹಿರಿಯ ಅಣ್ಣನೇ ಮನೆಯನ್ನು ನಿರ್ವಹಿಸುತ್ತಾನೆ. ಅವನೇ ಮನೆಯ ಮುಖ್ಯಸ್ಥ. ಮನೆಯ ಉಳಿದ ಸದಸ್ಯರು ಇವನನ್ನು ಅನುಸರಿಸಬೇಕು. ಯಾವುದೇ ವಿಚಾರದಲ್ಲಿ ತೀರ್ಮಾನ ತೆಗೆದುಕೊಳ್ಳುವಾಗ ಮುಖ್ಯಸ್ಥನ ನಿರ್ಣಯವೇ ಅಂತಿಮವಾಗಿರುತ್ತದೆ. ಕೆಲವೊಮ್ಮೆ ಕಿರಿಯರೊಂದಿಗೆ ಸಮಾಲೋಚನೆ ನಡೆಸುತ್ತಾನೆ. ಕುಟುಂಬದ ಪ್ರತಿಯೊಂದು ಕೆಲಸ-ಕಾರ್ಯಗಳ ನಿರ್ವಹಣೆ ಮುಖ್ಯಸ್ಥನ ಜವಾಬ್ದಾರಿ ಇವರ ಕುಟುಂಬಗಳಲ್ಲಿ ಏಕಸ್ವಾಮ್ಯತ್ವದಿಂದ ಕೂಡಿರುತ್ತದೆ.

ಕುಟುಂಬದ ಯಜಮಾನಿಕೆಯು ಕ್ರಮದಲ್ಲಿ ಬರುತ್ತದೆ. ಮೊದಲು ಹಿರಿಯ ನಂತರ ಶ್ರೇಣಿಯಾಧಾರದ ಮೇಲೆ ಮನೆಯ ಜವಾಬ್ದಾರಿಯನ್ನು ತೆಗೆದುಕೊಳ್ಳುತ್ತಾರೆ. ಕೆಲವೊಮ್ಮೆ ಕಿರಿಯ ವ್ಯಕ್ತಿಯೇ ಅಣ್ಣನಿಗಿಂತಲೂ ಬುದ್ಧಿವಂತನಾಗಿದ್ದಲ್ಲಿ, ಮನೆಯನ್ನು ಅವನೇ ನಿರ್ವಹಿಸಿಕೊಂಡು ಹೋಗುತ್ತಾನೆ. ಕುಟುಂಬ ಮುಖ್ಯಸ್ಥನು ಮಾಡಿದ ವೆಚ್ಚ, ಸಾಲವನ್ನು ಉಳಿದವರು ಪ್ರಾಮಾಣಿಕವಾಗಿ ಒಪ್ಪಿಕೊಳ್ಳಬೇಕು. ಅಲ್ಲದೇ ಕುಟುಂಬದಲ್ಲಿ ನಡೆಯುವ ಮದುವೆ, ಹಬ್ಬ, ಆಚರಣೆ ಮುಂತಾದುವುಗಳು ಮನೆಯ ಮುಖ್ಯಸ್ಥನ ಸುಪರ್ದಿಯಲ್ಲೇ ನಡೆಯುತ್ತವೆ. ಕುಟುಂಬದ ಮಕ್ಕಳಿಗೆ ಅನ್ನ, ಬಟ್ಟೆಯನ್ನು ತರುವುದು, ತಂದೆ-ತಾಯಿಗಳನ್ನು ಪೋಷಿಸುವುದು ಇವನ ಕರ್ತವ್ಯವಾಗಿರುತ್ತದೆ. ಕುಟುಂಬದಲ್ಲಿ ಉಂಟಾಗುವ ಆಂತರಿಕ ಭಿನ್ನಾಭಿಪ್ರಾಯಗಳನ್ನು ಮುಖ್ಯಸ್ಥನೇ ಬಗೆಹರಿಸುತ್ತಾನೆ. ಇಲ್ಲಿ ಹೆಚ್ಚು ರಕ್ತ ಸಂಬಂಧದ ಭಾವನಾತ್ಮಕ ಸಂಬಂಧಗಳಿರುತ್ತವೆ.

ಒಡಿಗರ ವಿಭಕ್ತ ಕುಟುಂಬ ವ್ಯವಸ್ಥೆಯಲ್ಲಿ ಪತಿ-ಪತ್ನಿ ಮತ್ತು ಮಕ್ಕಳು ಇರುತ್ತಾರೆ. ಇಲ್ಲಿ ತಂದೆಯೇ ಮುಖ್ಯಸ್ಥನಾಗಿರುತ್ತಾನೆ. ತನ್ನ ಪತ್ನಿ ಮತ್ತು ಮಕ್ಕಳ ಸಂಪೂರ್ಣ ಜವಾಬ್ದಾರಿ ಇವನ ಮೇಲಿರುತ್ತದೆ. ಮಕ್ಕಳು ವಿವಾಹ ಮಾಡಿಕೊಂಡ ಬಳಿಕ ತನ್ನ ಕುಟುಂಬವನ್ನು ಬೇರೆ ಮನೆಗೆ ವರ್ಗಾಯಿಸುವ ಪದ್ಧತಿಯಿದೆ. ತಂದೆ-ತಾಯಿ ಬಂಧು ವರ್ಗದವರೊಡನೆ ಅವಿನಾಭಾವ ಸಂಬಂಧದಿಂದ ಇರುವುದರೊಂದಿಗೆ ವಿಭಕ್ತ ಕುಟುಂಬ ಸುಖಮಯ ವಾಗಿರುತ್ತದೆ.

ವಿಭಕ್ತ ಕುಟುಂಬಗಳು ತಮ್ಮ ಕುಲದ ಬೆಡಗನ್ನು ಸೂಚಿಸುವಾಗ ಮೂಲತಃ ತಮ್ಮ ತಂದೆಯ ಬೆಡಗನ್ನೇ ಗುರುತಿಸುತ್ತಾರೆ. ಒಡಿಗರಲ್ಲಿ ವಿಭಕ್ತ ಕುಟುಂಬ ವಿಧಾನ ಹಿಂದಿನಿಂದಲೂ ಕಂಡುಬಂದಿದೆ. ಮದುವೆಯ ಬಳಿಕ ಗಂಡ-ಹೆಂಡತಿ ಪ್ರತ್ಯೇಕ ಮನೆಯಲ್ಲಿ ವಾಸಿಸಲು ಆರಂಭಿಸುತ್ತಾರೆ. ಅವಿಭಕ್ತ ಕುಟುಂಬಗಳಲ್ಲಿ ಸದಸ್ಯರ ಸಂಖ್ಯೆ ಹೆಚ್ಚಾಗಿದ್ದು ದಾಯಾದಿ ಮತ್ಸರ ಏರ್ಪಡುತ್ತದೆ. ಈ ಕಾರಣದಿಂದ ವಿಭಕ್ತ ಕುಟುಂಬ ಪದ್ಧತಿಯನ್ನೇ ಇವರು ಹೆಚ್ಚು ಅನುಸರಿಸುತ್ತಾರೆ. ವಿಭಕ್ತ ಕುಟುಂಬಗಳು ತಂದೆಯ ರಕ್ತ ಸಂಬಂಧವನ್ನು ಅಧಿಕವಾಗಿ ನೆಚ್ಚುವರು. ಅಲ್ಲದೇ ಅಜ್ಜ-ಅಜ್ಜಿ, ಮೊಮ್ಮಕ್ಕಳು ಮುಂತಾದ ಬಂಧು ವರ್ಗದವರನ್ನು ಪ್ರೀತಿಯಿಂದ ಕಾಣುತ್ತಾರೆ. ಮುಖ್ಯವಾಗಿ ಒಡಿಗ ಸಮುದಾಯವು ಇಪ್ಪತ್ತು ಮೂವತ್ತು ವಿಭಕ್ತ ಕುಟುಂಬಗಳು ಒಂದೆಡೆ ಗುಂಪಾಗಿ ನೆಲೆಸುವರು. ಈ ಕುಟುಂಬಗಳು ಇರುವುದನ್ನು 'ಊರು' ಎಂದು ಕರೆಯುತ್ತಾರೆ. ಊರಿಗೆ ಒಬ್ಬ ಮುಖಂಡನನ್ನು ನಿಯಮಿಸುತ್ತಾರೆ. ಈ ಮುಖಂಡ ಊರಿನ ಎಲ್ಲ ಲೋಕೋಪಯೋಗಿ ಕಾರ್ಯಗಳನ್ನು ನಿರ್ವಹಿಸಬೇಕು. ಒಡಿಗರು ಒಂದೊಂದು ಮನೆಯನ್ನು ಒಂದೊಂದು ಊರು ಎಂಬುದಾಗಿ ಕರೆದುಕೊಳ್ಳುವರು. ಒಂದು ಮನೆಗೆ ಹೋಗಬೇಕಾದರೆ 'ಆ ಊರಿಗೆ ಹೋಗಿ ಬರುತ್ತೇನೆ' ಎಂದು ಹೇಳುತ್ತಾರೆ.

### ೩ : ೨ ಒಡಿಗ ಸಮುದಾಯದ ಒಳ ಪಂಗಡಗಳು

ಭಾರತದಲ್ಲಿ ವಾಸಿಸುವ ಪ್ರತಿಯೊಂದು ಸಮುದಾಯಗಳು ತಮ್ಮದೇ ಆದಂತಹ ನಿರ್ದಿಷ್ಟ ಜಾತಿಯೊಂದಿಗೆ, ಅದರಲ್ಲಿ ಹಲವಾರು ಉಪಪಂಗಡಗಳನ್ನು ರೂಪಿಸಿಕೊಂಡಿರುವುದು ತಿಳಿಯುತ್ತದೆ. ಕಾಡುವಾಸಿಗಳಾದ ಬುಡಕಟ್ಟು ಜನವರ್ಗವೂ ಈ ಬಗೆಯ ಹಲವಾರು ಒಳಪಂಗಡಗಳನ್ನು ಹೊಂದಿದೆ. ಒಡಿಗ ಸಮುದಾಯವೂ ಕೆಲವಾರು ಒಳಪಂಗಡಗಳನ್ನು ಹೊಂದಿವೆ. ಒಡಿಗರ ಒಳಪಂಗಡಗಳಲ್ಲಿ ಮುಖ್ಯವಾಗಿ ಎಂಟು ಬಗೆಗಳಿವೆ. ಅವು ಇಂತಿವೆ:

೧ ಸಾಣಗಾಲ (ಮಾಸಾಲು ಸೀಮೆಯವರು)

೨ ಬರಗೂರು (ಒಳಸಾಲು ಸೀಮೆಯವರು)

೩ ಹೆಗ್ಗನೂರು (ಒಳಸಾಲು ಸೀಮೆಯವರು)

೪ ಬೇಗೂರು

೫ ಎಡಕೋಡು

೬ ಬೆಳಗೋಳು

೭ ಭೂದಾಡಿ

೮ ಕಡಬೂರು

ಈ ಎಂಟು ಒಳಪಂಗಡಗಳನ್ನು ಆಯಾ ಊರುಗಳ ಹೆಸರಿನಿಂದಲೇ ಗುರುತಿಸಿದ್ದಾರೆ. ಇವರು ಒಟ್ಟಾರೆ ಒಡಿಗ

ಸಮುದಾಯದವರೇ ಆಗಿದ್ದು, ಇವರು ವಾಸಿಸುವ ಊರುಗಳಿಂದಲೇ ಇವರನ್ನು ಒಳಪಂಗಡಗಳಾಗಿ ಗುರುತಿಸಿರುವುದು ವಿಶೇಷವಾಗಿದೆ. ಇದು ಆಯಾ ಭೌಗೋಳಿಕ ವಲಯವನ್ನು ಆಧರಿಸಿದೆ. ಈ ಎಂಟು ಊರುಗಳಲ್ಲಿ ವಾಸಿಸುವ ಒಡಿಗರನ್ನು ''ಎಂಟಳ್ಳಿಯವರು'' ಎಂದು ಕರೆಯುತ್ತಾರೆ. ಈ ಎಂಟು ಪ್ರಾದೇಶಿಕ ಕುಟುಂಬ ವರ್ಗದವರ ನಂಬಿಕೆ, ಆಚರಣೆ, ಸಂಪ್ರದಾಯ, ಹಬ್ಬ ಮುಂತಾದ ಸಾಂಸ್ಕೃತಿಕ ಅಂಶಗಳಲ್ಲಿ ಏಕತೆಯಿರುವುದು ಕಂಡುಬರುತ್ತದೆ.

ಕಡಬೂರು ಪಂಗಡ ಆನಂತರದಲ್ಲಿ ಬಂದು ಸೇರಿದ ಪಂಗಡವೆಂದು ಒಡಿಗರು ಹೇಳುತ್ತಾರೆ. ಮುಖ್ಯವಾಗಿ ಎಡಕೋಡು ಪಂಗಡದವರು ಮಾಂಸಾಹಾರಿಗಳಲ್ಲ. ಇಂದಿಗೂ ಎಡಕೋಡು ಪಂಗಡದ ಜನರು ಮಾಂಸಾಹಾರ ಸೇವಿಸುವುದಿಲ್ಲ. ಆದರೆ ಉಳಿದಂತೆ ಎಲ್ಲಾ ಸಾಂಸ್ಕೃತಿಕ ಆಚರಣೆಗಳು ಏಕ ಮಾದರಿಯಲ್ಲಿವೆ.

ಒಡಿಗರಲ್ಲಿ ಶೈವ ಮತ್ತು ವೈಷ್ಣವ ಪಂಥವನ್ನು ಅನುಸರಿಸುವ ಪಂಗಡಗಳಿವೆ. ಅವರವರ ಕೌಟುಂಬಿಕ ನೆಲೆಯಲ್ಲಿ ಆಯಾ ಧಾರ್ಮಿಕ ಪೂಜಾವಿಧಿಗಳನ್ನು ಮಾಡುತ್ತಾರೆ. ಒಡಿಗರ ಪಂಗಡಗಳಲ್ಲಿರುವ ಈ ದೈವಆರಾಧನಾ ಗುಂಪುಗಳು ಹೀಗಿವೆ.

| ವೈಷ್ಣವ ಪಂಥದ ಅನುಯಾಯಿಗಳು | ಶೈವ ಪಂಥದ ಅನುಯಾಯಿಗಳು |
|---|---|
| ೧ ಸಾಣಗಾಲ | ೧ ಬೇಗೂರು |
| ೨ ಬರಗೂರು | ೨ ಎಡಕೋಡು |
| ೩ ಬೆಳಗೋಳು | |
| ೪ ಭೂದಾಡಿ | |
| ೫ ಕಡಬೂರು | |
| ೬ ಹೆಗ್ಗನೂರು | |

ವೈಷ್ಣವ ಪಂಥದ ಅನುಯಾಯಿಗಳನ್ನು ''ಗೂಡುಮನೆಯವರೆಂದೂ'', ಶೈವ ಪಂಥದ ಅನುಯಾಯಿಗಳನ್ನು ''ಮುಳ್ಳು ಮನೆಯವರು'' ಎಂದು ಕರೆಯುತ್ತಾರೆ. ಇವರ ಹಬ್ಬ ಆಚರಣೆಗಳನ್ನು ಗಮನಿಸಿದರೆ ಮೂಲತಃ ಎಲ್ಲರೂ ಶೈವ ಪಂಥದವರಾಗಿರಬೇಕೆಂದು ತಿಳಿಯುತ್ತದೆ. ಕ್ರಮೇಣ ಇವರು ವೈಷ್ಣವ ದೈವಾನುಯಾಯಿಗಳಾಗಿರಬೇಕು. ೧೨ನೇ ಶತಮಾನದ ನಂತರ ರಾಮಾನುಜಾಚಾರ್ಯರ ವೈದಿಕ ಪಂಥದ ಪ್ರಚಾರದಿಂದಾಗಿ ಮೈಸೂರು ಜಿಲ್ಲೆಯಲ್ಲಿ ವೈಷ್ಣವ ಧರ್ಮ ಪ್ರಬಲವಾಯಿತು. ಮುಂದೆ ಈ ಸಮುದಾಯ ಅಲ್ಲಿಗೆ ಬಂದ ಮೇಲೆ ಪ್ರಾದೇಶಿಕ ಧರ್ಮವನ್ನು ಆಚರಣಾ ನೆಲೆಯಲ್ಲಿ ಸ್ವೀಕರಿಸಿರಬಹುದು. ಒಡಿಗರ ಮೂಲ ದೈವಗಳು ಆರಂಭದಲ್ಲಿ ಪ್ರಾಕೃತಿಕ ಅಂಶಗಳನ್ನೊಂದಿದ ಗಾಳಿ, ಕಲ್ಲು ಮುಂತಾದ ನಿಸರ್ಗ ದೈವಗಳನ್ನು ಪೂಜಿಸುತ್ತಿದ್ದರು. ಇಂದು ಒಡಿಗರು ಎಂಟು ಪಂಗಡದಲ್ಲಿದ್ದು, ಅವರು

ಪ್ರತ್ಯೇಕವಾಗಿ ಒಂದೊಂದು ಪಂಗಡದವರು, ಒಂದೊಂದು ದೇವರನ್ನು ಪೂಜಿಸುತ್ತಾರೆ. ಅವುಗಳನ್ನು ಹೀಗೆ ಪಟ್ಟಿ ಮಾಡಲಾಗಿದೆ :

| ಒಡಿಗರ ಪಂಗಡಗಳು | ಕುಲದೈವಗಳು |
|---|---|
| ೧ ಸಾಣಗಾಲ | ೧ ವೆಂಕಟೇಶ್ವರ (ತಿರುಪತಿ) |
| | ೨ ಕರಿಗಾಳಿತಾಯಿ |
| | ೩ ಮೇಲ್‌ದ್ಯೆಯ |
| ೨ ಬರಗೂರು | ೧ ವೆಂಕಟೇಶ್ವರ |
| | ೨ ಮೀರಕೆ ಮಾರೆಮ್ಮ |
| ೩ ಹೆಗ್ಗನೂರು | ೧ ಮಸನಿ |
| | ೨ ವೆಂಕಟೇಶ್ವರ |
| ೪ ಎಡಕೋಡು | ೧ ದಾಸ್ತಮ್ಮ |
| ೫ ಬೆಳಗೋಳು | ೧ ಮಾರಿ |
| | ೨ ವೆಂಕಟೇಶ್ವರ |
| ೬ ಭೂದಾಡಿ | ೧ ಹಿರಪಟ್ಟು ಭೂದಾಡಿ |
| | ೨ ವೆಂಕಟೇಶ್ವರ |
| ೭ ಬೇಗೂರು (ದೇವರಗುಡ್ಡ) | ೧ ಮಲ್ಲೇಶ್ವರ ಸ್ವಾಮಿ |
| ೮ ಕಡಬೂರು | ೧ ವೆಂಕಟೇಶ್ವರ |
| | ೨ ಬೊಮ್ಮಣ್ಣ |

ಶೈವ ಪಂಥದ ಅನುಯಾಯಿಗಳು ಒಡಿಗರಲ್ಲಿ ಕಡಿಮೆ ಸಂಖ್ಯೆಯಲ್ಲಿದ್ದಾರೆ. ವೈಷ್ಣವ ಪಂಥವನ್ನು ಆರಾಧಿಸುವವರೇ ಅಧಿಕ ಸಂಖ್ಯೆಯಲ್ಲಿದ್ದಾರೆ.

**೩ : ೩ ಒಡಿಗರ ಬೆಡಗುಗಳು**

ಸಮುದಾಯದಲ್ಲಿರುವ ಕೆಲವು ವಿಭಜನೆಗಳನ್ನು ಪಂಗಡಗಳೆಂದು, ಈ ಒಂದೊಂದು ಪಂಗಡಬಲ್ಲಿರುವ ವಿಶಿಷ್ಟ ಉಪಘಟಕಗಳನ್ನು ''ಬೆಡಗು''ಗಳೆಂದು ಕರೆಯುತ್ತಾರೆ. ಒಂದೇ ಪಂಗಡದಲ್ಲಿ ಈ ಬಗೆಯ ಬೆಡಗುಗಳ ಹುಟ್ಟಿಗೆ

ಕಾರಣವೇನು ಎಂಬ ಬಗ್ಗೆ ನಿರ್ದಿಷ್ಟವಾಗಿ ಹೇಳಲಾಗದು. ಬಹುಶಃ ಭೌಗೋಳಿಕವಾಗಿ ಬೇರೆ ಬೇರೆ ಪ್ರಾಂತ್ಯಗಳಲ್ಲಿ ವಾಸಿಸುವಾಗ ಸಮುದಾಯಗಳಲ್ಲಿ ಈ ರೀತಿಯ ಪಂಗಡ, ಬೆಡಗುಗಳ ಸೃಷ್ಟಿಗೆ ಕಾರಣವಾಗಿದೆ. ಒಡಿಗರಲ್ಲಿಯೂ ಕೆಲವು ಬೆಡಗುಗಳಿವೆ. ಅವುಗಳನ್ನು ಕೆಳಗೆ ದಾಖಲಿಸಲಾಗಿದೆ.

| ಒಡಿಗರ ಪಂಗಡಗಳು | ಒಡಿಗರ ಬೆಡಗುಗಳು | |
|---|---|---|
| ೧ ಸಾಣಗಾಲ | ೧ ಮೂಲೇರು | ೨ ಕಾಣಿಕೇರಿ |
| | ೩ ಮೊಟ್ಟೆ | ೪ ಜಡೇರು |
| | ೫ ಸಪ್ಪೆ | ೬ ಪೂಜಾರಿ |
| | ೭ ಬಾಯಾರ್ | ೮ ದಾಸರು |
| | ೯ ಪಾರೇರಿ | ೧೦ ಗುಂಡಿರು |
| | ೧೧ ದೊಡ್ಡಮನೆ | |
| ೨ ಬರಗೂರು | ೧ ಕೋಲುಕಾರ | ೨ ಕಾರೇರಿ |
| | ೩ ಬೊಗಾದಿ | ೪ ನುಳ್ಳಿ |
| | ೫ ಪಚ್ಚೆ ಪೊಗೆ | ೬ ಕಟ್ಟೆಕಂಡಿ |
| | ೭ ಈರಗುಡಿ | |
| ೩ ಹೆಗ್ಗನೂರು | ೧ ಊಂಜುಬೆಲ್ಲು (ಕೊಂಡಕೋಲುದಾಸರು) | |
| | ೨ ಗೊಟ್ಟಮುಟ್ಟಿ | ೩ ಮದ್ದೋರು |
| | ೪ ಪಾಶೇ | ೫ ಮೋಟಿ |
| | ೬ ಎಂಡಿ | ೭ ಸುಂಡೆ |
| | ೮ ಬೇಟೆಗಾರ | ೯ ಮೇಗಲ್ಮನೆ |
| | ೧೦ ನಡುಕಮನೆ | ೧೧ ಕಡೇಮನ |
| | ೧೨ ಕುಳ್ಳಕರಿಯ | |
| ೪ ಬೇಗೂರು (ದೇವರಗುಡ್ಡ) | ೧ ದಂಡಿ | ೨ ಮುದ್ದಿನಮನೆ (ಮಾಡಳ್ಳಿ) |

| | | | |
|---|---|---|---|
| | ೩ ಆದಂಡ | ೪ ಗುಡ್ಡಿನಮನೆ |
| | ೫ ಇರಮುಕ್ಕಿ | ೬ ಹೊಸರಾಗಿ |
| | ೭ ಹೊಸಬಂಟಿ | ೮ ಹೆಂಚೇರಿಕಲ್ಲು |
| ೫ ಎಡಕೋಡು | ೧ ದೇವರಹಳ್ಳಿ (ಕ್ಯಾಲ) | |
| ೬ ಬೆಳಗೋಳು | ೧ ಕಾರೆಮ್ಮೆ | ೨ ಗಾಳಿಗುಂಪು |
| | ೩ ಸೂಳುಗೂಡು | ೪ ಎಡಗೆ |
| | ೫ ಚೆಲ್ಲೂರು ಕರಡಿ | ೬ ತಲ್ಮಲೆ |
| | ೭ ಐಗೂಲಿ | ೮ ಬಿಳಿಗಿರಿ |
| | ೯ ಕಿರನೂರು | |
| ೭ ಭೂದಾಡಿ | ೧ ನೆಟ್ಟ ಕಲ್ಲುಂಡಿ | ೨ ಮಾಚಿಮನೆ |
| | ೩ ಪೆಂಡೆ | |
| ೮ ಕಡಬೂರು | ೧ ಕಡಬೂರು (ಶೆಟ್ಟಿಕುತ್ತಿವಂಶ) | |

ಪ್ರತಿಯೊಂದು ಬುಡಕಟ್ಟಿನಲ್ಲಿಯೂ ಬೆಡಗುಗಳನ್ನು ಗುರುತಿಸಲು ಆಯಾ ಭೌಗೋಳಿಕ ಪ್ರದೇಶದ ಹೆಸರು ಇಲ್ಲವೇ ಕಾಡಿನಲ್ಲಿರುವ ಹೂ, ಗಿಡ, ಮರ, ಬಳ್ಳಿ ಹೀಗೆ ಹಲವಾರು ವಸ್ತು ವಿಷಯಗಳು ಬೆಡಗುಗಳಿಗೆ ಕಾರಣವಾಗಿವೆ. ಅಂತೆಯೇ ಒಡಿಗರಲ್ಲಿಯೂ ಆಯಾ ಪಂಗಡ ವಾಸಿಸುವ ಪ್ರದೇಶದ ಹೆಸರು, ಕೆಲವು ಘಟನೆಗಳು, ಕಾಡಿನ ಕೆಲವು ಅಂಶಗಳು ಬೆಡಗುಗಳಿಗೆ ಹೆಸರಾಗಿವೆ.

### ೩ : ೪ ಒಡಿಗರ ರಕ್ತ ಸಂಬಂಧ

ಒಡಿಗರ ಈ ಗುಂಪು ಬೆಡಗುಗಳಲ್ಲಿ ಒಂದೇ ಬೆಡಗಿಗೆ ಸೇರುವವರು ದಾಯಾದಿಗಳಾಗುತ್ತಾರೆ. ಈ ಅಣ್ಣ ತಮ್ಮಂದಿರ ಬೆಡಗುಗಳ ನಡುವೆ ವೈವಾಹಿಕ ಸಂಬಂಧ ನಡೆಯಲಾರದು. ಬೆಡಗು ಭಿನ್ನ ಭಿನ್ನವಾಗಿರುವವರ ನಡುವೆ ವೈವಾಹಿಕ ಸಂಬಂಧವಿರುತ್ತದೆ. ಒಂದೇ ಬೆಡಗಿನವರು ಹೆಚ್ಚಾಗಿ ಹತ್ತಿರದ ರಕ್ತ ಸಂಬಂಧಿಗಳಾಗಿರುತ್ತಾರೆ. ಇದರಿಂದ ಒಂದೇ ರಕ್ತದವರು ವಿವಾಹವಾದರೆ ದೈಹಿಕ ತೊಂದರೆಯಾಗುತ್ತದೆಂಬ ವೈಜ್ಞಾನಿಕ ತಿಳಿವು ಇವರಿಗಿದೆ. ಕಾರಣ ಬೀಗರು ಬೆಡಗುಗಳೊಂದಿಗೆ ವಿವಾಹ ಸಂಬಂಧ ಏರ್ಪಡಿಸಿಕೊಳ್ಳುತ್ತಾರೆ.

### ೩ : ೫ ನ್ಯಾಯ ಪದ್ಧತಿ

ಬುಡಕಟ್ಟು ಸಮುದಾಯಗಳು ಯಾವುದೇ ಪ್ರತ್ಯೇಕ ನ್ಯಾಯಾಲಯಗಳನ್ನು ಹೊಂದಿರುವುದಿಲ್ಲ. ಸಮುದಾಯಗಳಲ್ಲಿ

''ಒಂದು ಜನಸಮೂಹದ ನಂಬಿಕೆ, ಆಚರಣೆ, ಆದರ್ಶ, ಮೌಲ್ಯಗಳು ನ್ಯಾಯಪದ್ಧತಿಯನ್ನು ರೂಪಿಸುತ್ತವೆ''.[೨] ನ್ಯಾಯ ಪದ್ಧತಿಯ ಕ್ರಮವು ಬುಡಕಟ್ಟು ಸಮುದಾಯಗಳಲ್ಲಿ ನಿಷ್ಠೆಯಿಂದ ರೂಪಿತಗೊಂಡಿರುತ್ತವೆ. ತಮ್ಮ ಸಮುದಾಯದ ಹಿರಿಯನನ್ನು ನ್ಯಾಯಾಧೀಶನೆಂಬಂತೆ ಒಪ್ಪಿಕೊಂಡು, ತಾವು ವಾಸಿಸುವ ಸ್ಥಳವೇ ನ್ಯಾಯಾಲಯ ವಾಗಿರುತ್ತದೆ. ಒಡಿಗರಿಗೂ ಇದು ಸಾಮಾನ್ಯವಾಗಿದೆ. ತಮ್ಮ ಕುಟುಂಬದ ನಡುವೆ, ಇಲ್ಲವೆ ಸಮುದಾಯದ ಇತರೆ ವ್ಯಕ್ತಿಗಳೊಂದಿಗೆ ಯಾವುದಾದರೂ ವ್ಯಾಜ್ಯ ಉಂಟಾದರೆ ತಮ್ಮ ಸಮುದಾಯದ ನಡುವೆಯೇ ನ್ಯಾಯವನ್ನು ಬಗೆಹರಿಸಿಕೊಳ್ಳುತ್ತಾರೆ. ಒಡಿಗರಿಗೆ ತಮ್ಮ ಸಮುದಾಯದ ಹಿರಿಯನು ನ್ಯಾಯಾಧೀಶನಾಗಿರುತ್ತಾನೆ. ನ್ಯಾಯಾಧೀಶನು ನೀಡುವ ನ್ಯಾಯ ತೀರ್ಮಾನವನ್ನು ಜನರು ದೈವ ಸಮಾನವೆಂದು ತಿಳಿಯುತ್ತಾರೆ. ಸಮುದಾಯದಲ್ಲಿ ಕೂಡಿ ಬಾಳುವುದರಿಂದ ಜಗಳಗಳು ಕಡಿಮೆ.

ನ್ಯಾಯವನ್ನು ತೀರ್ಮಾನಿಸಲು ಹಿರಿಯ ಮುಖಂಡನಿರುತ್ತಾನೆ. ಇವನ ಪದವಿ ವಂಶಪಾರಂಪರ್ಯವಲ್ಲ. ಸಮುದಾಯದಲ್ಲಿ ಅನುಭವವಿರುವ ಇನ್ನಿತರ ಹಿರಿಯರು ಈ ಕಾರ್ಯವನ್ನು ನಿರ್ವಹಿಸುತ್ತಾರೆ. ಇವರು ತೀಕ್ಷ್ಣವಾದ ಸಂದರ್ಭದಲ್ಲಿ ಒಳ್ಳೆಯ ನಿರ್ಣಯಗಳನ್ನು ನೀಡುತ್ತಾರೆ. ಅಸಭ್ಯವಾಗಿ ನಡೆದುಕೊಂಡ ವ್ಯಕ್ತಿಗೆ ದಂಡ ಮತ್ತು ಶಿಕ್ಷೆ ಇರುತ್ತದೆ.

### ೩ : ೫ : ೧ ನ್ಯಾಯಾಧೀಶನ ಆಯ್ಕೆ

ನ್ಯಾಯವನ್ನು ಬಗೆಹರಿಸುವ ಮುಖ್ಯಸ್ಥನನ್ನು ಈ ಸಮುದಾಯವೇ ಆಯ್ಕೆ ಮಾಡುತ್ತದೆ. ವ್ಯಕ್ತಿಯು ಆರ್ಥಿಕ, ಸಾಮಾಜಿಕ, ಬೌದ್ಧಿಕವಾಗಿ ಸಬಲನಾಗಿದ್ದು, ನೈತಿಕ ಜವಾಬ್ದಾರಿಯಿಂದ ಇರಬೇಕು. ಅಂತಹ ವ್ಯಕ್ತಿಯನ್ನು ಸಮುದಾಯದ ಹನ್ನೊಂದು ಮಂದಿ ಹಿರಿಯರು ಸೇರಿ ಆಯ್ಕೆ ಮಾಡುತ್ತಾರೆ. ಆಯ್ಕೆಯಾದ ವ್ಯಕ್ತಿಯನ್ನು ಯಜಮಾನ, ಪಟೇಲ, ಗೌಡನೆಂದು ಗೌರವದಿಂದ ಕರೆಯುತ್ತಾರೆ. ನ್ಯಾಯ ತೀರ್ಮಾನಗಳಲ್ಲಿ ಯಜಮಾನ ಹಾಗೂ ಹನ್ನೊಂದು ಮಂದಿ ಸದಸ್ಯರು ಇರುತ್ತಾರೆ. ಸಮುದಾಯದಲ್ಲಿ ಯಾವುದೇ ಹಬ್ಬ-ಆಚರಣೆಯಿದ್ದರೂ ಯಜಮಾನನನ್ನು ವಿಶೇಷವಾಗಿ ಆಹ್ವಾನಿಸುತ್ತಾರೆ. ಯಾವುದೇ ಕಾರ್ಯಕ್ಕೆ ಯಜಮಾನನ ಸಲಹೆಯನ್ನು ತೆಗೆದುಕೊಂಡು ಈ ಸಮುದಾಯ ಮುಂದುವರೆಯುತ್ತದೆ. ಯಜಮಾನ ಮತ್ತು ಸಮುದಾಯದ ಹಿರಿಯರು ಸೇರಿಕೊಂಡು ಕಾರ್ಯದ ಬಗ್ಗೆ ಚರ್ಚಿಸಿ, ಮುಂದೆಯಿದ್ದು ನೆರವೇರಿಸುತ್ತಾರೆ. ಯಜಮಾನನು ಯಾವುದೇ ನ್ಯಾಯ, ಆಚರಣೆ ಮುಂತಾದ ಕೆಲಸ ಕಾರ್ಯಗಳಲ್ಲಿ ಹನ್ನೊಂದು ಜನ ಸದಸ್ಯರೊಂದಿಗೆ ಚರ್ಚಿಸಿಯೇ ತೀರ್ಮಾನ ತೆಗೆದುಕೊಳ್ಳುತ್ತಾನೆ.

### ೩ : ೫ : ೨ ನ್ಯಾಯ ತೀರ್ಮಾನದ ಸ್ಥಳ ಹಾಗೂ ವಿಧಾನ

ಒಡಿಗರು ನ್ಯಾಯ ತೀರ್ಮಾನವನ್ನು ಮಾಡುವಾಗ ಸಣ್ಣ ಸಣ್ಣ ಜಗಳಗಳಿಗೆ ಆಯಾ ಕುಟುಂಬದ ಹಿರಿಯರೊಂದಿಗೆ ಬಗೆಹರಿಸಿಕೊಳ್ಳುತ್ತಿದ್ದರು. ದೊಡ್ಡ ನ್ಯಾಯಗಳಿಗೆ ಸಮುದಾಯದ ಹಿರಿಯನೊಂದಿಗೆ ನ್ಯಾಯಸ್ಥಾನಕ್ಕೆ ಬರಬೇಕಾಗಿತ್ತು. ಒಡಿಗರ ಮುಖ್ಯವಾದ ನ್ಯಾಯಸ್ಥಾನಗಳೆಂದರೆ - ೧ ದೊಡ್ಡಬೈರನಕುಪ್ಪೆ (ಬೆಟ್ಟಕಲ್ಲುಪುರ)

೨ ಆದಂಡ (ಪನುಪಲ್ಲಿ)- ಕೇರಳ

ಈ ಎರಡೂ ಸ್ಥಳಗಳು ಬೆಟ್ಟಗಳಿಂದ ಕೂಡಿದ್ದು, ಗಿಡಮರಗಳಿಂದ ಸುತ್ತುವರೆದಿವೆ. ಅಲ್ಲದೇ ಯಥೇಚ್ಛವಾದ ನೀರಿನ ಸೌಕರ್ಯವಿದೆ. ಈ ಸ್ಥಳಗಳು ನ್ಯಾಯ ತೀರ್ಮಾನಕ್ಕೆ ಯೋಗ್ಯವೆಂದು ಈ ಸಮುದಾಯ ಆಯ್ಕೆ ಮಾಡಿಕೊಂಡಿದೆ. ಅಲ್ಲದೇ ಉಳಿದ ಆರು ಊರುಗಳವರಿಗೆ ಇವು ಸಮೀಪವಾದುದೆಂದು, ಅನುಕೂಲಕ್ಕಾಗಿ ಆಯ್ಕೆ ಮಾಡಲಾಗಿದೆ. ಈ ಎರಡು ಊರುಗಳಲ್ಲಿ ಒಂದು ದೊಡ್ಡ ಬಂಡೆಯಿರುತ್ತದೆ. ಈ ಬಂಡೆಯ ಮೇಲೆ ಯಜಮಾನ ಮತ್ತು ಹನ್ನೊಂದು ಮಂದಿ ಸದಸ್ಯರು ಕುಳಿತುಕೊಳ್ಳುತ್ತಾರೆ. ನ್ಯಾಯ ತೀರ್ಮಾನದ ದಿವಸ 'ಕೋಲುಕಾರ' ಊರಿನ ಎಲ್ಲ ಜನರನ್ನು ಸೇರಿಸುತ್ತಾನೆ. ಅಂದು ಊರಿನ ಎಲ್ಲ ಜನರು ನೆರೆಯುತ್ತಾರೆ. ಮೊದಲು ದೊಡ್ಡಭೈರನ ಕುಪ್ಪೆಯಲ್ಲಿ ನ್ಯಾಯಾಲಯವಿರುತ್ತದೆ. ಸಾಕ್ಷಿಗಳನ್ನು ಆಧರಿಸಿ ತೀರ್ಮಾನ ನೀಡಲಾಗುತ್ತಿತ್ತು. ಇಲ್ಲಿ ತೀರ್ಮಾನವಾಗದ ವ್ಯಾಜ್ಯಗಳನ್ನು ಆದಂಡದಲ್ಲಿ ತೀರ್ಮಾನಿಸಲಾಗುತ್ತಿತ್ತು. ಒಡಿಗರು ಯಾವುದೇ ನಿರ್ಣಯವನ್ನು ನೀಡುವಾಗ ಅವರ ಕುಲ ದೈವಗಳಾದ ಮಾರಿ, ಮಸನಿ, ಚಾಮುಂಡಿಯರನ್ನು ನೆನೆಯುತ್ತಾರೆ. ಆದಂಡ(ಕೇರಳ)ದಲ್ಲಿ ಒಡಿಗರ ಕುಲದೈವಗಳಾದ ಮಾರಿ, ಮಸನಿ, ಚಾಮುಂಡಿಯರು ಇರುವುದರಿಂದಾಗಿ ಅಂತಿಮ ನ್ಯಾಯ ತೀರ್ಮಾನವನ್ನು ಆ ದೈವಗಳ ಸಮಕ್ಷಮದಲ್ಲಿ ನಡೆಸುತ್ತಾರೆ. ಆದಂಡ ಈ ಸಮುದಾಯದ ಪವಿತ್ರ ಸ್ಥಳವಾಗಿದೆ.

ತಪ್ಪಿತಸ್ಥ ವ್ಯಕ್ತಿಗಳನ್ನು ತಮ್ಮ ಕುಲದೈವಗಳ ಮೇಲೆ ಪ್ರಮಾಣ ಮಾಡಿಸುತ್ತಿದ್ದರು. ಆಗ ದೇವರಿಗೆ ಹೆದರಿ ಅವರು ಸತ್ಯವನ್ನು ಹೇಳುತ್ತಾರೆ. ಒಂದು ವೇಳೆ ಸುಳ್ಳು ಹೇಳಿದರೆ ಹದಿನಾರು ದಿವಸದೊಳಗೆ ಕೆಡುಕಾಗುತ್ತದೆಂದು ನಂಬಿದ್ದಾರೆ. ದೇವಾಲಯದ ಹತ್ತಿರ ಒಂದು ಬೀಡೆ ಮರದಡಿ ಈ ಪ್ರಮಾಣ ಮಾಡಿಸಲಾಗುತ್ತದೆ.

ಒಡಿಗ ಬುಡಕಟ್ಟು ಸಮುದಾಯದ ಕೆಲವು ವ್ಯಾಜ್ಯಗಳು ಹೀಗಿವೆ.

**೧ ಹೆಂಡತಿಯನ್ನು ಬಿಡುವುದು**

ಕುಟುಂಬದಲ್ಲಿ ನಡೆಯುವ ಆಂತರಿಕ ಕಲಹಗಳಲ್ಲಿ ಗಂಡ ಹೆಂಡತಿಯ ನಡುವೆ ಬಂದಂತಃಹ ವೈಮನಸ್ಸನ್ನು ಸಮುದಾಯದ ಹಿರಿಯರು ಬಗೆಹರಿಸಿ ಅವರಿಗೆ ತಿಳುವಳಿಕೆ ನೀಡಿ, ಕೂಡಿ ಬಾಳುವಂತೆ ಬುದ್ಧಿ ಹೇಳುತ್ತಾರೆ. ಇದಕ್ಕೆ ಒಪ್ಪದಿದ್ದಲ್ಲಿ ಅವನಿಗೆ ಬಹಿಷ್ಕಾರ ಹಾಕಲಾಗುತ್ತದೆ. ಹೆಂಡತಿಯನ್ನು ತವರುಮನೆಗೆ ಕಳಿಸಿದರೆ, ತವರು ಮನೆಯವರು ಗಂಡಿನ ಮನೆಯವರನ್ನು ಬಹಿಷ್ಕಾರ ಹಾಕುತ್ತಾರೆ. ಒಂದು ಕಲ್ಲನ್ನು ತೆಗೆದುಕೊಂಡು ಗಂಡಿನ ತಲೆಯ ಮೇಲೆ ನಿವಾಳಿಸಿ ಎಸೆಯುತ್ತಾರೆ. ಅಂದಿಗೆ ಅವರವರ ಸಂಬಂಧ ಮುರಿದು ಬೀಳುತ್ತದೆ. ಈ ಸಂಬಂಧ ಮತ್ತೆಂದೂ ಕೂಡುವುದಿಲ್ಲ. ಇದು ಅತ್ಯಂತ ಕಟ್ಟುನಿಟ್ಟಾಗಿರುತ್ತದೆ.

**೨ ಮರುಮದುವೆಯಾಗುವುದು**

ಸಮುದಾಯದ ಯಾವುದೇ ಗಂಡು, ಹೆಣ್ಣು ಮರುಮದುವೆಯಾಗಲು ಅವಕಾಶವಿಲ್ಲ. ಆದರೆ ಮೊದಲ ಹೆಂಡತಿಗೆ ಮಕ್ಕಳಿಲ್ಲದಿದ್ದರೆ, ಅವಳ ಒಪ್ಪಿಗೆಯಂತೆ ಮರುಮದುವೆಯಾಗಬಹುದು. ಹೆಣ್ಣಿಗೆ ಗಂಡ ಸತ್ತಿದ್ದರೆ, ಹಿರಿಯರ ಸಲಹೆಯಂತೆ ಕೂಡಾವಳಿ ಮಾಡಿಕೊಳ್ಳಬಹುದು. ಈ ಒಪ್ಪಿಗೆಯಿಲ್ಲದೆಯೇ ನಿಯಮವನ್ನು ಮೀರಿದರೆ ಕುಲದಿಂದ ಬಹಿಷ್ಕಾರ ಹಾಕಿ ದಂಡವನ್ನು ವಿಧಿಸುತ್ತಾರೆ.

೩ ಚಪ್ಪಲಿಯಿಂದ ಹೊಡೆಸಿಕೊಂಡರೆ

ಯಾವುದೇ ಜಗಳದಲ್ಲಿ ಈ ಸಮುದಾಯದ ವ್ಯಕ್ತಿಗಳು ಚಪ್ಪಲಿಯಿಂದ ಹೊಡೆಸಿಕೊಂಡರೆ ಕುಲದಿಂದ ಹೊರ ಉಳಿಯುತ್ತಾನೆ. ಚಪ್ಪಲಿಯಿಂದ ಹೊಡೆದವನಿಗೆ ದಂಡ ವಿಧಿಸುತ್ತಾರೆ. ಹೊಡೆಸಿಕೊಂಡವನು ಹೊಳೆಯಲ್ಲಿ ನೂರಾ ಒಂದು ಸಾರಿ ಮಿಂದು ಬರಬೇಕು. ನಂತರ ಸಮುದಾಯದ ಕುಲಗುರುಗಳು ಕುಲದೈವಕ್ಕೆ ಪೂಜಿಸುತ್ತಾರೆ. ಚಪ್ಪಲಿಯಿಂದ ಹೊಡೆದವನು ಕುಲ ಗುರುಗಳಿಗೆ ಕಾಣಿಕೆಯನ್ನು ನೀಡಬೇಕು. ಪೂಜೆಯ ಬಳಿಕ ಸೂಜಿಯನ್ನು ಕಾಯಿಸಿ ಹೊಡೆಸಿಕೊಂಡವನ ನಾಲಿಗೆಯನ್ನು ಸುಡುತ್ತಾರೆ. ಇದರಿಂದ ಚಪ್ಪಲಿಯಿಂದ ಹೊಡೆಸಿಕೊಂಡ ದೋಷ ನಿವಾರಣೆಯಾಗುತ್ತದೆ. ಬಳಿಕ ಸಮುದಾಯದ ಸದಸ್ಯರಿಗೆ ಊಟ ಹಾಕಿಸಬೇಕು. ಊಟ, ತಿಂಡಿ, ನೀರು, ನಿದ್ರೆಯನ್ನು ಮನೆಯ ಹೊರಗೆ ಮಾಡುತ್ತಿದ್ದವನಿಗೆ ಈ ದೋಷ ಮುಕ್ತವಾದ ಮೇಲೆ ಮತ್ತೆ ಮನೆಯ ಒಳಗೆ ಪ್ರವೇಶ ದೊರೆಯುತ್ತದೆ.

೪ ಅನೈತಿಕ ಸಂಬಂಧ

ಮದುವೆಯನ್ನು ಮಾನ್ಯಮಾಡಿ ಈ ಸಮುದಾಯವು ಗೌರವ ನೀಡುತ್ತದೆ. ಈ ವೈವಾಹಿಕ ಸಂಬಂಧದ ಹೊರತಾಗಿ ಅನೈತಿಕ, ಅಕ್ರಮವಾಗಿ ಲೈಂಗಿಕ ಸಂಬಂಧವನ್ನು ಒಡಿಗರು ವಿರೋಧಿಸುತ್ತಾರೆ, ಅದು ಅಪರಾಧವೆಂದು ಶಿಕ್ಷೆಯನ್ನು ನೀಡಿ ಊರಿನಿಂದ, ಕುಲದಿಂದ ಬಹಿಷ್ಕರಿಸುತ್ತಾರೆ. ತಮ್ಮ ಸಮುದಾಯದಲ್ಲಿ ಅಥವಾ ಅನ್ಯ ಸಮುದಾಯದೊಂದಿಗೆ ಅನೈತಿಕ ಸಂಬಂಧ ಹೊಂದುವ ಯಾವುದೇ ಗಂಡು, ಹೆಣ್ಣು ಶಿಕ್ಷಾರ್ಹರು. ತಮ್ಮ ಸಮುದಾಯದಲ್ಲಿಯೇ ಅನೈತಿಕ ಸಂಬಂಧ ಹೊಂದಿದ್ದರೆ, ಅವರನ್ನು ಬಹಿಷ್ಕರಿಸುತ್ತಾರೆ. ನಂತರ ಅವರನ್ನು ಕುಲಕ್ಕೆ ಸೇರಿಸಿಕೊಳ್ಳುವಾಗ ಅವರಿಗೆ ನೀರೆರೆದು, ಕುಲದೈವಗಳಿಗೆ ಪೂಜೆಯನ್ನು ಮಾಡುತ್ತಾರೆ. ಇತರ ಯಾವುದೇ ಸಮುದಾಯದೊಂದಿಗೆ ಅನೈತಿಕ ಸಂಬಂಧ, ಹೊಂದಿದ್ದರೆ ಅಂಥವರನ್ನು ಶಾಶ್ವತವಾಗಿ ಕುಲದಿಂದ ಬಹಿಷ್ಕರಿಸುತ್ತಾರೆ. ಅವರನ್ನು ಯಾವುದೇ ಕ್ರಮದಿಂದ ಮರು ಸೇರ್ಪಡೆ ಮಾಡುವುದಿಲ್ಲ. ಇಂದಿಗೂ ಒಡಿಗರಲ್ಲಿ ಕಟ್ಟುಪಾಡುಗಳು ಉಳಿದುಕೊಂಡು ಬಂದಿವೆ.

೩ : ೫ : ೩ ಶಿಕ್ಷೆ ಮತ್ತು ಶಿಕ್ಷೆಯ ವಿಧಾನ

ಸಮುದಾಯದಲ್ಲಿ ತಪ್ಪು ಮಾಡಿದವನಿಗೆ ದಂಡ ಮತ್ತು ಶಿಕ್ಷೆಯಿದೆ. ತಪ್ಪಿತಸ್ಥ ತನ್ನ ತಪ್ಪನ್ನು ನಿಜವಾಗಿ ಒಪ್ಪಿಕೊಂಡರೆ ಅವನಿಗೆ ಶಿಕ್ಷೆಯು ಕಡಿಮೆಯಾಗುತ್ತಿತ್ತು.

* ತಪ್ಪಿತಸ್ಥನನ್ನು ಹೊಳೆಯಲ್ಲಿ ೧೦೧ ಬಾರಿ ಮುಳುಗಿಸುತ್ತಾರೆ.
* ೧೦೧ ಬಾರಿ ನೀರುಕಡ್ಡಿಯಿಂದ ಹೊಡೆಯುತ್ತಾರೆ.
* ಅವನಿಗೆ ಬೆಂಕಿ, ಬಿಸಿನೀರು ಸಮುದಾಯದವರು ಯಾರೂ ನೀಡಕೂಡದು.
* ಕಳ್ಳತನ ಮಾಡಿದವನಿಗೆ ೧-೫ ರೂಪಾಯಿಗಳವರೆಗೆ ದಂಡವಿರುತ್ತದೆ.
* ಕೆಲವು ಬಾರಿ ಊರಿನಿಂದ ಬಹಿಷ್ಕಾರ ಹಾಕುತ್ತಾರೆ.

* ಮದುವೆ ಕಾರ್ಯದಲ್ಲಿ ನಡೆಯುವ ಅಸೆಜಗಳಿ ಶಾಸ್ತ್ರದಲ್ಲಿ ನಿಯಮವನ್ನು ಮೀರಿದವರಿಗೆ ದಂಡ ವಿಧಿಸುತ್ತಾರೆ.
* ಸಮುದಾಯದ ಕಟ್ಟುಪಾಡುಗಳನ್ನು ಅನುಸರಿಸದೇ ಇರುವವರಿಗೆ ಬೆಂಕಿ, ಬಿಸಿನೀರು ನೀಡುವಂತಿಲ್ಲ! ಯಾರೂ ಮಾತನಾಡಿಸುವಂತಿಲ್ಲ. ಯಾವುದೇ ಕಾರ್ಯಗಳಿಗೆ ಅವರು ಭಾಗವಹಿಸುವಂತಿಲ್ಲ.
* ಹೆಂಡತಿಯನ್ನು ಬಿಟ್ಟವನಿಗೆ, ಎರಡನೇ ಮದುವೆಯನ್ನು ಅಕ್ರಮವಾಗಿ ಮಾಡಿಕೊಂಡವನಿಗೆ, ಸಮುದಾಯದ ವ್ಯಕ್ತಿಗಳಿಗೆ ಚಪ್ಪಲಿಯಿಂದ ಹೊಡೆದರೆ, ಅನೈತಿಕ ಸಂಬಂಧ ಹೊಂದಿದ್ದರೆ ಅವರಿಗೆ ಶಿಕ್ಷೆ ಮತ್ತು ದಂಡವಿದೆ.

**೩ : ೬ ವೈದ್ಯ ಪದ್ಧತಿ**

ಒಡಿಗ ಬುಡಕಟ್ಟು ಸಮುದಾಯ ತಮಗೆ ಬರುವ ರೋಗರುಜಿನಗಳನ್ನು ಅಲೌಕಿಕ ಶಕ್ತಿಯೆಂದೇ ನಂಬುತ್ತವೆ. ಮನುಷ್ಯ ತಪ್ಪು ಮಾಡುವುದರಿಂದ ದೇವರು ನೀಡುವ ಶಿಕ್ಷೆ ಎಂದು ನಂಬುತ್ತವೆ. ಅಲ್ಲದೇ ಅದೊಂದು ಅತಿಮಾನುಷ ಶಕ್ತಿಯೆಂದು ತಿಳಿದಿದ್ದಾರೆ. ಇವರು ಅರಣ್ಯವಾಸಿಗಳಾದುದರಿಂದ ಅಲ್ಲಿನ ಪ್ರಾಕೃತಿಕ ಕಾರಣಗಳಿಂದಾಗಿ ಕೆಲವು ರೋಗಗಳು ಬರುತ್ತಿದ್ದವು. ಅವುಗಳಿಗೆ ತಕ್ಕಂತೆ ತಾವು ವಾಸಿಸುವ ಕಾಡುಗಳಲ್ಲಿ ನಾನಾ ಬಗೆಯ ಗಿಡಮೂಲಿಕೆಗಳು ದೊರೆಯುತ್ತಿದ್ದವು. ಆ ಗಿಡ ಮೂಲಿಕೆಗಳಿಂದಲೇ ತಮ್ಮ ಕೆಲವು ಕಾಯಿಲೆಗಳಿಗೆ ಔಷಧಿಯನ್ನಾಗಿ ಬಳಸುತ್ತಿದ್ದರು. ಇಂದಿಗೂ ಈ ಕಾಡು ಔಷಧಿಯನ್ನು ಬಳಸುತ್ತಾರೆ. ಔಷಧವನ್ನಲ್ಲದೇ, ಕೆಲವು ಮಾನಸಿಕ ಕಾಯಿಲೆಗಳು ಬಂದರೆ ಅವುಗಳನ್ನು ಔಷಧಿಯಿಂದ ಕಳೆಯಲು ಸಾಧ್ಯವಾಗುತ್ತಿರಲಿಲ್ಲ. ಅಂತಹ ಸಂದರ್ಭದಲ್ಲಿ ಮಾಟ-ಮಂತ್ರ ಶಕ್ತಿಯನ್ನು ನಂಬಿ, ಅವುಗಳಿಂದ ಅಂತಹ ರೋಗಗಳನ್ನು ವಾಸಿಮಾಡಲು ಮುಂದಾಗುತ್ತಿದ್ದರು. ''ಆದಿವಾಸಿಗಳಲ್ಲಿನ ವೈದ್ಯಕೀಯವು ಧಾರ್ಮಿಕ ಆಚರಣೆ ಮತ್ತು ಸಾಮಾಜಿಕ ಕಟ್ಟಳೆಗಳ ಮೇಲೆ ಬಹುವಾಗಿ ಅವಲಂಬಿಸಿದೆ''.[೬] ಆಧುನಿಕವಾಗಿ ಇಂದಿಗೂ ಈ ರೀತಿಯ ಮಾಟ-ಮಂತ್ರಾದಿ ಉಪಚಾರ ನಮ್ಮಲ್ಲಿ ಉಳಿದುಕೊಂಡು ಬಂದಿದೆ. ಇದನ್ನು ಕೆಲವು ಸಮುದಾಯಗಳು ಗಾಢವಾಗಿ ನಂಬಿವೆ. ತಮ್ಮ ಕಾಡಿನಲ್ಲಿ ದೊರೆಯುವ ಗಿಡಮೂಲಿಕೆಗಳಿಂದ ಮಹತ್ವವಾದ ಔಷಧಿಗಳನ್ನು ತಯಾರಿಸಿಟ್ಟುಕೊಂಡ ಈ ಸಮುದಾಯವು ತಮಗೆ ಬರುವ ಅನೇಕ ಕಾಯಿಲೆಗಳಿಗೆ ತಾವೇ ಔಷಧೋಪಚಾರ ಮಾಡಿಕೊಳ್ಳುತ್ತಾರೆ. ಅಲ್ಲದೇ ಕೆಲವೊಮ್ಮೆ ತಮ್ಮ ಸಮುದಾಯದಲ್ಲಿಯೇ ಯಾರಾದರೂ ಒಬ್ಬ ವ್ಯಕ್ತಿ ಔಷಧಿಗಳ ಬಗೆಗೆ ಜ್ಞಾನವಿದ್ದಲ್ಲಿ ಇಡೀ ಜನರಿಗೆ ವೈದ್ಯನಾಗಿ ಕಾರ್ಯ ನಿರ್ವಹಿಸುತ್ತಾನೆ. ಅಲ್ಲದೇ ಗಿಡಮೂಲಿಕೆಯ ವಿವರ ಅವನಿಗೆ ಮಾತ್ರ ತಿಳಿದಿರುತ್ತಿದ್ದು, ಅದನ್ನು ರಹಸ್ಯವಾಗಿ ಇಟ್ಟಿರುತ್ತಿದ್ದನು. ತಾನು ಮರಣಿಸುವಾಗ ಆ ವಿದ್ಯೆಯನ್ನು ಮತ್ತೊಬ್ಬರಿಗೆ ಹೇಳುತ್ತಿದ್ದ. ಕೇವಲ ಮನುಷ್ಯರಿಗೆ ಮಾತ್ರವಲ್ಲ ತಮ್ಮೊಂದಿಗೆ ಬದುಕುವ ಪಶು-ಪಕ್ಷಿಗಳಿಗೆ ರೋಗರುಜಿನಗಳು ಬಂದಾಗಲೂ ಗಿಡಮೂಲಿಕೆಯ ಮೂಲಕ ಗುಣಪಡಿಸುತ್ತಾರೆ. ಆ ಮೂಲಕ ತಮ್ಮ ಆರೋಗ್ಯ, ತಮ್ಮೊಂದಿಗಿನ ಜೀವಿಗಳ ಆರೋಗ್ಯವನ್ನು ರಕ್ಷಿಸುತ್ತಾರೆ. ಇದನ್ನು ಜನಪದ ವೈದ್ಯ, ನಾಡವೈದ್ಯ, ಮನೆವೈದ್ಯ, ಕಾಡುಔಷಧಿ ಮುಂತಾದ ಹೆಸರಿನಿಂದ ಕರೆಯಲಾಗುತ್ತದೆ.

ಒಡಿಗ ಸಮುದಾಯವು ಕೆಲವು ರೋಗಗಳಿಗೆ ಔಷಧಿಯನ್ನು ತೆಗೆದುಕೊಂಡು ಆರೋಗ್ಯ ಕಾಪಾಡಿಕೊಳ್ಳುತ್ತಾರೆ. ಅವರು ನೀಡುವ ಗಿಡಮೂಲಿಕೆಗಳು ಈ ಕೆಳಕಂಡ ರೋಗಗಳಿಗೆ ಹೇಗೆ ಔಷಧಿಯಾಗುತ್ತದೆಂಬುದಕ್ಕೆ ಹೀಗೆ ವಿವರಣೆ ಕೊಡಬಹುದು.

**೩ : ೬ : ೧ ನೆಗಡಿ-ಕೆಮ್ಮು :** ಶುಂಠಿ, ಮೆಣಸು ಹಾಗೂ ಗಿಡಮೂಲಿಕೆಗಳನ್ನು ಹಾಕಿ ಚೆನ್ನಾಗಿ ಪುಡಿಮಾಡುತ್ತಾರೆ. ಅದಕ್ಕೆ ತಕ್ಕ ನೀರನ್ನು ಹಾಕಿ, ಬೆಂಕಿಯ ಮೇಲಿಟ್ಟು ಕುದಿಸುತ್ತಾರೆ. ಇದರಿಂದ ಬಂದ ಕಷಾಯವನ್ನು ಕುಡಿಯುವುದರಿಂದ ನೆಗಡಿಯು ವಾಸಿಯಾಗುತ್ತದೆ.

**೩ : ೬ : ೨ ವಾಂತಿ :** ವಾಂತಿ ಬರುವ ಸಂದರ್ಭದಲ್ಲಿ ಏಲಕ್ಕಿಯನ್ನು ತಿಂದರೆ ವಾಂತಿ ನಿಲ್ಲುತ್ತದೆ. ಇಲ್ಲವಾದರೆ ಹಸಿರು ಮದ್ದನ್ನು ನೀರಿನಲ್ಲಿ ಕುದಿಸಿ, ಆ ನೀರನ್ನು ಸೇವಿಸುವುದರಿಂದ ವಾಂತಿಯಾಗುವುದಿಲ್ಲವೆಂದು ಹೇಳುವರು.

**೩ : ೬ : ೩ ಭೇದಿ :** ಆಹಾರದ ವ್ಯತ್ಯಾಸದಿಂದಾಗಿ ಉಂಟಾಗುವ ಭೇದಿಗೆ ಹಾಗೂ ಅಜೀರ್ಣಕ್ಕೆ ಹಿರಳೇಕಾಯಿ ರಸವನ್ನು ತೆಗೆದು ಮಜ್ಜಿಗೆ ಇಲ್ಲವೇ ಮೊಸರಿನಲ್ಲಿ ಮಿಶ್ರಣ ಮಾಡಿ ಅನ್ನದಲ್ಲಿ ಊಟ ಮಾಡುವುದರಿಂದ ಭೇದಿ ನಿಲ್ಲುತ್ತದೆ.

**೩ : ೬ : ೪ ಜ್ವರ :** ಶುಂಠಿ, ಮೆಣಸು, ಕಾಫಿಪುಡಿ, ಕರಿಮೆಣಸುಗಳನ್ನು ಪುಡಿಮಾಡಿ ಅದರಿಂದ ಕಷಾಯವನ್ನು ತಯಾರಿಸಿ ಕುಡಿಯಬೇಕು. ಅಲ್ಲದೇ ಕಾಡು ಹಾಗಲಕಾಯಿ, ಕಾಗಮರಕಾಯಿಯ ಬೀಜವನ್ನು ಗುಳಿಗೆಯಾಗಿ ತಿಂದರೆ ಜ್ವರ ಕಡಿಮೆಯಾಗುವುದು.

**೩ : ೬ : ೫ ಹೊಟ್ಟೆನೋವು :** ಗಾಳಮುದ್ದೆ ಸೊಪ್ಪನ್ನು ಚೆನ್ನಾಗಿ ಬೆರೆಸಿ ಅದರ ರಸವನ್ನು ಒಂದು ಲೋಟಕ್ಕೆ ಇಳಿಸಿ, ಕಬ್ಬಿಣದ ತುಂಡನ್ನು ಬೆಂಕಿಯಲ್ಲಿಟ್ಟು ರಸಕ್ಕೆ ಅಂಟಿಸಿ, ಆ ರಸವನ್ನು ಕುಡಿದರೆ ಹೊಟ್ಟೆನೋವು ವಾಸಿಯಾಗುತ್ತದೆ.

**೩ : ೬ : ೬ ಹೊಟ್ಟೆ ಉಬ್ಬರ :** ಶುಂಠಿ, ಬೆಳ್ಳುಳ್ಳಿಯನ್ನು ಚೆನ್ನಾಗಿ ಅರೆದು, ಕುದಿಸಿ ಆ ನೀರನ್ನು ಕುಡಿಯುವುದರಿಂದ ಹೊಟ್ಟೆ ಉಬ್ಬರ ಕಡಿಮೆಯಾಗುವುದು.

**೩ : ೬ : ೭ ಹಲ್ಲುನೋವು :** ಕರಿಮೆಣಸಿನ ಬೇರು ಅಥವಾ ಲವಂಗವನ್ನು ಹಲ್ಲು ನೋಯುವ ಸ್ಥಳದಲ್ಲಿಟ್ಟುಕೊಂಡರೆ ಹಲ್ಲುನೋವು ಕಡಿಮೆಯಾಗುತ್ತದೆ.

**೩ : ೬ : ೮ ಸುಟ್ಟಗಾಯ :** ಕರಿಮೆಣಸು, ಕರಿತುಳಸಿ (ಕೃಷ್ಣತುಳಸಿ)ಯನ್ನು ಚೆನ್ನಾಗಿ ಅರೆದು, ಕೊಬ್ಬರಿ ಎಣ್ಣೆಯೊಂದಿಗೆ ಬೆರೆಸಿ ಹಚ್ಚುವುದರಿಂದ ಸುಟ್ಟಗಾಯ ಕಡಿಮೆಯಾಗುತ್ತದೆ. ಗಾಯದ ಕಲೆಗೆ ಜೇನುತುಪ್ಪ ಹಚ್ಚಿದರೆ ಆ ಕಲೆ ಮಾಯವಾಗುತ್ತದೆ.

**೩ : ೬ : ೯ ಗಾಯಗಳಿಗೆ :** ತೆಂಗಿನ ಮರದ ಪುಡಿ, ಸುಣ್ಣ, ಹಸಿರುಮದ್ದಿನೊಂದಿಗೆ ಚೆನ್ನಾಗಿ ಅರೆದು, ಗಾಯಕ್ಕೆ ಲೇಪಿಸಬೇಕು. ಅದು ಗಾಯಕ್ಕೆ ಅಂಟಿಕೊಳ್ಳುತ್ತದೆ. ಅದು ಒಣಗಿ ಉದುರುವುದರಲ್ಲಿ ಗಾಯ ವಾಸಿಯಾಗುತ್ತದೆ.

ಬೇವಿನ ಎಣ್ಣೆಯನ್ನು ಗಿಡಮೂಲಿಕೆಯೊಂದಿಗೆ ಸೇರಿಸಿ ಕಾಯಿಸುತ್ತಾರೆ. ಅದು ಗಟ್ಟಿಯಾದ ಮೇಲೆ ಗಾಯಕ್ಕೆ ಲೇಪಿಸಿದರೆ ಗಾಯ ವಾಸಿಯಾಗುತ್ತದೆ.

**೩ : ೬ : ೧೦ ತಲೆನೋವು :** ಬೆಳಗಿನ ಜಾವ ಮತ್ತು ಸಾಯಂಕಾಲದ ಸಮಯದಲ್ಲಿ ಮಾತ್ರ ಇರುವ ತಲೆನೋವನ್ನು ಒಡಿಗರು ''ಹೊತ್ತು ತಲೆನೋವು'' ಎಂದು ಕರೆಯುತ್ತಾರೆ. ಉಳಿದ ಅವಧಿಯಲ್ಲಿ ನೋವು ಇರುವುದಿಲ್ಲ. ಈ ತಲೆನೋವಿಗೆ ಗಿಡಮೂಲಿಕೆಯ ಬೇರನ್ನು ತಂದು ಒಲೆಯ ಹತ್ತಿರ ಇಡುತ್ತಾರೆ. ಆ ಬೇರು ಬೆಂಕಿಯ ಕಾವಿಗೆ ಒಣಗಿ ಹೋದಂತೆಲ್ಲ ತಲೆನೋವು ಕಡಿಮೆಯಾಗುತ್ತದೆಂಬುದು ಇವರ ವೈದ್ಯ ಹೇಳುತ್ತದೆ. ಈರುಳ್ಳಿ, ಬೆಳ್ಳುಳ್ಳಿಯನ್ನು ಜಜ್ಜಿ ತಲೆಗೆ ಲೇಪಿಸುತ್ತಾರೆ.

**೩ : ೬ : ೧೧ ಪಿತ್ತ :** ಒಣಶುಂಠಿ, ಲವಂಗ, ಕರಿತುಳಸಿ (ಕೃಷ್ಣತುಳಸಿ) ಇವುಗಳನ್ನು ಸೇರಿಸಿ ಪುಡಿಮಾಡಿ ಕೊಂಚ ನೀರಿನಿಂದ ಕಷಾಯ ತಯಾರಿಸಿ, ಜೇನುತುಪ್ಪದೊಂದಿಗೆ ಬೆರೆಸಿ ಸೇವಿಸಿದರೆ ಪಿತ್ತವಾಸಿಯಾಗುತ್ತದೆ.

**೩ : ೬ : ೧೨ ಕಜ್ಜಿ :** ಹೊಳೆಜವನ ಸೊಪ್ಪನ್ನು ಚೆನ್ನಾಗಿ ಅರೆದು, ಅದನ್ನು ಮೈತುಂಬಾ ಬಳಿಯುತ್ತಾರೆ. ಅಲ್ಲದೇ (ಕೃಷ್ಣತುಳಸಿ) ಕರಿತುಳಸಿಯ ಜೊತೆಗೆ ಸ್ವಲ್ಪ ಉಪ್ಪು ಹಾಕಿ ಚೆನ್ನಾಗಿ ಅರೆದು, ಕಜ್ಜಿಗೆ ಲೇಪಿಸಿದರೆ ಗುಣವಾಗುತ್ತದೆ.

**೩ : ೬ : ೧೩ ಕಣ್ಣುಬೇನೆ :** ತುಳಸಿಯ ರಸ, ಹಸಿರುಮದ್ದಿನ ರಸವನ್ನು ಒಂದೆರೆಡು ದಿವಸ ಬಿಸಿಲಿನಲ್ಲಿ ಇರಿಸಿದರೆ, ಅದು ಲೋಳೆಯಾಗುತ್ತದೆ. ಅದನ್ನು ಕಣ್ಣಿನ ರೆಪ್ಪೆಯ ಮೇಲೆ ಲೇಪಿಸಿದರೆ ಕಣ್ಣುಬೇನೆ ವಾಸಿಯಾಗುತ್ತದೆ.

**೩ : ೬ : ೧೪ ಕುರು :** ಮದ್ದುರಸದ ಜೊತೆಗೆ ಗಿಡಮೂಲಿಕೆಯನ್ನು ಬೆರೆಸಿ ಹಚ್ಚಿದರೆ ಕುರು ಬಾವು ಕಡಿಮೆಯಾಗುತ್ತದೆ.

**೩ : ೬ : ೧೫ ಕಿವಿನೋವು :** ಒಳ್ಳೆಣ್ಣೆಯನ್ನು ಕಾಯಿಸಿ ಆರಿದ ಮೇಲೆ ಕಿವಿಯಲ್ಲಿ ಬಿಡುತ್ತಾರೆ. ಅಲ್ಲದೇ ತುಂಬೆ ಗಿಡದ ರಸವನ್ನು ಕಿವಿಯಲ್ಲಿ ಹಿಂಡಿದರೆ ಕಿವಿನೋವು ಕಡಿಮೆಯಾಗುತ್ತದೆ.

**೩ : ೬ : ೧೬ ಮೈ, ಕೈ, ನೋವು :** ಬೆಳ್ಳುಳ್ಳಿ, ವೀಳ್ಯದೆಲೆ, ಹುಂಡೆಮೆಣಸು ಬೆರೆಸಿ ಕೊಬ್ಬರಿಎಣ್ಣೆಯೊಂದಿಗೆ ಕುದಿಸಿ ಮೈಗೆ ಹಚ್ಚುತ್ತಾರೆ. ನಂತರ ಮೈಗೆ ಬಿಸಿನೀರನ್ನು ಎರೆಯಬೇಕು, ಇದರಿಂದ ಮೈ, ಕೈ, ನೋವು ಕಡಿಮೆಯಾಗುತ್ತದೆ.

**೩ : ೬ : ೧೭ ಜಂತುಹುಳದ ಬಾಧೆ :** ತುಂಬೆ ಸೊಪ್ಪಿನ ರಸ, ಗಿಡಮೂಲಿಕೆಯ ಬೇರು ಅರೆದು ಹಸುವಿನ ಮಜ್ಜಿಗೆಯೊಂದಿಗೆ ಬೆರೆಸಿ ಸೇವಿಸಿದರೆ ಹುಳು ಸಾಯುತ್ತವೆ.

**೩ : ೬ : ೧೮ ಹಾವು ಕಚ್ಚಿದರೆ :** ಶುಂಠಿ, ಬೆಳ್ಳುಳ್ಳಿಯನ್ನು ಅರೆದು ಹಸಿರು ಗಿಡಮೂಲಿಕೆಯೊಂದಿಗೆ ಸೇರಿಸಿ ಹಾವಿನಿಂದ ಕಚ್ಚಿಸಿಕೊಂಡವನಿಗೆ ಕುಡಿಸುತ್ತಾರೆ. ಅಲ್ಲದೇ ಗಿಡಮೂಲಿಕೆಯನ್ನು ಹಾವು ಕಚ್ಚಿದ ಸ್ಥಳದಲ್ಲಿ ಲೇಪಿಸುತ್ತಾರೆ. ಕೇವಲ ಔಷಧೋಪಚಾರವಲ್ಲದೇ ಮಂತ್ರವನ್ನು ಹಾಕುತ್ತಾರೆ. ಹಾವಿನಿಂದ ಕಚ್ಚಿಸಿಕೊಂಡ ವ್ಯಕ್ತಿ ತನಗೆ ಹಾವು ಕಡಿಯಿತೆಂದು ಹೇಳಬಾರದು. ಬದಲಾಗಿ ಹುಳು ಮುಟ್ಟಿತು ಎನ್ನಬೇಕು. ಹಾವು ಕಚ್ಚಿದವರಿಗೆ ಒಡಿಗರು ಏಳು ಬಗೆಯ ಮಂತ್ರವನ್ನು ಹಾಕುತ್ತಾರೆ.

೧ ಗರುಡ ಮಂತ್ರ

೨ ಇರುವೆ ಮಂತ್ರ

೩ ಕಾಳಿ ಕಂಗಾಳಿ ಮಂತ್ರ

೪ ಯಮದೋಲೆ

೫ ಕರಿಮಂತ್ರ

೬ ವಿಷದ ಮಂತ್ರ

೭ ಏಳು ತಲೆ ಸರ್ಪದ ಮಂತ್ರ

ಈ ಮಂತ್ರಗಳನ್ನು ಹಾಕಿದ ಮೇಲೆ ತೆಂಗಿನಕಾಯಿಯನ್ನು ತೆಗೆದುಕೊಂಡು ಹಾವು ಕಚ್ಚಿಸಿಕೊಂಡ ವ್ಯಕ್ತಿಯ ತಲೆಯ ಮೇಲೆ ನಿವಾಳಿಸಿ, ಸುಬ್ರಮಣ್ಯಸ್ವಾಮಿಗೆ ಪೂಜೆ ಮಾಡುತ್ತಾರೆ. ಇದರಿಂದ ಗುಣವಾಗುತ್ತದೆಂದು ಮಂತ್ರವೈದ್ಯ ಮಾಡುತ್ತಾರೆ.

**೩ : ೬ : ೧೯ ಶೀಘ್ರ ಪ್ರಸವ :** ಗರ್ಭಿಣಿ ಹೆಂಗಸಿಗೆ ನೋವು ಕಾಣಿಸಿಕೊಂಡು ಹೆರಿಗೆಯು ತೊಂದರೆಯಾದರೆ ಜೀರಿಗೆ ಪುಡಿಯನ್ನು ನೀರಿನಲ್ಲಿ ಕುದಿಸಿ, ಅದರಲ್ಲಿ ಕೊಂಚ ಬೆಣ್ಣೆಯನ್ನು ಹಾಕಿ ಕುಡಿಸುತ್ತಾರೆ. ಅಲ್ಲದೇ ಕಾಡಿನಿಂದ ಹಾಡೆಸೊಪ್ಪನ್ನು ತಂದು ಅರೆದು ಒಳ್ಳೆಣ್ಣೆಯಲ್ಲಿ ಬೆರೆಸಿ ಕುಡಿಸುವುದರಿಂದ ಬೇಗ ಹೆರಿಗೆಯಾಗುತ್ತದೆ.

ಶೀಘ್ರ ಪ್ರಸವಕ್ಕೆಂದು ಮಂತ್ರವೈದ್ಯವನ್ನು ಮಾಡುತ್ತಾರೆ. ಈ ಮಂತ್ರವನ್ನು ಗರ್ಭಿಣಿಯ ಹೊಟ್ಟೆಯ ಹತ್ತಿರ ಹೇಳಿದರೆ ಸುಸೂತ್ರವಾಗಿ ಹೆರಿಗೆ ಆಗುತ್ತದೆ.

**೩ : ೬ : ೨೦ ಮಂತ್ರವೈದ್ಯ :** ಒಡಿಗರು ಕಾಡುಮೂಲಿಕೆಗಳಿಂದ ವೈದ್ಯ ಮಾಡುತ್ತಾರಲ್ಲದೇ, ಕೆಲವು ರೋಗಗಳು ಗಿಡಮೂಲಿಕೆಗಳಿಂದ ವಾಸಿಯಾಗದಿದ್ದರೆ, ಪರ್ಯಾಯವಾಗಿ ಮಂತ್ರವೈದ್ಯ ಇರುತ್ತದೆ. ಈ ರೋಗಗಳು ಹೆಚ್ಚಾಗಿ ದುಷ್ಟಶಕ್ತಿಯಿಂದ ಬರುತ್ತವೆ ಎಂದು ಈ ಸಮುದಾಯವು ನಂಬುತ್ತದೆ. ಕೇವಲ ಮಂತ್ರ, ಯಂತ್ರದ ಸಹಾಯದಿಂದ ಈ ರೋಗಗಳು ನಿವಾರಣೆಯಾಗುತ್ತವೆಯೆಂಬ ನಂಬಿಕೆಯಿದೆ. ಅಂತಹ ಕೆಲವು ನಂಬಿಕೆಗಳನ್ನು ಇಲ್ಲಿ ಪಟ್ಟಿಮಾಡಲಾಗಿದೆ.

**೩ : ೬ : ೨೦ : ೧ ಕಣ್ಣಿನ ದೃಷ್ಟಿ (ಕೆಟ್ಟಕಣ್ಣು) :** ತಮ್ಮ ಮಕ್ಕಳ ಚೆಲುವಿಗೆ ಬೇರೆಯವರು ದೃಷ್ಟಿ ಬೀರಿದರೆ, ಆ ಮಕ್ಕಳು ಹಠಮಾಡಿ, ರಂಪ ಮಾಡುತ್ತಾರೆ. ಇದಕ್ಕೆ ತಾಯಿತ(ಯಂತ್ರ)ವನ್ನು ಮಾಡಿಸಿ ಕೊರಳಿಗೆ ಕಟ್ಟುತ್ತಾರೆ. ಅಲ್ಲದೇ ಅನ್ನವನ್ನು ಮುದ್ದೆ ಮಾಡಿ ಮೂರುಬಾರಿ ಮಗುವಿನ ತಲೆಗೆ ನಿವಾಳಿಸಿ, ಮೂರು ದಾರಿ ಕಲೆಯುವಲ್ಲಿ ಹಾಕುವುದರಿಂದ, ದೃಷ್ಟಿಯಿಂದ ತಗುಲಿದ ಪೀಡೆ ತೊಲಗುತ್ತದೆ ಎಂದು ನಂಬುತ್ತಾರೆ.

**೩ : ೬ : ೨೦ : ೨ ಭಯ ನಿವಾರಣೆ :** ಒಡಿಗ ಸಮುದಾಯದ ಯಾವುದೇ ವ್ಯಕ್ತಿಯು ಭಯಪಟ್ಟರೆ ಹಲವಾರು ರೀತಿಯ ನಂಬಿಕೆಗಳಿಂದ ಮಂತ್ರ ಹಾಕುವುದು ಮತ್ತು ಕೆಲವು ವಸ್ತುಗಳಿಂದ ನಿವಾಳಿಸುವುದು ರೂಢಿಯಲ್ಲಿದೆ. ಇದರಿಂದ

ಭಯಗೊಂಡ ವ್ಯಕ್ತಿಯು ಧೈರ್ಯದಿಂದ ಜೀವಿಸುತ್ತಾನೆಂಬುದು ಇವರ ನಂಬಿಕೆ. ಭಯಗೊಂಡ ವ್ಯಕ್ತಿಗೆ ಈ ಸಮುದಾಯ ಮಾಡುವ ಕೆಲವು ನಂಬಿಕೆಗಳು ಹೀಗಿವೆ.

* ಬಾಳೆದಿಂಡನ್ನು ಕೊಯ್ದು ಅದನ್ನು ಮನೆಯ ಆಕಾರದ ರೀತಿಯಲ್ಲಿ ಮಾಡುತ್ತಾರೆ. ಮನೆಯ ಆಕಾರದ ಬಾಳೆದಿಂಡಿನಲ್ಲಿ ದೀಪವನ್ನು ಹಚ್ಚಿ ಇಡುತ್ತಾರೆ. ಅದರೊಂದಿಗೆ ಮೂರು ರೊಟ್ಟಿಯನ್ನಿಟ್ಟು, ಬಿಳಿ, ಕೆಂಪು, ನೀಲಿ, ಹಳದಿ, ಹಸಿರು (ಪತ್ರೆ) ಎಂಬ ಐದು ಬಣ್ಣದ ಹೂಗಳನ್ನಿಟ್ಟು ಭಯಗೊಂಡ ವ್ಯಕ್ತಿಯ ತಲೆಯ ಸುತ್ತ ನಿವಾಳಿಸಿ ಕುಲದೈವವನ್ನು ನೆನೆಯುವರು. ನಂತರ ಈ ಎಲ್ಲವನ್ನು ಊರ ಹೊರಗಿನ ಒಂದು ಮರದ ಹತ್ತಿರ ಇಟ್ಟು ಬರುತ್ತಾರೆ. ಅಲ್ಲಿ ಸೂರ್ಯ, ಚಂದ್ರ, ಬೆಳ್ಳಿ, ಭೂಮಿ, ಆಕಾಶ, ಕುಲದೈವವನ್ನು, ಗುರುಹಿರಿಯರನ್ನು ನೆನೆದು ಒಂದು ಕೋಳಿಯನ್ನು ತೆಗೆದುಕೊಂಡು, ಆ ಕೋಳಿಯನ್ನು ಭಯಗೊಂಡ ವ್ಯಕ್ತಿಯ ತಲೆಯ ಮೇಲೆ ನಿವಾಳಿಸಿ, ಏನೇ ಪೀಡೆಯಿದ್ದರೂ ಈ ತಲೆಯಿಂದ ಆ ತಲೆಗೆ ಹೋಗಲಿ ಎಂದು ಹೇಳಿ ಪೂಜೆ ಹಾಕುವರು.

* ಭಯಗೊಂಡ ವ್ಯಕ್ತಿಗಳನ್ನು ಹೊಳೆಯ ಹತ್ತಿರ ಕರೆದುಕೊಂಡು ಹೋಗುತ್ತಾರೆ. ಅಲ್ಲಿ ಮಣ್ಣಿನಿಂದ ಮನುಷ್ಯನ ಗೊಂಬೆಯನ್ನು ತಯಾರಿಸಿ ಅದಕ್ಕೆ ಹೂ, ಹಣ್ಣು, ಅರಿಶಿನ, ಕುಂಕುಮವನ್ನಿಟ್ಟು ಮೇಲೆ ಮೂರು ರೊಟ್ಟಿಯನ್ನು ಇಡುವರು. ಭಯಗೊಂಡ ವ್ಯಕ್ತಿಯು ಅದಕ್ಕೆ ಪೂಜೆಯನ್ನು ಮಾಡುತ್ತಾನೆ. ನಂತರ ಸಮುದಾಯದ ಹಿರಿಯರು ಒಂದು ಕೋಳಿಯನ್ನು ಈ ವ್ಯಕ್ತಿಯ ತಲೆಯನ್ನು ಬಳಸಿ ಈ ತಲೆ ಬಿಟ್ಟು ಆ ತಲೆ ಸೇರಲಿ ಎನ್ನುತ್ತಾರೆ. ಬಳಿಕ ನಿವಾಳಿಸಿದ ಕೋಳಿಯನ್ನು ಕೊಯ್ದು ಅದರ ರಕ್ತವನ್ನು ಮಣ್ಣಿನ ಗೊಂಬೆಯ ಮೇಲೆ ಹಾಕುವರು. ಆ ಗೊಂಬೆಯನ್ನು ತೆಗೆದುಕೊಂಡು ಕಾಡಿನಲ್ಲಿರುವ ಬೀಟೆಯ ಮರದ ಹತ್ತಿರ ಬಿಟ್ಟು ಬರುತ್ತಾರೆ.

* ಮಕ್ಕಳು ಅಥವಾ ಹಿರಿಯರು ಯಾರೇ ಭಯಗೊಂಡರೂ, ಭಯಗೊಂಡು ಊಟ ಮಾಡದಿದ್ದರೆ, ಜ್ವರ ಬಂದಿದ್ದರೆ, ಹಠಮಾಡಿ ಅತ್ತರೆ ಸಮುದಾಯದ ಕುಲದೈವ ಮಲ್ಲೇಶಸ್ವಾಮಿಯ ''ಗದ್ದುಗೆಯನ್ನು'' ಹಾಕಿಸುತ್ತಾರೆ. ಬಹುತೇಕ ಇದು ದೇವರಗುಡ್ಡ ಬೆಡಗಿನ ಮನೆತನದವರ ಮನೆಯಲ್ಲಿ ಇರುತ್ತದೆ. ಈ ಸಂದರ್ಭದಲ್ಲಿ ಕಾಣಿಕೆಯನ್ನು ನೀಡಿ ದೇವರಗುಡ್ಡ ಮನೆತನದವರನ್ನು ಕರೆಸುತ್ತಾರೆ. ಅವರಿಂದ ''ದೇವರಗದ್ದುಗೆಯನ್ನು'' ಹಾಕಿಸುವರು. ಸಮುದಾಯದ ಕೆಲವು ಹಿರಿಯರು ಹಣೆ, ಮೈ, ಕೈಗೆ ವಿಭೂತಿಯಿಟ್ಟುಕೊಂಡು ದೇವರ ಪೂಜೆಗೆ ಸಿದ್ಧಗೊಳಿಸುತ್ತಾರೆ. ಪೂಜೆಯನ್ನು ಮಾಡಿ, ಭಜನೆಯನ್ನು ಮಾಡುವರು. ಅಲ್ಲಿಗೆ ಭಯಗೊಂಡ ಮಕ್ಕಳು ಮತ್ತು ಹಿರಿಯರನ್ನು ಕರೆತರುತ್ತಾರೆ. ಪೂಜೆಯ ಹತ್ತಿರ ಅವರನ್ನು ಕುಳ್ಳಿರಿಸಿ, ಭಯಕ್ಕೆ ಕಾರಣವನ್ನು ಕೇಳಲಾಗುತ್ತದೆ. ಭಯಕ್ಕೆ ಕಾರಣವನ್ನು ಭಯಗೊಂಡವನಿಂದಲೇ ಹೇಳಿಸುತ್ತಾರೆ. ಅದಕ್ಕೆ ನಿವಾರಣೆಯನ್ನು ದೇವರಿಗೆ ಕೇಳುವರು. ದೇವರಾದರೆ ಪೂಜೆಯನ್ನು ಯಾವ ರೀತಿ ಮಾಡಬೇಕೆಂದು ಕೇಳುವರು. ದೆವ್ವ, ಪೀಡೆಗಳಾಗಿದ್ದರೆ ಕೋಳಿ, ಕುರಿ, ಹಂದಿ ಮುಂತಾದ ಬಲಿಯನ್ನು ಕೇಳುವುದುಂಟು. ಆಗ ಮನೆಯವರು, ದೇವರ ಕಾಟವಾಗಿದ್ದರೆ ಕೇಳಿದ ಪೂಜೆಯನ್ನು ಮಾಡಿಸುತ್ತಾರೆ. ನಂತರ ದೇವರ ಕಡ್ಡಿಯಿಂದ ಭಯಗೊಂಡವರಿಗೆ ಹೊಡೆದು ಹೊರ ಕಳಿಸುವರು. ಹೊರಗೆ ಒಂದು ಗುಡಿಸಲಿನ ಹಿಂದೆ ಮೂರು ರೊಟ್ಟಿ,

ಮಂಡಕ್ಕಿಯನ್ನಿಟ್ಟು ಪೂಜಿಸುತ್ತಾರೆ. ಕೋಳಿಯನ್ನು ಬಲಿ ಕೇಳಿದ್ದರೆ ಅಲ್ಲಿಯೇ ಅದನ್ನು ಬಲಿಕೊಡುತ್ತಾರೆ. ಹಂದಿ, ಕುರಿಯ ಬಲಿಯನ್ನು ಕೇಳಿದ್ದರೆ, ಚಾಮುಂಡಿ ಜಾತ್ರೆಯಲ್ಲಿ ಬಲಿ ನೀಡುವರು.

ಈ ಎಲ್ಲ ಕ್ರಮಗಳಿಂದ ಒಡಿಗ ಸಮುದಾಯವು ಭಯಗೊಂಡಂತಹ ವ್ಯಕ್ತಿಗಳನ್ನು ಶುದ್ಧೀಕರಿಸಿ, ಧೈರ್ಯ ತಂದುಕೊಡುತ್ತಾರೆ.

**೩ : ೬ : ೨೦ : ೩ ಬಾಲಗ್ರಹ :** ಮಕ್ಕಳಿಗೆ ದುಷ್ಟಶಕ್ತಿಗಳಿಂದ ಬಾಲಗ್ರಹ ಪೀಡೆಯು ಅಂಟಿಕೊಳ್ಳುತ್ತದೆ ಎಂದು ಈ ಸಮುದಾಯ ನಂಬುತ್ತದೆ. ಈ ಸಮಯದಲ್ಲಿ ಮಗುವಿಗೆ ಮಂತ್ರ ಹಾಕಿಸಿ, ಯಂತ್ರವನ್ನು ಕಟ್ಟಿಸುತ್ತಾರೆ. ಮಂತ್ರದ ಬೂದಿಯನ್ನು ಹಣೆಗೆ ಹಚ್ಚುವರು. ಇದರಿಂದ ಬಾಲಗ್ರಹ ಪೀಡೆಯು ನಿವಾರಣೆಯಾಗುತ್ತದೆಂದು ಒಡಿಗರು ಹೇಳುತ್ತಾರೆ.

**೩ : ೬ : ೨೦ : ೪ ಕುಕ್ಕೆ ಕೆಮ್ಮು :** ಕುಕ್ಕೆ ಕೆಮ್ಮು ಇರುವವರನ್ನು ಬೆಳಗಿನ ಜಾವ ನೀರು ಮುಟ್ಟದಂತೆ ಕರೆದುಕೊಂಡು ಬರುವರು. ಮಂತ್ರಗಾರ ಮಂತ್ರವನ್ನು ಹಾಕುತ್ತಾನೆ. ನಾಲಿಗೆಯ ಮೇಲಿನ ಅಂಗುಳವನ್ನು ಒತ್ತುತ್ತಾ ನೆತ್ತಿಯ ಕೂದಲು ಎಳೆದು ಅದನ್ನು ನಿವಾರಿಸುತ್ತಾನೆ.

**೩ : ೬ : ೨೦ : ೫ ಉಳುಕು :** ಯಾವುದೇ ವ್ಯಕ್ತಿಗೆ ಕೀಲು ಉಳುಕು ಇದ್ದರೆ ಉಳುಕಿರುವ ಭಾಗಕ್ಕೆ ಹರಳೇಎಣ್ಣೆಯನ್ನು ಹಚ್ಚಿ ತೀಡುತ್ತಾರೆ ಹಾಗೂ ಮಂತ್ರದ ಕಡ್ಡಿಯಿಂದ ನಿವಾರಿಸುತ್ತಾರೆ.

**೩ : ೬ : ೨೦ : ೬ ಮಕ್ಕಳು ಹಠಮಾಡಿದರೆ :** ಮಕ್ಕಳು ರಂಪ ಮಾಡಿದರೆ ಮಂತ್ರಗಾರನು ವಿಭೂತಿಯನ್ನಿಡಿದು ಅಕ್ಕಿಕಾಳು, ತುಳಸಿ ಎಲೆಗಳು ಮತ್ತು ಒಲೆಯ ನಡುವಿನ ಬೂದಿಯನ್ನು ತೆಗೆದುಕೊಂಡು ಹಠ ಮಾಡುವ ಮಕ್ಕಳಿಗೆ ಅಂಟಿಕೊಂಡಿರುವ ಗಾಳಿ, ಪೀಡೆ, ಗ್ರಹಾದಿ ದೋಷವನ್ನು ಹೋಗುವಂತೆ ಹೇಳುತ್ತಾ ಮಕ್ಕಳ ತಲೆಯ ಸುತ್ತ ನಿವಾಳಿಸುತ್ತಾನೆ. ಅದನ್ನು ಊರ ಹೊರಗಿನ ಒಂದು ಮರದಡಿಯಲ್ಲಿ ಹಾಕುತ್ತಾನೆ.

**೩ : ೬ : ೨೧ ಪಶುವೈದ್ಯ**

ಮನುಷ್ಯರಿಗೆ ಬರುವಂತೆ ಪ್ರಾಣಿ-ಪಕ್ಷಿಗಳಿಗೂ ಹಲವಾರು ರೋಗರುಜಿನಗಳು ಬರುತ್ತವೆ. ತೀರಾ ಕಾಡಿನಲ್ಲಿ ವಾಸಿಸುವ ಪ್ರಾಣಿ-ಪಕ್ಷಿಗಳಿಗೆ ಯಾರೂ ವೈದ್ಯವನ್ನು ಮಾಡುವುದಿಲ್ಲ. ''ಕಾಡು ಮೃಗಗಳಿಗೆ ಯಾರು ಸಾಮಾನ್ಯವಾಗಿ ಔಷಧಿ ಕೊಡಲು ಹೋಗುವುದಿಲ್ಲ. ಅವು ಚಿಕ್ಕ ಪುಟ್ಟ ರೋಗಗಳನ್ನು ತಾವೇ ಗುಣಪಡಿಸಿಕೊಳ್ಳುತ್ತವೆ. ಅಜೀರ್ಣವಾದಾಗ ತಾವೇ ಉಪವಾಸ ಮಾಡುತ್ತವೆ. ಕಾಯಿಲೆಯಾದಾಗ ವಿಶ್ರಾಂತಿ ಪಡೆಯುತ್ತವೆ. ಅಗತ್ಯವಾದ ನಾರು, ಬೇರು ತಿಂದು ಉಪಶಮನ ಮಾಡಿಕೊಳ್ಳುತ್ತವೆ. ಹಾವಿನಿಂದ ಕಚ್ಚಲ್ಪಟ್ಟ ಪ್ರಾಣಿ ಸರ್ಪಗಂಧಿ ತಿನ್ನುತ್ತದೆ''.[೪] ಅವು ತಮ್ಮನ್ನು ತಾವೇ ರಕ್ಷಿಸಿಕೊಳ್ಳುತ್ತವೆ. ಆದರೆ ಜನಸಮುದಾಯವು ತಮ್ಮೊಂದಿಗೆ ವಾಸಿಸುವ ದನಗಳು, ಕುರಿ, ಮೇಕೆ, ಕೋಳಿ ಇತ್ಯಾದಿ ಪ್ರಾಣಿಗಳಿಗೆ ಯಾವುದಾದರೂ ರೋಗ ಬಂದರೆ ತಕ್ಷಣವೇ ಅವುಗಳಿಗೆ ವೈದ್ಯ ಮಾಡುತ್ತಾರೆ. ಹೀಗೆ ಪಶುವೈದ್ಯವನ್ನು ಒಡಿಗ ಸಮುದಾಯವು ಮಾಡುತ್ತದೆ. ಪಶು ಪಕ್ಷಿಗಳಿಗೆ ಬರುವ ಕೆಲವು ರೋಗಗಳು ಮತ್ತು ಅವುಗಳಿಗೆ ನೀಡುವ ಚಿಕಿತ್ಸೆಯು ಈ ಕೆಳಗಿನಂತಿದೆ.

**೩ : ೬ : ೨೧ : ೧ ಚಪ್ಪೆರೋಗ :** ಜಾನುವಾರುಗಳಲ್ಲಿ ಕಾಲುಗಳ ಶಕ್ತಿಯು ಕುಂದಿದಾಗ ನಡೆಯಲಾಗದೇ ಕುಸಿಯುತ್ತವೆ. ಅಲ್ಲದೇ ಈ ರೋಗ ಬಂದಾಗ ಕಣ್ಣಿನಲ್ಲಿ ಪಿಸುರು ಕಟ್ಟುತ್ತದೆ. ಹುಲ್ಲು, ನೀರು ಏನನ್ನು ತಿನ್ನುವುದಿಲ್ಲ. ಈ ಸಂದರ್ಭದಲ್ಲಿ ಈರುಳ್ಳಿ, ಬೆಲ್ಲ, ವೀಳ್ಯದೆಲೆ ಬೆರೆಸಿ ತಿನ್ನಿಸುತ್ತಾರೆ. ಶುಂಠಿ, ಮಜ್ಜಿಗೆಯನ್ನು ಕುಡಿಸುವರು. ಅಲ್ಲದೇ ರಾಗಿ ಅಂಬಲಿಯನ್ನು ಕುಡಿಸುವುದರಿಂದ ಕಾಲುಗಳಲ್ಲಿ ಶಕ್ತಿ ವರ್ಧಿಸಿ ರೋಗವು ವಾಸಿಯಾಗುತ್ತದೆ.

**೩ : ೬ : ೨೧ : ೨ ಧನುರ್ವಾಯು :** ಪಶುಗಳ ಕಾಲುಗಳಲ್ಲಿ ಬಲಹೀನತೆ ಕಂಡು ಬಂದು ಓಡಾಡದೇ ಮೈಚಾಚಿ ಮಲಗುತ್ತವೆ. ಕಾಲುಗಳನ್ನು ಜಾಡಿಸುತ್ತಿರುತ್ತವೆ. ಕಣ್ಣಿನಿಂದ ನೀರು ಸುರಿಯುತ್ತದೆ. ಈ ಸಮಯದಲ್ಲಿ ಮೆಂತ್ಯೆ, ಶುಂಠಿ, ಬೆಳ್ಳುಳ್ಳಿ, ಗಿಡಮೂಲಿಕೆಯ ಬೇರು ಚೆನ್ನಾಗಿ ಅರೆದು ನೀರು ಅಥವಾ ಮಜ್ಜಿಗೆಯೊಂದಿಗೆ ಬೆರೆಸಿ ಎರಡು, ಮೂರು ದಿವಸ ಕುಡಿಸುತ್ತಾರೆ. ಇದರಿಂದ ರೋಗ ಗುಣವಾಗುತ್ತದೆ.

**೩ : ೬ : ೨೧ : ೩ ಉಬ್ಬಸ :** ಜಾನುವಾರುಗಳು ಅತ್ತಿಂದಿತ್ತ ಓಡಾಡುತ್ತವೆ. ಉಸಿರಾಟದ ತೊಂದರೆಯಾಗುತ್ತದೆ. ಮೈ ನಡುಕ ಉಂಟಾಗುತ್ತದೆ. ಉಸಿರಾಡುವಾಗ ಶಬ್ದ ಹೆಚ್ಚಾಗಿ ಬರುತ್ತದೆ. ಇದಕ್ಕೆ ತುಳಸಿ, ಶುಂಠಿ, ಬೆಳ್ಳುಳ್ಳಿ, ಸುಗಂಧಿ ಬೇರು ಮತ್ತು ಬೇವಿನ ತೊಗಟೆಯನ್ನು ಚೆನ್ನಾಗಿ ಅರೆದು ನೀರಿನೊಂದಿಗೆ ಕುಡಿಸುತ್ತಾರೆ. ಇದರಿಂದ ಉಬ್ಬಸ ರೋಗ ವಾಸಿಯಾಗುತ್ತದೆ.

**೩ : ೬ : ೨೧ : ೪ ಈರುಹುಣ್ಣು :** ಪ್ರಾಣಿಗಳ ಕರುಳಿನ ಮೇಲೆ ಹುಣ್ಣು ಆಗುವುದನ್ನು ಈರುಹುಣ್ಣು ಎಂದು ಕರೆಯುತ್ತಾರೆ. ಈ ರೋಗ ಆಹಾರದ ವ್ಯತ್ಯಾಸದಿಂದ ಬರುತ್ತದೆ. ಇದಕ್ಕೆ ಈರುಳ್ಳಿ, ತುಳಸಿ, ಮೂಲಿಕೆಯನ್ನು ಅರೆದು ಮಜ್ಜಿಗೆಯಲ್ಲಿ ಬೆರೆಸಿ ಕುಡಿಸುವುದರಿಂದ ಹುಣ್ಣು ಕರಗಿ ವಾಸಿಯಾಗುತ್ತದೆ.

**೩ : ೬ : ೨೧ : ೫ ಕಾಲುಬಾಯಿ ಜ್ವರ :** ಪ್ರಾಣಿಗಳಿಗೆ ಬಾಯಿಯು ಒಣಗುತ್ತದೆ. ಮೇವು-ನೀರು ಸೇರುವುದಿಲ್ಲ. ಇದು ಅತ್ಯಂತ ಕೆಟ್ಟರೋಗವಾಗಿರುತ್ತದೆ. ಇದರಿಂದ ಜಾನುವಾರುಗಳು ಮರಣ ಹೊಂದುತ್ತವೆ. ಈ ಸಂದರ್ಭದಲ್ಲಿ ನೊಣಗಳು ಮುಕುರುತ್ತವೆ. ಇದಕ್ಕಾಗಿ ಶುಂಠಿ, ಬೆಳ್ಳುಳ್ಳಿ, ಕಾಡುಬೇವಿನ ತೊಗಟೆಯನ್ನು ಅರೆದು ಮಜ್ಜಿಗೆಯೊಂದಿಗೆ ಬೆರೆಸಿ ದಿನಕ್ಕೆರೆಡು ಸಾರಿ ಕುಡಿಸುತ್ತಾರೆ. ನೊಣಗಳು ಮುತ್ತದಿರಲೆಂದು ಕರಿತುಳಸಿಯ ರಸವನ್ನು ಮೈಗೆ ಲೇಪಿಸುವರು.

**೩ : ೬ : ೨೧ : ೬ ಸೆಲೆರೋಗ :** ಜಾನುವಾರುಗಳು ಆಹಾರ-ಪಾನೀಯವನ್ನು ತೊರೆದು, ಬಾಯಿಯಿಂದ ಜೊಲ್ಲು ಸುರಿಸುತ್ತಾ, ಮಂಕಾಗಿ ಮಲಗುತ್ತವೆ, ದೇಹವು ಸೊರಗುತ್ತದೆ. ಇದನ್ನು ಸೆಲೆರೋಗವೆಂದು ಗುರುತಿಸುತ್ತಾರೆ. ಇದರ ನಿವಾರಣೆಗಾಗಿ ಸೆಲೆ ಗಿಡದ ಬಳ್ಳಿಯನ್ನು ಪಶುಗಳ ಕೊರಳಿಗೆ ಕಟ್ಟುವರು. ಅಲ್ಲದೇ ತುಳಸಿ, ಬೆಳ್ಳುಳ್ಳಿ, ಶುಂಠಿ, ಕಾಡುಬೇವಿನ ತೊಗಟೆ ಮತ್ತು ಗಿಡಮೂಲಿಕೆಯೊಂದಿಗೆ ಅರೆದು ಕುಡಿಸುತ್ತಾರೆ. ಆಗ ದನಗಳಿಗೆ ಸೀನು ಬಂದು, ಇದರಿಂದ ಮೈ ಹಗುರವಾಗಿ ರೋಗವು ನಿವಾರಣೆಯಾಗುತ್ತದೆ.

**೩ : ೬ : ೨೧ : ೭ ಹೊಟ್ಟೆಹುಳು :** ಜಾನುವಾರುಗಳ ಹೊಟ್ಟೆಯಲ್ಲಿ ಹುಳುಗಳಿದ್ದರೆ ಆಹಾರವನ್ನು ತೊರೆಯುತ್ತವೆ, ಮಂಕಾಗಿ ಮಲಗುತ್ತವೆ. ಇದಕ್ಕೆ ಚೆಂಡುಹೂವಿನ ರಸ ಹಾಗೂ ಕರಿತುಳಸಿಯ ರಸವನ್ನು ಕುಡಿಸುತ್ತಾರೆ. ಇದರಿಂದ ಹುಳು ಸತ್ತು, ಪ್ರಾಣಿಗಳು ಆಹಾರ ಸೇವಿಸುತ್ತವೆ.

**೩ : ೬ : ೨೧ : ೮ ಗದ್ದಕಟ್ಟು :** ಕೊಳಚೆ ನೀರು, ಕಲ್ಮಷಯುಕ್ತ ನೀರನ್ನು ಕುಡಿದಾಗ ಜಾನುವಾರುಗಳ ನಾಲಿಗೆಯ ಮೇಲೆ ಒಂದು ರೀತಿಯ ಊತು ಕಾಣಿಸಿಕೊಳ್ಳುತ್ತದೆ. ಇದನ್ನು 'ಗದ್ದಕಟ್ಟು' ರೋಗವೆಂದು ಕರೆಯುತ್ತಾರೆ. ಈ ರೋಗದಿಂದ ಮೇವು, ನೀರು ತೊರೆಯುತ್ತವೆ. ಇದಕ್ಕೆ ಚಿಕಿತ್ಸೆಯಾಗಿ ಜಾನುವಾರುಗಳ ಕೊರಳು ಗದ್ದದ ಹತ್ತಿರ ಬರೆಯನ್ನು ಹಾಕುತ್ತಾರೆ. ಈ ಬರೆಯ ಗಾಯಕ್ಕೆ ಬೆಣ್ಣೆ ಇಲ್ಲವೇ ಸೆಗಣಿ ಲೇಪಿಸುವರು. ಇದರಿಂದ ರೋಗ ವಾಸಿಯಾಗುತ್ತದೆ.

**೩ : ೬ : ೨೧ : ೯ ಹುಣ್ಣುರೋಗ :** ಪ್ರಾಣಿಗಳ ಮೂಗಿನ ಹೊಳ್ಳೆಯಲ್ಲಿ ಸಣ್ಣ ಸಣ್ಣ ಹುಣ್ಣಾಗುತ್ತವೆ, ಇದರಿಂದ ಅವು ಆಹಾರ ತಿನ್ನಲು ಕಷ್ಟವಾಗುತ್ತದೆ. ಇದಕ್ಕೆ ಗಿಡಮೂಲಿಕೆಯ ಹಸಿರು ಮದ್ದಿನೊಂದಿಗೆ ಅರೆದು ರಸವನ್ನು ಹೊಳ್ಳೆಯ ಸಂದಿಗೆ ಬಿಡಬೇಕು. ಹೀಗೆ ಮೂರು ದಿನಗಳವರೆಗೆ ಬಿಟ್ಟರೆ ಇದರಿಂದ ರೋಗ ನಿವಾರಣೆಯಾಗುತ್ತದೆ.

**೩ : ೬ : ೨೧ : ೧೦ ಮೂಳೆ ಮುರಿದರೆ :** ದನಕರುಗಳಿಗೆ ಮೂಳೆಯು ಯಾವುದೇ ಭಾಗದಲ್ಲಿ ಮುರಿದರೆ ಅದಕ್ಕೆ ಬೆಲ್ಲ, ಶುಂಠಿ, ಬೆಳ್ಳುಳ್ಳಿ, ಕಾಡುಬೇವಿನ ಸೊಪ್ಪು, ಕರಿತುಳಸಿಯನ್ನು ಚೆನ್ನಾಗಿ ಅರೆದು ಮೂಳೆ ಮುರಿದ ಭಾಗಕ್ಕೆ ಲೇಪಿಸಿ, ಎರಡು ಬಿದಿರು ಕಡ್ಡಿಯನ್ನು ಕಟ್ಟಿ ವೀಳ್ಯೆದೆಲೆ ಇಟ್ಟು ಬಟ್ಟೆಯೊಂದಿಗೆ ಬಿಗಿಯುತ್ತಾರೆ. ಇದರಿಂದ ಮೂಳೆಯು ಕಟ್ಟಿಕೊಳ್ಳುತ್ತದೆ.

**೩ : ೬ : ೨೧ : ೧೧ ಉಚ್ಚುವುದು :** ದನಕರುಗಳು ತಿನ್ನುವ ಆಹಾರದ ವ್ಯತ್ಯಾಸದಿಂದಾಗಿ ಈ ಬಾಧೆಯು ಬರುತ್ತದೆ. ಕೆಲವು ಗಿಡಮೂಲಿಕೆಯೊಂದಿಗೆ ಶುಂಠಿ, ಬೆಳ್ಳುಳ್ಳಿಯನ್ನು ಅರೆದು, ಬೆರೆಸಿ ದಿನಕ್ಕೆರಡು ಸಾರಿ ಮಜ್ಜಿಗೆಯಲ್ಲಿ ನಾಲ್ಕೈದು ದಿವಸ ಕುಡಿಸುವುದರಿಂದ ಉಚ್ಚುವುದು ನಿಲ್ಲುತ್ತದೆ.

**೩ : ೬ : ೨೧ : ೧೨ ದೊಡ್ಡರೋಗ :** ಜಾನುವಾರುಗಳಿಗೆ ಕಂಡುಬರುವ ಅತ್ಯಂತ ಭೀಕರವಾದ ರೋಗವಿದು. ರೋಗ ಬಂದು ಒಂದು ವಾರದಲ್ಲಿ ದೇಹ ಕ್ಷೀಣಿಸಿ ಮರಣ ಹೊಂದುತ್ತವೆ. ಈ ರೋಗಕ್ಕೆ ಕೆಲವು ಗಿಡಮೂಲಿಕೆಯೊಂದಿಗೆ ಜೀರಿಗೆ, ಬೆಲ್ಲ, ಜೇನುತುಪ್ಪವನ್ನು ಬೆರೆಸಿ ಗೊಟ್ಟದಲ್ಲಿ ಹಾಕಿ ಕುಡಿಸುತ್ತಾರೆ. ಒಂದು ವಾರಾವಧಿಯಲ್ಲಿ ಈ ವೈದ್ಯ ಮಾಡಿದರೆ ಪ್ರಾಣಿಗಳು ಪ್ರಾಣಾಪಾಯದಿಂದ ಉಳಿಯುತ್ತವೆ.

**೩ : ೬ : ೨೧ : ೧೩ ಹೇನು ಬೀಳುವುದು :** ಜಾನುವಾರುಗಳ ಮೈಯಲ್ಲಿ ಹೇನುಗಳು ಹೆಚ್ಚಾಗಿದ್ದರೆ, ಹಾಲುವಾಣದ ಸೊಪ್ಪು ಅಥವಾ ತುಂಬೆಗಿಡದ ರಸವನ್ನು ಕಾಡುಬೇವಿನ ರಸದೊಂದಿಗೆ ಬೆರೆಸಿ ಮೈಗೆ ಲೇಪಿಸುವರು. ನಂತರ ಒಂದೆರೆಡು ಗಂಟೆಯಾದ ಬಳಿಕ ನೀರೆರೆಯುತ್ತಾರೆ. ಇದರಿಂದ ಹೇನು ನಾಶವಾಗುತ್ತವೆ.

**೩ : ೬ : ೨೧ : ೧೪ ಅಂಗಳಕುಪ್ಪೆ :** ಜಾನುವಾರುಗಳ ನಾಲಿಗೆಯ ಹಿಂದಿನ ಭಾಗದಲ್ಲಿ ಅಂಗಳಕುಪ್ಪೆಯು ಉಂಟಾಗುತ್ತದೆ. ಈ ನೋವಿನಿಂದ ಅವು ಮೇವು ತಿನ್ನುವುದಿಲ್ಲ. ಆಗ ಕಾರೆಮುಳ್ಳಿನಿಂದ ನಾಲಿಗೆಯ ಹಿಂಭಾಗವನ್ನು ರಕ್ತಬರುವಂತೆ ಕೆರೆಯುತ್ತಾರೆ. ಒಂದೆರೆಡು ದಿನದಲ್ಲಿ ಇದು ವಾಸಿಯಾಗುತ್ತದೆ.

೩ : ೬ : ೨೧ : ೧೫ **ಕೋಳಿರೋಗ :** ಕೋಳಿಗಳಿಗೆ ರೋಗ ಬಂದರೆ ಅವುಗಳಿಗೆ ಬೆಳ್ಳುಳ್ಳಿ ಮತ್ತು ಕೆಲವು ಗಿಡಮೂಲಿಕೆಗಳ ರಸವನ್ನು ಬೆರೆಸಿ ಕುಡಿಸಿದರೆ ಕೋಳಿರೋಗ ಕಡಿಮೆಯಾಗುತ್ತದೆ.

ಹೀಗೆ ಒಡಿಗ ಸಮುದಾಯವು ಮನುಷ್ಯರಿಗೆ ಹಾಗೂ ತಮ್ಮೊಂದಿಗೆ ಜೀವಿಸುವ ಪ್ರಾಣಿ-ಪಕ್ಷಿಗಳಿಗೆ ತಮ್ಮದೇ ಆದಂತಹ ವೈದ್ಯ ಪದ್ಧತಿಯನ್ನು ಅನುಸರಿಸುವರು. ಹೆಚ್ಚಾಗಿ ಇವರು ಕಾಡಿನಲ್ಲಿ ದೊರೆಯುವ ಶಕ್ತಿಯುತವಾದಂತಹ ಮೂಲಿಕೆಗಳನ್ನು ಉಪಯೋಗಿಸಿ, ಹಲವಾರು ರೋಗಗಳನ್ನು ವಾಸಿಮಾಡಿಕೊಳ್ಳುತ್ತಾರೆ. ಆಧುನಿಕವಾಗಿ ಕೆಲವರು ಆಧುನಿಕ, ವೈಜ್ಞಾನಿಕ ಮದ್ದು-ಗುಳಿಗೆಗಳನ್ನು ಬಳಸುತ್ತಿರುವುದು ಕಂಡುಬರುತ್ತದೆ. ಅದೇನಿದ್ದರೂ ಪಾರಂಪರಿಕವಾಗಿ ಈ ಸಮುದಾಯ ಉಳಿಸಿಕೊಂಡು ಬಂದಂತಹ ಕಾಡುವೈದ್ಯವನ್ನೇ ಪ್ರಬಲ ಔಷಧಿಯನ್ನಾಗಿ ಸ್ವೀಕರಿಸಿದ್ದಾರೆ. ಇದರಿಂದ ದೇಸೀ ವೈದ್ಯ ಪದ್ಧತಿಯು ಒಳ್ಳೆಯ ಪ್ರತಿಫಲವನ್ನು ನೀಡಿದೆಯೆಂಬುದು ಈ ಸಮುದಾಯದಿಂದ ತಿಳಿಯುತ್ತದೆ.

### ೩ : ೭ ಆಹಾರ ಪದ್ಧತಿ

ಜಗತ್ತಿನ ಪ್ರತಿಯೊಂದು ಜೀವರಾಶಿಗೂ ಆಹಾರ ಅವಶ್ಯಕವಾಗಿ ಬೇಕು. ಆಹಾರದಲ್ಲಿ ಮಾಂಸಾಹಾರ ಮತ್ತು ಸಸ್ಯಾಹಾರ ಮತ್ತು ಮಿಶ್ರಾಹಾರ ಪದ್ಧತಿಯು ಇದೆ. ಮಾನವ ಸಮುದಾಯಗಳಲ್ಲಿ ಈ ಬಗೆಯ ಆಹಾರ ಪದ್ಧತಿಯನ್ನು ಅನುಸರಿಸುವ ಪಂಗಡಗಳಿವೆ. ಆರಂಭಕಾಲದಲ್ಲಿ ಎಲ್ಲ ಸಮುದಾಯಗಳು ಮೂಲತಃ ಮಾಂಸಾಹಾರಿಗಳಾಗಿದ್ದ ಬಗೆಗೆ ಮಾಹಿತಿಯಿದೆ. ಕಾಲಾಂತರದಲ್ಲಿ ರೂಢಿಸಿಕೊಂಡ ನಂಬಿಕೆ, ಆಚರಣೆಗೆ ಸಂಬಂಧಿಸಿದ ಸಸ್ಯಾಹಾರಿ, ಮಾಂಸಾಹಾರಿ ಎಂಬ ಬಗೆಯಲ್ಲಿ ವಿಭಜನೆಯಾದರು. ಆಹಾರ ಪದ್ಧತಿಯು ಆಯಾ ಭೌಗೋಳಿಕ ವಲಯವನ್ನು ಅವಲಂಬಿಸಿರುತ್ತದೆ. ''ಮಾನವ ತಾನು ಯಾವ ಭೌಗೋಳಿಕ ಪರಿಸರದಲ್ಲಿ ಬದುಕಿದ್ದನೋ ಆ ಹವಾಗುಣಕ್ಕೆ ಹೊಂದುವಂತಹ ಆಹಾರ ಧಾನ್ಯಗಳನ್ನು ಬೆಳೆಯುವುದು ಅನಿವಾರ್ಯ. ಆದರೆ ಹಿಂದೆ ಅಲೆಮಾರಿಯಾಗಿದ್ದ ಮಾನವನಿಗೆ ಕಾಡಿನ ಹಣ್ಣು, ಹಂಪಲು, ಗಡ್ಡೆ ಗೆಣಸುಗಳೇ ಆಹಾರವಾಗಿದ್ದವು. ಕ್ರಮೇಣ ಬೌದ್ಧಿಕ ಬೆಳವಣಿಗೆಯಾದಂತೆ ಅವನು ಭೂ ಸಾಗುವಳಿ ಮಾಡುವುದನ್ನು ಕಲಿತು ಆಹಾರಧಾನ್ಯಗಳನ್ನು ಬೆಳೆಯುವುದರ ಜೊತೆಗೆ ಆಹಾರ ಪದ್ಧತಿಯಲ್ಲಿ ಬದಲಾವಣೆ ತಂದುಕೊಂಡನು''. ಇಂದು ಬುಡಕಟ್ಟು ಸಮುದಾಯಗಳಲ್ಲಿ ಭೌಗೋಳಿಕ ಗುಣಕ್ಕೆ ಪೂರಕವಾಗಿ ಆಹಾರದ ಕ್ರಮ ಬದಲಾವಣೆಗೊಂಡರೂ ಮೂಲತಃ ಕಾಡುವಾಸಿಗಳಾಗಿದ್ದುದರಿಂದ ಬೇಟೆಯ ಮೂಲಕ ತಂದಂತಹ ಮಾಂಸವನ್ನೇ ಮೂಲ ಆಹಾರವಾಗಿಸಿಕೊಂಡು, ಇಂದು ಕೊಂಚ ಬದಲಾವಣೆಯನ್ನು ರೂಢಿಸಿಕೊಂಡಿದ್ದಾರೆ.

ಕೇವಲ ಭೌಗೋಳಿಕ ವಲಯಗಳಿಂದ ಮಾತ್ರವಲ್ಲದೇ ಧಾರ್ಮಿಕ ಪರಿಸರವನ್ನು ಅವಲಂಬಿಸಿಯೂ ಭಾರತದಂತಹ ಪರಿಸರದಲ್ಲಿ ಆಹಾರ ಪದ್ಧತಿಯು ಹಲವಾರು ಬದಲಾವಣೆಯಾಗಿರುವುದನ್ನು ಗುರುತಿಸಬಹುದು.

ಒಡಿಗ ಬುಡಕಟ್ಟು ಸಮುದಾಯವೂ ಆರಂಭದಲ್ಲಿ ಅನಿವಾರ್ಯ ಕಾರಣಗಳಿಂದ ಕಾಡಿನಲ್ಲಿ ವಾಸಮಾಡಿದರು. ಕಾಡಿನ ಜೀವನ ಅನಿವಾರ್ಯವಾಗುವುದರೊಂದಿಗೆ ತಮ್ಮ ಬದುಕು, ಆಹಾರ ನಿಯಮವೂ ಅದಕ್ಕೆ ತಕ್ಕಂತೆಯೇ ರೂಢಿಯಾಯಿತು. ಸಧ್ಯ ಈ ಸಮುದಾಯ ಆಹಾರದ ನಿಯಮದಲ್ಲಿ ಇಂದಿನ ಅಗತ್ಯಕ್ಕೆ ತಕ್ಕಂತೆ ರೂಢಿಸಿಕೊಂಡಿದೆ. ಮೂಲತಃ

ಮಾಂಸಾಹಾರಿಗಳಾದ ಇವರು ಬೇಟೆಯನ್ನಾಡುತ್ತಾರೆ. ಇಂದು ಸಂಪೂರ್ಣ ಮಾಂಸಾಹಾರಿಗಳಲ್ಲ. ಬೇಟೆಯನ್ನೇ ಆಹಾರವನ್ನಾಗಿ ಅವಲಂಬಿಸಿಲ್ಲ. ಬದಲಾಗಿ ಆಧುನಿಕ ಜೀವನ ಶೈಲಿಯೊಂದಿಗೆ ರಾಜಿಗಿಳಿದು ಸಸ್ಯಾಹಾರವನ್ನು ರೂಢಿಸಿಕೊಂಡಿದ್ದಾರೆ. ಈ ಸಮುದಾಯವೂ ತಮ್ಮ ಕೆಲವು ಆಚರಣೆಗಳಲ್ಲಿ ಮದ್ಯ ಮತ್ತು ಮಾಂಸವನ್ನು ಕಡ್ಡಾಯವೆಂಬಂತೆ ಬಳಸುವರು. ಅಲ್ಲದೇ ಸಸ್ಯಾಹಾರವನ್ನು ಬಳಸುತ್ತಾರೆ.

ಒಡಿಗ ಸಮುದಾಯವು ಸಸ್ಯಾಹಾರವನ್ನು ರೂಢಿಸಿಕೊಂಡ ನಂತರದಲ್ಲಿ ಇವರ ಬಡತನ, ಆರ್ಥಿಕ ಅಧೋಗತಿಯ ಕಾರಣಗಳಿಂದಾಗಿ ಕಾಡಿನಲ್ಲಿ ದೊರೆಯುವ ಹಲವಾರು ಸೊಪ್ಪುಗಳನ್ನೇ ತಿಂದು ಬದುಕಿದ್ದಾರೆ. ಅಂತಹ ಕೆಲವು ಸೊಪ್ಪುಗಳೆಂದರೆ-

052360

| | | | |
|---|---|---|---|
| ೧ | ಕೊಳಕೆ ಮುಳ್ಳಿನ ಸೊಪ್ಪು | ೫ | ಅನೆಗೂನೆ ಸೊಪ್ಪು |
| ೨ | ಕೀರೆ ಸೊಪ್ಪು | ೬ | ಕುಂಬಳ ಸೊಪ್ಪು |
| ೩ | ಸೀಗೆ ಸೊಪ್ಪು | | |
| ೪ | ತಗಟೆಸೊಪ್ಪು | | |

ಅಲ್ಲದೇ ಕೆಲವು ಗಡ್ಡೆ ಗೆಣಸುಗಳನ್ನು ಉಪಯೋಗಿಸುತ್ತಿದ್ದರು. ಅವುಗಳ ಹೆಸರು ಹೀಗಿವೆ -

| | | | |
|---|---|---|---|
| ೧ | ಕೋವೆ ಗೆಣಸು | ೫ | ನೂರೆ ಗೆಣಸು |
| ೨ | ನಾಡು ಗೆಣಸು | ೬ | ಅಕ್ಕಿ ಗೆಣಸು |
| ೩ | ತೊಗಟೆ ಗೆಣಸು | ೭ | ಕುಳೆ ಗೆಣಸು |
| ೪ | ನಾರೆ ಗೆಣಸು | ೮ | ಚಾನೆ ಗೆಣಸು |

'ಬಂಗವ್ವಡ' ಗ್ರಂಥಾಲಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಈ ಸೊಪ್ಪು, ಗೆಣಸುಗಳನ್ನೇ ಆಹಾರವಾಗಿ ಸೇವಿಸಿ, ಜೀವಿಸಿದ ಈ ಸಮುದಾಯದ ಆರ್ಥಿಕ ಸ್ಥಿತಿಯು ಇಂದಿಗೂ ಅರೆಕೊರೆಯಾಗಿದೆ. ಆದರೂ ಕೆಲವು ಆಹಾರದ ನಿಯಮಗಳು ಬದಲಾಗಿವೆ. ಒಡಿಗ ಸಮುದಾಯದ ಕೆಲವು ಆಹಾರವ ಪದ್ಧತಿಯನ್ನು ಕೆಲವು ಅಂಶಗಳಲ್ಲಿ ಹೀಗೆ ವಿವರಿಸಬಹುದು.

**೩ : ೭ : ೧ ದಿನಂಪ್ರತಿ ಅಡುಗೆ :** ಈ ಸಮುದಾಯದ ದಿನನಿತ್ಯದ ಅಡುಗೆ ಸರಳವಾಗಿರುತ್ತದೆ. ರಾಗಿಯ ಅಂಬಲಿಯನ್ನು ಮಾಡಿಕೊಂಡು ಅದಕ್ಕೆ ಮಜ್ಜಿಗೆಯನ್ನು ಬೆರೆಸಿ ಕುಡಿಯುತ್ತಿದ್ದರು. ಅಲ್ಲದೇ ಕಾಡಿನಲ್ಲಿ ದೊರೆಯುವ ಇಂಡಸಿಸೊಪ್ಪು, ತೊಗಟೆಸೊಪ್ಪು, ಕೀರೆಸೊಪ್ಪುಗಳನ್ನು ಬೇಯಿಸಿ ತಿನ್ನುತ್ತಾರೆ. ಜೊತೆಗೆ ಅನ್ನ, ಉದಕ, ರಾಗಿ, ಜೋಳದ ಮುದ್ದೆಯನ್ನು ತಿನ್ನುವರು.

ಗ್ರಂಥಾಲಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಒಡಿಗ ಬುಡಕಟ್ಟು ಸಮುದಾಯವು ಬೆಳಗಿನ ಆಹಾರವಾಗಿ ತಂಗಳು ಅನ್ನ ಇಲ್ಲವೇ ವಡಚಿಟ್ಟು, ರೊಟ್ಟಿಯನ್ನು ಮಾಡುತ್ತಾರೆ.

ಮಧ್ಯಾಹ್ನದ ಊಟವಾಗಿ ಇವರು ಬೆಳಗಿನ ಅಡುಗೆಯನ್ನೇ ಉಪಯೋಗಿಸುವರು. ಇಲ್ಲವೇ ರಾಗಿಮುದ್ದೆ, ಅನ್ನ ಸಾರು ಜೊತೆಗೆ ಕಾಡಿನಲ್ಲಿ ದೊರೆಯುವ ಬಿದಿರಿನಕರಳೆ, ಹುಣುಸೇಚಿಗುರು, ಬಾಳೆದಿಂಡು, ತರಕಾರಿ ಉಪಯೋಗಿಸಿ ಉದಕವನ್ನು ಮಾಡಿ ತಿನ್ನುತ್ತಾರೆ. ಕೃಷಿ ಕಾರ್ಯದಲ್ಲಿದ್ದಾಗ, ವಡಚಿಟ್ಟು, ರೊಟ್ಟಿ, ಖಾರ ಉಪಯೋಗಿಸುತ್ತಾರೆ.

ರಾತ್ರಿ ಊಟವಾಗಿ ಯಾವುದೇ ವಿಶೇಷಯಿರುವುದಿಲ್ಲ. ರಾಗಿಮುದ್ದೆ, ಅನ್ನ, ಉದಕ ಬಿಸಿಯಾಗಿ ಮಾಡಿಕೊಂಡು ಹೆಸರು, ಅಲಸಂದೆ, ಹುರುಳಿ, ತೊಗರಿಕಾಳುಗಳನ್ನು ಆಗಾಗ ಬಳಸುವರು.

**೩ : ೭ : ೨ ನೆಂಟರಿಷ್ಟರು ಬಂದಾಗ :** ತಮ್ಮ ಹತ್ತಿರದ ಸಂಬಂಧಿಗಳು ಮನೆಗೆ ಬಂದಾಗ ಅಂದು ಹಬ್ಬದ ವಾತಾವರಣವನ್ನೇ ಸೃಷ್ಟಿಸುತ್ತಾರೆ. ಬಗೆ ಬಗೆಯ ಊಟೋಪಚಾರಗಳು ಅಣಿಯಾಗುತ್ತವೆ. ಹತ್ತಿರದ ಬಂಧುಗಳು ಬಂದಾಗ ಒಲೆಯ ಮೇಲೆ ಸೊಪ್ಪಿನ ಉದಕವು ಅಣಿಯಾಗುತ್ತಿದ್ದರೆ ಸಂಬಂಧಿಕರು ಬಂದ ತಕ್ಷಣ ಅಡುಗೆಯ ವಿಧಾನವೇ ಬದಲಾಗಿ ಮಾಂಸಾಹಾರವು ಸಿದ್ಧವಾಗುತ್ತದೆ. ಅಪರೂಪಕ್ಕೆ ಬರುವ ಬಂಧುಗಳಾದರೆ ಮನೆಯಲ್ಲಿ ಸಾಕಿರುವ ಕೋಳಿಯನ್ನು ಕೊಯ್ದು ಮಾಂಸದ ಅಡುಗೆ ಸಿದ್ಧಗೊಳಿಸುತ್ತಾರೆ. ದೂರದ ಸಂಬಂಧಿಗಳಾದರೆ ದಿನನಿತ್ಯದ ಅಡುಗೆಯೇ ಅಂದಿನ ಊಟೋಪಚಾರಗಳಾಗಿ ನಡೆಯುತ್ತದೆ.

**೩ : ೭ : ೩ ವಿಶೇಷ ಸಂದರ್ಭದ ಅಡುಗೆ :** ಹಬ್ಬ ಹರಿದಿನಗಳಲ್ಲಿ ಹಾಗೂ ಜಾತ್ರೆಗಳಲ್ಲಿ ವಿಶೇಷ ರೀತಿಯ ಅಡುಗೆ ಸಿದ್ಧವಾಗುತ್ತದೆ. ಗೃಹಪ್ರವೇಶ, ನಾಮಕರಣ, ಮದುವೆ, ಋತುಮತಿಶಾಸ್ತ್ರದ ದಿನದಂದು, ಅಂತಿಮ ಸಂಸ್ಕಾರದ ದಿನಗಳಲ್ಲಿ ಹಾಗೂ ತಿಥಿ ದಿನಗಳಲ್ಲಿ ವಿಶಿಷ್ಟ ರೀತಿಯ ಊಟೋಪಚಾರಗಳು ನಡೆಯುತ್ತವೆ.

**೩ : ೭ : ೪ ದೇವರ ದಿನಗಳು (ವಾರದ ದಿನ) :** ಈ ಬುಡಕಟ್ಟು ಸಮುದಾಯದಲ್ಲಿ ದೇವರ ಪೂಜೆಯ ವಾರದ ದಿನಗಳಂದು ವಿಶೇಷವಾದ ಅಡುಗೆಯನ್ನು ಅಣಿಗೊಳಿಸುತ್ತಾರೆ. ಶ್ರಾವಣ ಮಾಸದಲ್ಲಿ ಶನಿವಾರದಂದು ಶ್ರೀ ವೆಂಕಟೇಶ್ವರನ ಪೂಜೆಗೆ ಪಾಯಸವನ್ನು ಮಾಡಿ ದೇವರಿಗೆ ಎಡೆ ಮಾಡುವರು. ಜೊತೆಗೆ ಅನ್ನ, ಸೊಪ್ಪಿನ ಉದಕ ಆ ದಿನದ ಆಹಾರವಾಗಿರುತ್ತದೆ. ಮುಳ್ಳಿನ ಮನೆಯವರು ಕಾರ್ತಿಕ ಮಾಸದ ಸೋಮವಾರದ ದಿನಗಳಂದು ಪಾಯಸ ಮಾಡಿ ದೇವರಿಗೆ ಎಡೆ ಇಡುತ್ತಾರೆ. ಅನ್ನ, ಉದಕದೊಂದಿಗೆ ಅಂದಿನ ಊಟೋಪಚಾರ ನಡೆಯುತ್ತದೆ.

**೩ : ೭ : ೫ ಹಬ್ಬ-ಹರಿದಿನಗಳು :** ಇವರು ಓಣಂ, ಬೀಸು, ಯುಗಾದಿ, ಶಿವರಾತ್ರಿ, ದೀಪಾವಳಿ ಇವುಗಳ ಮೊದಲ ದಿನಗಳಂದು ಸಿಹಿ ಅಡುಗೆಯನ್ನು ಮಾಡುತ್ತಾರೆ. ಹಿಂದಿನಿಂದಲೂ ವಿಶೇಷವಾಗಿ ಸಿಹಿ ಅಡುಗೆಯೆಂದರೆ ಪಾಯಸವನ್ನೇ ಮಾಡುವರು. ಹಿಂದಿನಿಂದಲೂ ಇವರು ಓಣಂ, ಬೀಸು, ದೀಪಾವಳಿ ಹಬ್ಬಗಳನ್ನು ಮಾತ್ರ ಆಚರಿಸುತ್ತಿದ್ದು ಇಂದು ಶಿವರಾತ್ರಿ, ಗಣೇಶ, ಚಂದ್ರಮಾನ ಯುಗಾದಿ ಹಬ್ಬಗಳನ್ನು ಆಚರಿಸುತ್ತಿದ್ದಾರೆ.

ದೀಪಾವಳಿಯ ಸಂದರ್ಭದಲ್ಲಿ ಒತ್ತಿಟ್ಟು (ಶಾವಿಗೆ), ಅಕ್ಕಿಮುದ್ದೆ, ಕಾಯಿರಸದೊಂದಿಗೆ ತುಪ್ಪ ಹಾಗೂ ಅನ್ನ, ತರಕಾರಿ, ಉದಕ, ಉಪ್ಪಿನಕಾಯಿ ಈ ದಿನದ ವಿಶೇಷ ಊಟೋಪಚಾರವಾಗಿರುತ್ತದೆ.

೩ : ೭ : ೫ : ೧ **ಕಡೇಬೀಸು :** ಬೀಸು ಹಬ್ಬದ ಏಳು ದಿನಗಳ ನಂತರ ಕಡೇಬೀಸು ಹಬ್ಬವನ್ನು ಆಚರಿಸುವರು. ಕಡೇಬೀಸು ಮತ್ತು ದೀಪಾವಳಿಯ ಕಡೇ ದಿನ ಮಾಂಸಾಹಾರದ ವಿಶೇಷವಿರುತ್ತದೆ. ದೀಪಾವಳಿಯ ಸಂದರ್ಭದಲ್ಲಿ ಬೇಟೆಯಾಡಿ ತಂದಂತಹ ಮಾಂಸ ಅಥವಾ ತಮ್ಮ ಮನೆಯಲ್ಲಿ ಸಾಕಿರುವ ಕೋಳಿಗಳನ್ನು ಕೊಯ್ದು ಮಾಂಸಾಹಾರವನ್ನು ಸಿದ್ಧಗೊಳಿಸುತ್ತಾರೆ.

೩ : ೭ : ೬ **ನಾಮಕರಣ :** ನಾಮಕರಣಶಾಸ್ತ್ರದ ದಿನದಂದು ಸರಳವಾದ ಊಟೋಪಚಾರಗಳು ನಡೆಯುತ್ತವೆ. ಅಂದಿನ ದಿನ ಆಹ್ವಾನಿತ ಬಂಧು-ಬಳಗದವರಿಗೆ ಪಾಯಸ, ಅನ್ನ, ಉದಕ, ಉಪ್ಪಿನಕಾಯಿ, ಪಲ್ಯಗಳು ಮಾಡಿರುತ್ತಾರೆ. ಹಿಂದಿನ ದಿನಗಳಲ್ಲಿಯಾಗಿದ್ದರೆ ಮಾಂಸಾಹಾರವನ್ನು ಮಾಡುವ ಪದ್ಧತಿ ಇತ್ತು. ಇಂದು ಸಿಹಿ ಅಡುಗೆಯನ್ನೇ ಮಾಡುತ್ತಾರೆ.

೩ : ೭ : ೭ **ಋತುಮತಿಶಾಸ್ತ್ರ :** ಈ ಬುಡಕಟ್ಟು ಸಮುದಾಯದಲ್ಲಿ ಹೆಣ್ಣು ಋತುವಾದಾಗ ಅದನ್ನು ಒಂದು ವಿಶೇಷ ಹಬ್ಬವನ್ನಾಗಿ ಆಚರಿಸುವರು. ಸೂತಕವನ್ನು ಹದಿನಾರನೇ ದಿನಕ್ಕೆ ಕಳೆದುಕೊಂಡ ಮೇಲೆ ಆ ದಿನ ವಿಶೇಷ ಅಡುಗೆಯನ್ನು ಮಾಡಿ, ಹತ್ತಿರದ ಬಂಧು-ಬಳಗದವರಿಗೆ ಆಹ್ವಾನವಿತ್ತು, ಕೇಸರಿಬಾತ್ ಜೊತೆಗೆ ಅನ್ನ, ತರಕಾರಿ ಉದಕ, ಉಪ್ಪಿನಕಾಯಿ, ಹಪ್ಪಳ, ಪಲ್ಯ ಆ ದಿನದ ಆಹಾರವಾಗಿರುತ್ತದೆ.

೩ : ೭ : ೮ **ಮದುವೆ :** ಮದುವೆ ದಿನದಲ್ಲಿ ಎರಡು ದಿನಗಳಂದು ವಿಶೇಷವಾದ ಆಹಾರ ಭಕ್ಷ್ಯಗಳನ್ನು ತಯಾರಿಸುತ್ತಾರೆ. ಮೊದಲನೆಯ ದಿನ ಶಾಸ್ತ್ರದದಿನದಂದು ಅನ್ನ, ಎಸರು, ಪಲ್ಯ, ಕೆಲವರು ಚಿತ್ರಾನ್ನ, ಹಪ್ಪಳ, ಉಪ್ಪಿನಕಾಯಿ, ಪಲ್ಯಗಳನ್ನು ಮಾಡಿ ಬಂಧು-ಬಳಗದವರಿಗೆ ನೀಡುವ ಮೊದಲನೆಯ ದಿನದ ಅತಿಥ್ಯವಾಗಿರುತ್ತದೆ.

ಧಾರೆ ದಿನ ಬೆಳಿಗ್ಗೆ ಉಪ್ಪಿಟ್ಟು ಅಥವಾ ಚಿತ್ರಾನ್ನವನ್ನು ತಿಂಡಿಯಾಗಿ ನೀಡುತ್ತಾರೆ. ಮಧ್ಯಾಹ್ನದ ಊಟಕ್ಕೆ ಪಾಯಸ, ಅನ್ನ, ತರಕಾರಿಗಳ ಉದಕ, ಹಪ್ಪಳ, ಉಪ್ಪಿನಕಾಯಿ, ಪಲ್ಯಗಳು ಮಾಡುವರು. ಇಂದು ಕೆಲವರು ಚಿತ್ರಾನ್ನ, ಫಲಾವ್, ಪಾಯಸ, ಹಪ್ಪಳ, ಉಪ್ಪಿನಕಾಯಿ, ಪಲ್ಯಗಳೊಂದಿಗೆ ಊಟೋಪಚಾರ ನಡೆಯುತ್ತದೆ. ಊಟದ ನಂತರ ಬಾಳೆಹಣ್ಣು ನೀಡುತ್ತಾರೆ. ಮದುವೆಯ ದಿನದ ಊಟೋಪಚಾರ ಸಮುದಾಯದ ಆ ಕುಟುಂಬದ ಆರ್ಥಿಕ ಪರಿಸ್ಥಿತಿಗೆ ಅನುಗುಣವಾಗಿ ನಡೆಯುತ್ತದೆ.

೩ : ೭ : ೮ : ೧ **ಅಳಿಗುಳಿ :** ಮದುವೆ ಕಾರ್ಯಗಳಲ್ಲಿ ವರನ ಮನೆಗೆ ಕರದುಕೊಂಡು ಹೋಗಿ ಅಲ್ಲಿಯು ತಮ್ಮ ಬಂಧು-ಬಳಗದವರಿಗೆ ಊಟೋಪಚಾರವನ್ನು ನೀಡುವರು. ಇದನ್ನೇ ಅಳಿಗುಳಿ ಎನ್ನುತ್ತಾರೆ. ಬೀಗರ ಊಟಕ್ಕೆ ಅಲ್ಲಿಯು ಸಿಹಿಯೂಟವೇ ವಿಶೇಷವಾಗಿರುತ್ತದೆ. ಕೆಲವರು ಆಡು, ಕುರಿಗಳನ್ನು ಕೊಯ್ದು ಮಾಂಸಾಹಾರವನ್ನು ಅಣಿಗೊಳಿಸುತ್ತಾರೆ.

೩ : ೭ : ೯ **ಸಾವು-ತಿಥಿ :** ಸಮುದಾಯದಲ್ಲಿ ಸಾವು ಸಂಭವಿಸಿದಾಗ ಸಂಸ್ಕಾರ ಮಾಡಿದ ದಿನದಂದು ಮಾಡುವ

ಕ್ರಿಯೆಗಳಲ್ಲಿ ಸತ್ತ ದಿನವೇ ಬಂಧುಗಳಿಗೆ ಊಟೋಪಚಾರವನ್ನು ನೀಡುತ್ತಾರೆ ಮತ್ತು ಮೂರನೇ ದಿನಕ್ಕೆ ಹಾಗೂ ಹದಿನಾರನೇ ದಿನಕ್ಕೆ ಹೀಗೆ ಮೂರು ಸಂದರ್ಭಗಳಲ್ಲಿ ಊಟೋಪಚಾರ ನಡೆಯುತ್ತದೆ. ಆದರೆ ಮಕ್ಕಳ ಶವಸಂಸ್ಕಾರದ ನಂತರ ಅದೇ ದಿನ ಕೋಳಿ ಹಾಗೂ ಮೀನಿನ ಉದಕವನ್ನು ಮಾಡಿ ಬಂಧುಗಳಿಗೆ ಊಟೋಪಚಾರವನ್ನು ನೀಡುವರು. ಹಿರಿಯರಾದರೆ ಶವಸಂಸ್ಕಾರ ಮುಗಿಸಿ ಮನೆಗೆ ಬಂದು ದೀಪವನ್ನು ನೋಡುವುದುಂಟು. ನಂತರ ಬಂದವರಿಗೆಲ್ಲಾ ಹುಳಿಅನ್ನ ನೀಡುವ ಪದ್ಧತಿ ಇವರಲ್ಲಿ ರೂಢಿಯಲ್ಲಿದೆ.

**೩ : ೭ : ೯ : ೧ ಮೂರನೆ ದಿನದ ಆಚರಣೆ :** ಶವ ಸಂಸ್ಕಾರ ಮಾಡಿದ ಮೂರನೇ ದಿನದಂದು ಕೂಳು ಎಂಬ ಆಚರಣೆಯನ್ನು ನಡೆಸುತ್ತಾರೆ. ಅಂದು ಅನ್ನ, ಪಾಯಸ, ಹಪ್ಪಳ, ಉಪ್ಪಿನಕಾಯಿ, ಎಸರು ಮಾಡಿ ಮೃತನ ಸಮಾಧಿ ಮೇಲಿರಿಸಿ, ಪೂಜೆ ಸಲ್ಲಿಸಿ ಬಂದ ನಂತರ ಎಲ್ಲರಿಗೂ ಊಟೋಪಚಾರವನ್ನು ನೀಡಲಾಗುತ್ತದೆ.

**೩ : ೭ : ೯ : ೨ ಹದಿನಾರನೇ ದಿನದ ಆಚರಣೆ :** ಹದಿನಾರನೆ ದಿನದಂದು ದೊಡ್ಡ ತಿಥಿ ಕಾರ್ಯವನ್ನು ನೆರವೇರಿಸಿ ಸೂತಕ ಕಳೆಯುವ ಪದ್ಧತಿ ಇವರಲ್ಲಿದೆ. ಅಂದಿನ ಊಟೋಪಚಾರವು ಸಸ್ಯಾಹಾರ ಪ್ರಧಾನವಾಗಿರುತ್ತದೆ. ಹಿಂದೆ ಮಾಂಸಾಹಾರ ಅಣಿಗೊಳಿಸುತ್ತಿದ್ದುದಾಗಿ ತಿಳಿದು ಬಂದರು ಈಗ ರೂಢಿಯಲ್ಲಿರುವುದಿಲ್ಲ.

**೩ : ೮ ಉಡುಗೆ - ತೊಡುಗೆ**

ಮಾನವನಿಗೆ ಆಹಾರ ಎಷ್ಟು ಮುಖ್ಯವೋ ಅಷ್ಟೇ ಪ್ರಮುಖವಾದುದು ಉಡುಗೆ. ಆರಂಭದಲ್ಲಿ ಕಾಡು ಮತ್ತು ಗವಿಗಳನ್ನು ಆಶ್ರಯಿಸಿಕೊಂಡಿದ್ದ ಮಾನವನು ತನ್ನ ದೇಹಕ್ಕೆ ಉಡುಗೆಯನ್ನು ಕಂಡಿರಲಿಲ್ಲ. ನಿಸರ್ಗದತ್ತವಾಗಿ ಕಾಡಿನಲ್ಲಿ ದೊರೆಯುತ್ತಿದ್ದ ಮರದ ತೊಗಟೆ, ತಪ್ಪಲು ಮುಂತಾದವುಗಳಿಂದ ತನ್ನ ದೇಹವನ್ನು ರಕ್ಷಿಸಿ, ಮುಚ್ಚಿಕೊಳ್ಳಲು ಪ್ರಾರಂಭಿಸಿದ. ಅಲ್ಲದೇ ಕಾಡಿನಲ್ಲಿ ದೊರೆಯುತ್ತಿದ್ದ ಪ್ರಾಣಿಗಳ ಚರ್ಮ, ಪಕ್ಷಿಗಳ ರೆಕ್ಕೆಪುಕ್ಕಗಳೂ ಆರಂಭದಲ್ಲಿ ಉಡುಗೆಯ ಮಾಧ್ಯಮಗಳಾಗಿದ್ದವು. ಆದಿಮಾನವನ ಸ್ಥಿತಿಯು ಅರಿವಿನಿಂದ ಇಲ್ಲವೇ ಅರಿವು ಇಲ್ಲದೆಯೂ ಒಂದೊಮ್ಮೆ ಪ್ರಾಣಿಗಳ, ಗಿಡಮರಗಳಿಂದ ಬರುವ ಚರ್ಮ ಮತ್ತು ತೊಗಟೆಗಳನ್ನು ತನ್ನ ದೇಹಕ್ಕೆ ಮುಚ್ಚಿಕೊಂಡ. ಇದರಿಂದ ದೇಹಕ್ಕೆ ಉಂಟಾದ ರಕ್ಷಣೆಯನ್ನರಿತ ಸಂದರ್ಭವೇ ಉಡುಗೆಯ ಆವಿಷ್ಕಾರದ ಆರಂಭದ ಹಂತವೆನ್ನಬಹುದು. ನಂತರ ಬುದ್ಧಿವಿಕಾಸವಾದಂತೆ ತನ್ನ ಆಲೋಚನಾ ಕ್ರಮದಲ್ಲಿ ಹಾಗೂ ತಾನು ಬದುಕುವ ಜೀವನ ವಿಧಾನದಲ್ಲಿ ಹಲವಾರು ಬದಲಾವಣೆಗಳನ್ನು ಕಂಡುಕೊಂಡ. ಇಂತಹ ಬದಲಾವಣೆಯೇ ಬಟ್ಟೆಯ ಆವಿಷ್ಕಾರಕ್ಕೆ ಕಾರಣವಾಯಿತು.

''ಸಾಮಾಜಿಕ, ರಾಜಕೀಯ, ಆರ್ಥಿಕ, ಧಾರ್ಮಿಕ, ಮೌಲ್ಯಗಳು ಬದಲಾವಣೆಯಾದಂತೆಲ್ಲ ಜನರು ಸಾಮಾಜಿಕ ಪರಿವರ್ತನೆಗೆ ಒಳಪಟ್ಟಂತೆಲ್ಲಾ ಪ್ರತಿಯೊಂದು ಸಮೂಹ ತನ್ನ ನೀತಿ ನಿಯಮಗಳಲ್ಲಿ ಬದಲಾಗುತ್ತದೆ.''[೬] ಉಡುಗೆ ತೊಡುಗೆಗಳು ಪ್ರತಿಯೊಂದು ಬುಡಕಟ್ಟು ಸಮುದಾಯಗಳಲ್ಲಿಯೂ ಅವರು ವಾಸಿಸುವ ಪರಿಸರಕ್ಕನುಗುಣವಾಗಿ ಬದಲಾಗುತ್ತದೆ. ಮುಖ್ಯವಾಗಿ ಇಂದು ಎರಡು ರೀತಿಯ ಪಂಗಡಗಳನ್ನು ಉಡುಗೆಯಿಂದ ಗುರುತಿಸಬಹುದು. ೧ ಬಟ್ಟೆಯನ್ನು ಅರಸಿ ನಾಗರಿಕತೆಗೆ ಹೊಂದಿಕೊಂಡಿರುವ ಬೆಳವಣಿಗೆಯ ಸಮಾಜ. ೨ ಮೂಲ ಅಥವಾ ಪ್ರಾಚೀನ ಸಂಸ್ಕೃತಿಯನ್ನು ಕೆಲವು ಮಟ್ಟಿಗೆ ಉಳಿಸಿಕೊಂಡು ಬಂದಿರುವ ಗುಂಪು. ಬಹುಶಃ ಈ ಎರಡೂ ಬಗೆಯ ಉಡುಗೆಯನ್ನು

ಅವಲಂಬಿಸಿದ ಬುಡಕಟ್ಟು ಸಮುದಾಯವು ಇಂದು ಇರುವುದನ್ನು ಕಾಣಬಹುದು. ಅರಣ್ಯ ಅಥವಾ ಗುಡ್ಡಗಾಡು ಪ್ರದೇಶಗಳಲ್ಲಿ ಜೀವಿಸುವ ಅನೇಕ ಬುಡಕಟ್ಟು ಸಮುದಾಯಗಳು ಇಂದಿಗೂ ಬಟ್ಟೆಯನ್ನು ಕಾಣದೆ, ಮರದ ತೊಗಟೆ ಗಿಡಮರಗಳ ತಪ್ಪಲು ಸುತ್ತಿಕೊಂಡು ಬದುಕುತ್ತಿರುವುದನ್ನು ನೋಡಬಹುದು.

ಒಡಿಗ ಬುಡಕಟ್ಟು ಸಮುದಾಯವೂ ತೀರ ಪ್ರಾಚೀನ ಉಡುಗೆ ಪದ್ಧತಿಯನ್ನು ಅನುಸರಿಸುತ್ತಿಲ್ಲವಾದರೂ ಕೆಲವು ಹಂತಗಳಲ್ಲಿ ತನ್ನ ಮೂಲ ಸಂಪ್ರದಾಯವನ್ನು ಉಳಿಸಿಕೊಂಡು ಬಂದಿದೆ. ಮೂಲತಃ ಚಿತ್ರದುರ್ಗದ ಪರಿಸರದಿಂದ ಓಡಿ ಬಂದ ಈ ಸಮುದಾಯವು ಕೇರಳ-ಮೈಸೂರು ಜಿಲ್ಲೆಯ ಗಡಿಭಾಗದ ಅರಣ್ಯ ಪ್ರದೇಶದಲ್ಲಿ ವಾಸವಾಗಿರುವುದರಿಂದ, ಈ ಮುಂಚೆ ಕಾಡಿನಲ್ಲಿ ವಾಸಿಸುತ್ತಿರುವ ಎರವರು, ಪಣೆಯರು, ಜೇನು ಮತ್ತು ಕಾಡು ಕುರುಬರು ತೊಡುತ್ತಿದ್ದ ಉಡುಗೆಯ ಪ್ರಭಾವವೂ ಇವರ ಮೇಲೆ ಆಗಿರುವುದನ್ನು ಗುರುತಿಸಬಹುದು. ಚಿತ್ರದುರ್ಗ ಪರಿಸರದಿಂದ ಓಡಿಬಂದ ಒಡಿಗ ಸಮುದಾಯದವರು ಮೂಲತಃ ನಾಗರಿಕ ಸಮಾಜದಿಂದ ಅಷ್ಟಾಗಿ ದೂರವಿಲ್ಲದಿರುವುದರಿಂದ ಇವರ ಉಡುಗೆ ತೊಡುಗೆಯಲ್ಲಿ ವಿಶೇಷವಾದಂತಹ ಅಂಶಗಳು ಕಂಡು ಬರುವುದಿಲ್ಲ. ಆದರೂ ಇಂದು ವಾಸಿಸುವ ಸ್ಥಳೀಯ ಬುಡಕಟ್ಟು ಸಮುದಾಯಗಳ ಪ್ರಭಾವವನ್ನು ಪಡೆದುಕೊಂಡಿದೆ. ತಮ್ಮ ಮೂಲ ಉಡುಗೆಯ ಪ್ರಭಾವವನ್ನು ಒಡಿಗರ ಸ್ತ್ರೀಯರಲ್ಲಿ ಗುರುತಿಸಬಹುದು. ಕೇರಳದ ಸ್ತ್ರೀಯರು ಧರಿಸುವ ಬಟ್ಟೆಯ ಮಾದರಿಯಲ್ಲಿಯೂ, ಒಡಿಗರ ಸಮುದಾಯದಲ್ಲಿ ಗುರುತಿಸಬಹುದು. ಒಡಿಗರು ತಮ್ಮ ದೈನಂದಿನ ಜೀವನದಲ್ಲಿ ಧರಿಸುವ ಉಡುಗೆಯ ಕೆಲವು ಅಂಶಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

**೩ : ೮ : ೧ ದೈನಂದಿನ ಉಡುಗೆ, ತೊಡುಗೆ**

ಒಡಿಗ ಸಮುದಾಯದ ದೈನಂದಿನ ಉಡುಗೆಯು ಇಂದಿನ ನಾಗರಿಕರು ಉಡುವ ರೀತಿಯಲ್ಲಿಯೇ ಇದೆ ಜೊತೆಗೆ ತಮ್ಮೊಂದಿಗೆ ವಾಸಿಸುವ ಹಲವಾರು ಸಮುದಾಯಗಳ ಪ್ರಭಾವ ಇವರ ಮೇಲಿದೆ. ಕಾಡು ಮತ್ತು ಜೇನು ಕುರುಬರು, ಎರವರು, ಪಣೆಯರು ಮುಂತಾದ ಸಮುದಾಯಗಳ ಪ್ರಭಾವವೂ ಇವರ ಉಡುಪುಗಳಲ್ಲಿ ಕಾಣಬಹುದಾಗಿದೆ. ವ್ಯವಸಾಯ, ಮನೆಗೆಲಸ ಮುಂತಾದ ಕಾರ್ಯಗಳಲ್ಲಿಯೂ ಇವರ ಉಡುಗೆಯು ಸಾಮಾನ್ಯವಾಗಿರುತ್ತದೆ. ಸ್ತ್ರೀಯರು ಸೀರೆ, ಕುಪ್ಪಸವನ್ನು ಧರಿಸಿ, ಕಿವಿಗೆ ಓಲೆ, ಕೈ ಬೆರಳಿಗೆ ತಾಮ್ರದ ಉಂಗುರಗಳನ್ನು ತೊಡುತ್ತಾರೆ. ಮಕ್ಕಳು ಬಿಳಿ ಕವಚ (ಅಂಗಿ) ಚಡ್ಡಿಯನ್ನು ಧರಿಸುತ್ತಾರೆ. ಕೇರಳ ಗಡಿಭಾಗದ ಸ್ತ್ರೀಯರು ಧರಿಸುವ ಉಡುಪಿನ ಮಾದರಿಯನ್ನು ಒಡಿಗರ ಹೆಂಗಸರು ಅನುಕರಿಸಿರುವುದು ಕಂಡು ಬರುತ್ತದೆ. ಈ ಸಮುದಾಯದ ಹಿರಿಯ ಸ್ತ್ರೀಯರು ಮೈಗೆ ಸೀರೆಯನ್ನು ಸುತ್ತಿಕೊಂಡು ಎದೆಯ ಭಾಗದಲ್ಲಿ ಗಂಟನ್ನು ಹಾಕುತ್ತಾರೆ. ಕೈಗಳಿಗೆ ಕಡಗ, ಬಳೆ, ತೋಳಿಗೆ ತೋಳಬಂಧಿ, ಅಗ್ಗ ಕಡಗ, ತಾಮ್ರದ ಉಂಗುರವನ್ನು ಧರಿಸುವರು. ಕೊರಳಿಗೆ ಹವಳದ ಸರಗಳು, ಕರಿಮಣಿ ಸರ, ಮದುವೆಯಾಗಿದ್ದರೆ ತಾಳಿಸರ, ಕಿವಿಗೆ ಬಂಗಾರದ ಓಲೆ, ಮೂಗಿಗೆ ಬಂಗಾರದ ಮೂಗುತಿಯನ್ನು ಧರಿಸುತ್ತಾರೆ. ಸ್ತ್ರೀಯರು ವಿಧವೆಯರಾಗಿದ್ದರೆ ಕಿವಿಗೆ ಬೆಂಡಿನ ಓಲೆಯನ್ನು ಧರಿಸಿರುತ್ತಾರೆ.

೩ : ೮ : ೨ ವಿಶೇಷ ಸಂದರ್ಭದ ಉಡುಗೆ-ತೊಡುಗೆ

ಒಡಿಗ ಸಮುದಾಯವು, ಹಬ್ಬ ಹರಿದಿನ, ಮದುವೆ, ಜಾತ್ರೆ ಮತ್ತು ಕೆಲವು ವಿಶೇಷ ಸಂದರ್ಭಗಳಲ್ಲಿ ವಿಶೇಷವಾಗಿ ಉಡುಗೆ ತೊಡುಗೆಯನ್ನು ಧರಿಸುವರು. ವಿಶೇಷ ದಿನಗಳಲ್ಲಿ ಇವರು ಹೊಸ ಬಟ್ಟೆಯನ್ನು ಧರಿಸುತ್ತಾರೆ. ಸಮುದಾಯದ ಪುರುಷರು, ಸ್ತ್ರೀಯರು, ಮಕ್ಕಳಾದಿಯಾಗಿ ಹೊಸ ಇಲ್ಲವೇ ಸ್ವಚ್ಛಗೊಳಿಸಿದ ಬಟ್ಟೆಯನ್ನು ಧರಿಸಿ, ಪುರುಷರು ಪೇಟವನ್ನು ಸುತ್ತಿಕೊಂಡು, ಹೆಂಗಸರು ಬಂಗಾರದ ಓಲೆಗಳನ್ನು ಹಾಕಿಕೊಂಡು ಸಡಗರದಿಂದ ಓಡಾಡುತ್ತಾರೆ.

ಒಡಿಗರು ಮದುವೆಯ ಸಂದರ್ಭಗಳಲ್ಲಿ ಮದುಮಗ, ಮದುಮಗಳಿಗೆ ವಿಶೇಷವಾಗಿ ಉಡುಪು ಮತ್ತು ಒಡವೆಗಳನ್ನು ಹಾಕುತ್ತಾರೆ. ಮದುಮಗನಿಗೆ ಒಂಭತ್ತು ಮೊಳದ ಬಿಳಿಯ ಪಂಜೆಯನ್ನು ಕಚ್ಚೆ ಹಾಕಿಸುತ್ತಾರೆ. ಅಲ್ಲದೇ ಬಿಳಿಯ ಕವಚ (ಅಂಗಿ) ತೊಡಿಸುತ್ತಾರೆ. ತಲೆಗೆ ಕೆಂಪು ಪೇಟವನ್ನು ಇಡುವರು. ಪೇಟದ ಸುತ್ತಲೂ ಐದು ಬಗೆಯ ಹೂಗಳನ್ನು ಸುತ್ತಿರುತ್ತಾರೆ. ಹಣೆಗೆ ವಿಭೂತಿಯನ್ನಿಟ್ಟು, ಬಾಸಿಂಗ ಕಟ್ಟಿ ಸಿಂಗರಿಸುತ್ತಾರೆ. ಕೈಗೆ ಕಂಕಣ, ಸೊಂಟಕ್ಕೆ ಪಟ್ಟಿಯನ್ನು ಕಟ್ಟಿ ಆ ಪಟ್ಟಿಗೆ ಬೆಳ್ಳಿಯ ಕತ್ತಿ(ಚೂರಿ)ಯನ್ನು ಇಡುತ್ತಾರೆ.

ಮದುಮಗಳ ಅಲಂಕಾರಕ್ಕೆ ಈ ಸಮುದಾಯ ಮಹತ್ವ ನೀಡುತ್ತದೆ. ವಧುವಿಗೆ ಬಿಳಿಸೀರೆ (ಧಾರೆ ಸೀರೆ)ಯನ್ನುಡಿಸಿ, (ಕೆಲವರು ರೇಶ್ಮೆ ಸೀರೆ ಉಡಿಸುತ್ತಾರೆ), ರವಿಕೆಯನ್ನು ತೊಡಿಸಿ, ಹಣೆಗೆ ವಿಭೂತಿ, ಕೈಗಳಿಗೆ ಬಳೆ, ಕಾಲಿಗೆ ಕಾಲಂದಿಗೆ, ತಲೆಗೆ ವಿವಿಧ ಹೂಗುಚ್ಛ, ಕಿವಿ, ಮೂಗಿಗೆ ಬಂಗಾರದ ಒಡವೆಗಳನ್ನು ತೊಡಿಸುವರು. ಬಾಸಿಂಗಕ್ಕೆ ಐದು ಬಗೆಯ ಹೂ ಸುತ್ತಿ ಅಲಂಕಾರ ಮಾಡುತ್ತಾರೆ. ತಾಳಿಯು ಒಂದು ಗಂಡನ ಮನೆಯಿಂದ ಮತ್ತೊಂದು ತವರು ಮನೆಯಿಂದ ತಂದದ್ದಾಗಿದ್ದು, ಇದು ಬಂಗಾರದ್ದೇ ಆಗಿರುತ್ತದೆ. ಮುಖ್ಯವಾಗಿ ಮದುವೆಯ ಸಂದರ್ಭದಲ್ಲಿ ಒಡಿಗರು ತೊಡುವ, ಉಡುವ, ಆಭರಣ ಹಾಗೂ ಉಡುಪುಗಳು ಚಿತ್ರದುರ್ಗ ಪರಿಸರದ ಬೇಡ ಸಮುದಾಯವನ್ನು ಹೋಲುತ್ತದೆಂಬುದನ್ನು ಗಮನಿಸಬಹುದು.

ಒಡಿಗ ಸಮುದಾಯವು ಆಧುನಿಕ ಪ್ರಭಾವಕ್ಕೆ ಇತ್ತೀಚೆಗೆ ಒಳಗಾಗುತ್ತಿದೆ. ಈ ಕಾರಣದಿಂದಾಗಿ ಆಧುನಿಕವಾಗಿ ಉತ್ಪಾದನೆಯಾಗುವ ಪ್ಯಾಂಟ್, ಶರ್ಟ್ ಅಲ್ಲದೇ ಹೆಂಗಸರ ವಿವಿಧ ಬಗೆಯ ಉಡುಪು, ಆಭರಣಗಳನ್ನು ತೊಡು ತ್ತಿದ್ದಾರೆ. ವಯಸ್ಕರಲ್ಲಿ ಮಾತ್ರ ಪಾರಂಪರಿಕ ಉಡುಗೆ ತೊಡುಗೆಯ ಸಂಪ್ರದಾಯ ಉಳಿದು ಬಂದಿದೆ.

೩ : ೯ ವಸತಿ ವ್ಯವಸ್ಥೆ

ಮಾನವ ಮೂಲತಃ ಅಲೆಮಾರಿ. ಆದಿಶಿಲಾಯುಗದಿಂದ ನಾಗರಿಕ ಜೀವನದವರೆಗೆ ಒಂದಲ್ಲಾ ಒಂದು ರೀತಿ ಬೆಳವಣಿಗೆಯನ್ನು ಹೊಂದುತ್ತಾ ಬಂದಿದ್ದಾನೆ. ಮೊದಲ ಹಂತದಲ್ಲಿ ಇಡೀ ಭೂಮಿಯೇ ಅವನ ವಾಸದ ನೆಲೆಯಾಗಿತ್ತು. ಅಂದರೆ ಅವನು ಕಾಡು, ಮರ, ಪೊದೆ, ಪೊಟರೆ, ಗುಹೆ, ಬಂಡೆಗಳನ್ನು ಆಶ್ರಯಿಸಿ ಬದುಕುತ್ತಿದ್ದನು. ಒಂದು ನಿರ್ದಿಷ್ಟ ವಾಸದ ನೆಲೆಯನ್ನು ಹೊಂದಬೇಕೆಂಬ ವಿಚಾರ ಇವನ ತಲೆಯಲ್ಲಿ ಮೂಡಿರಲಿಲ್ಲ. ಎರಡನೆ ಹಂತದಲ್ಲಿ ಬುದ್ಧಿ

ವಿಕಾಸನವಾಗುತ್ತಾ ತನ್ನ ದೇಹ ರಕ್ಷಣೆಗಾಗಿ ಹಾಗೂ ಪ್ರಕೃತಿ ವಿಕೋಪಗಳಿಂದ, ಕ್ರೂರ ಮೃಗಗಳಿಂದ ರಕ್ಷಣೆ ಪಡೆಯಲು ವಾಸದ ಪರಿಕಲ್ಪನೆಯನ್ನು ಮಾಡಿಕೊಂಡನು. ಈ ಹಂತದಲ್ಲಿಯೇ ನಿರ್ದಿಷ್ಟವಾಗಿ ಬದುಕುವ ಮತ್ತು ಒಂದು ಕಡೆ ನೆಲೆ ನಿಲ್ಲುವ ಪ್ರಯತ್ನ ಮಾಡಿದ ಜೊತೆಗೆ ತನ್ನ ನೆಲೆಗಳಿಗೆ ಹೆಸರನ್ನು ಕೊಡುವ ಪದ್ಧತಿಯನ್ನು ರೂಢಿಸಿಕೊಂಡನು.

''ವಸತಿ ಎಂದರೆ ವ್ಯಕ್ತಿ ತನ್ನ ಮತ್ತು ತನ್ನ ಕುಟುಂಬದವರಿಗಾಗಿ ನಿರ್ಮಿಸಿಕೊಂಡ ರಕ್ಷಣಾ ವ್ಯವಸ್ಥೆ'' ಎಂಬುದು ಪುರುಷೋತ್ತಮ ಬಿಳಿಮಲೆಯವರ ಅಭಿಪ್ರಾಯವಾಗಿದೆ. ಈ ವಸತಿ ವ್ಯವಸ್ಥೆಯ ರಚನೆಯು ಆರಂಭ ಹಂತದಲ್ಲಿ ನೈಸರ್ಗಿಕವಾಗಿ ದೊರೆಯುತ್ತಿದ್ದ ಸೊಪ್ಪು, ಕಟ್ಟಿಗೆ, ಹುಲ್ಲು, ಸೌದೆ ಇತ್ಯಾದಿಗಳಿಂದ ರಚಿಸಲ್ಪಟ್ಟಿತ್ತು. ತದನಂತರದಲ್ಲಿ ಕಲ್ಲು, ಮಣ್ಣು, ಕಬ್ಬಿಣ ಹೀಗೆ ಹಲವಾರು ರೀತಿಯ ಸಲಕರಣೆಗಳು ಅವಿಷ್ಕಾರದ ಬಳಕೆಯನ್ನು ಕಂಡುಕೊಂಡದ್ದು ನಾಗರೀಕತೆಯ ಹಂತ.

ಬುಡಕಟ್ಟು ಸಮುದಾಯಗಳು ತಮ್ಮದೆ ಆದ ವಿಶಿಷ್ಟತೆಯಿಂದ ಕೂಡಿರುವ ಶೈಲಿಯಲ್ಲಿ ದುಂಡಾಕಾರವಾಗಿ ಚೌಕಾಕಾರ, ಆಯತಾಕಾರವಾಗಿ ತಮ್ಮ ವಸತಿಗಳನ್ನು ನಿರ್ಮಿಸಿಕೊಂಡು ಕಾಡಿನ ಮಧ್ಯೆ ತಮ್ಮ ಜೀವನವನ್ನು ನಡೆಸುತ್ತಿದ್ದಾನೆ. ಒಂದು ನಿರ್ದಿಷ್ಟವಾದ ಸ್ಥಳದ ಅಗತ್ಯವಿಲ್ಲದೆ ಕಾಡನ್ನು ಮತ್ತು ಅಲ್ಲಿ ದೊರೆಯುವ ನಿಸರ್ಗ ಸಂಪತ್ತನ್ನು ಬಳಸಿಕೊಳ್ಳುವ ಮೂಲಕ ತಮ್ಮದೆ ಆದ ನೆಲೆಯನ್ನು ಕಂಡುಕೊಂಡಿದ್ದಾನೆ. ಆಧುನಿಕತೆಯ ಒತ್ತಡಕ್ಕೆ ಮಣಿಯದೇ ತಮ್ಮ ಮೂಲ ಶೈಲಿಯನ್ನು ಬಿಡದೆ ವಸತಿಗಳನ್ನು ನಿರ್ಮಿಸಿಕೊಂಡು ಜೀವನ ನಡೆಸುತ್ತಿದ್ದಾರೆ. ಆದಿ ಮಾನವನು ಬದುಕುತ್ತಿದ್ದ ಕಾಡಿನ ಜೀವನವನ್ನು ಇಂದು ಬದುಕುತ್ತಿರುವ ಬುಡಕಟ್ಟು ಸಮುದಾಯಗಳ ಜೀವನ ಕ್ರಮವನ್ನು ಕೆಲವು ಸಾಮ್ಯಾಗಳಿವೆ ಹಲವು ಭಿನ್ನತೆಗಳು ಇವೆ.

ಈ ದೃಷ್ಟಿಯಿಂದ ಪ್ರಸ್ತುತ ಒಡಿಗ ಸಮುದಾಯವು ಈ ರೀತಿಯ ವಸತಿ ವ್ಯವಸ್ಥೆಯನ್ನು ಆರಿಸಿಕೊಂಡಿದ್ದರೂ, ತಮ್ಮದೇ ಆದ ವಸತಿ ವಿವರವನ್ನು ಹೊಂದಿದೆ. ಮುಖ್ಯವಾಗಿ ಈ ಸಮುದಾಯ ಬದುಕುವ ಸ್ಥಳ, ಆರಿಸಿಕೊಳ್ಳುವ ನಿರ್ದಿಷ್ಟವಲಯ ಕಟ್ಟಿಕೊಳ್ಳಬೇಕಾದ ಮನೆಯ ಅಥವಾ ಗುಡಿಸಲುಗಳ ರಚನೆಯ ವಿನ್ಯಾಸ, ಈ ರಚನೆಗೆ ಬಳಸಿಕೊಳ್ಳುವ ಸಾಧನೆ ಸಲಕರಣೆಗಳು ಗೃಹ ಪ್ರವೇಶ ಮತ್ತು ತಮ್ಮ ನೆಲೆಗೆ ಕರೆದುಕೊಳ್ಳುವ ಹೆಸರು, ಹಟ್ಟಿ, ಹಾಡಿ, ಹಳ್ಳಿ, ಗ್ರಾಮ ಈ ಎಲ್ಲಾ ಹೆಸರುಗಳಿಂದ ಭಿನ್ನವಾಗಿವೆ. ತಮ್ಮ ಭೂ ಪ್ರದೇಶಕ್ಕೆ ಕೊಟ್ಟಿರುವ ಹೆಸರು ಮುಂತಾದವು ಅನೇಕ ಹೊಸ ರೀತಿಯ ಚಲನೆಗಳನ್ನು ಅನಾವರಣಗೊಳಿಸುತ್ತವೆ. ಅಂಥವುಗಳನ್ನು ಇಲ್ಲಿ ಗಮನಿಸಬಹುದು.

### ೩ : ೯ : ೧ ಸ್ಥಳದ ಆಯ್ಕೆ

ಒಡಿಗರು ಅರಣ್ಯ ಪ್ರದೇಶದಲ್ಲಿ ವಾಸಿಸುತ್ತಿರುವುದರಿಂದ ಕಾಡುಪ್ರಾಣಿಗಳ ಹಾವಳಿಯಿಂದ ತಪ್ಪಿಸಿಕೊಳ್ಳುವ, ನೀರಿನ ಸೌಕರ್ಯವಿರುವ, ಕೃಷಿಗೆ ಯೋಗ್ಯವಾದಂತಹ ಭೂಮಿಯು ದೊರೆಯುವ ಪ್ರದೇಶವನ್ನು ತಮ್ಮ ನೆಲೆಗಳಿಗಾಗಿ ಆಯ್ಕೆ ಮಾಡುವರು. ಸ್ಥಳದ ಆಯ್ಕೆಯ ನಂತರ ಸಮುದಾಯದ ಹಿರಿಯರೆಲ್ಲ ಸೇರಿ ಸ್ಥಳ ಪರಿಶೀಲಿಸಿ, ಒಂದು ಒಳ್ಳೆಯ ದಿನವನ್ನು ನೋಡಿ ಪೂಜೆಯನ್ನು ಮಾಡುತ್ತಾರೆ. ಹೆಚ್ಚಾಗಿ ಶನಿವಾರ ಅಥವಾ ಸೋಮವಾರದ ದಿನಗಳನ್ನು ಪ್ರಶಸ್ತ

ದಿನಗಳೆಂದು ನಂಬುತ್ತಾರೆ. ಈ ಮುಂಚೆ ಪುರೋಹಿತರನ್ನು ಕೇಳಿ ವಸತಿಯ ಜಾಗವನ್ನು ನೋಡುವರು. ಸರಳ ಪೂಜೆಯ ನಂತರ ಸ್ಥಳದ ಪರೀಕ್ಷೆಯು ನಡೆಯುತ್ತದೆ.

**೩ : ೯ : ೨ ಸ್ಥಳದ ಪರೀಕ್ಷೆ**

ಸಮುದಾಯದ ಹಿರಿಯರು, ಮುತ್ತೈದೆಯರು ಸೇರಿ ಹೂ, ಹಣ್ಣುಗಳೊಂದಿಗೆ ಸರಳ ಪೂಜೆಯನ್ನು ಸ್ಥಳದಲ್ಲಿ ನೆರವೇರಿಸುತ್ತಾರೆ. ಸ್ಥಳದ ನಾಲ್ಕು ಕಡೆ ಹಗ್ಗವನ್ನಿಡಿದು ಆಯ ಮಾಡಿ, ನಾಲ್ಕು ಕಡೆಯಲ್ಲಿ ನಾಲ್ಕು ಕಡ್ಡಿ ಕಂಬಗಳನ್ನು ನೆಡುವರು. ಮಾರನೆಯ ದಿನ ಬೆಳಗಿನ ಸಮಯದಲ್ಲಿ ಮನೆಯವನು ಹೊಳೆಯಲ್ಲಿ ಸೂರ್ಯ ಹುಟ್ಟುವ ಮೊದಲು ಮಿಂದು, ಅದೇ ಹೊಳೆಯಲ್ಲಿ ಹದಿನಾರು ಕಲ್ಲುಗಳನ್ನು ತೆಗೆದುಕೊಂಡು, ತೊಳೆದು ತಂದು ದೇವರ ಮನೆಯಲ್ಲಿಡುತ್ತಾನೆ. ನಂತರ ಅದೇ ದಿನ ಸಾಯಂಕಾಲ ಆ ಕಲ್ಲುಗಳನ್ನು ತೆಗೆದುಕೊಂಡು ಸ್ಥಳದಲ್ಲಿ ನೆಟ್ಟ ನಾಲ್ಕು ಕಡ್ಡಿಗಳ ಮೇಲೆ ಒಂದೊಂದು ಕಡ್ಡಿಯ ಮೇಲೆ ನಾಲ್ಕು ಕಲ್ಲುಗಳನ್ನಿಟ್ಟು ಹೋಗುತ್ತಾನೆ. ಮರುದಿನ ಬಂದು ನೋಡಲು ಆ ಕಲ್ಲುಗಳು ಬೀಳದೆ ಹಾಗೆಯೇ ಇದ್ದರೆ, ಮನೆಯನ್ನು ಕಟ್ಟಲು ಪ್ರಶಸ್ತವಾದಂತಹ ಸ್ಥಳವೆಂದು ಈ ಸಮುದಾಯವು ನಂಬುತ್ತದೆ. ಆಕಸ್ಮಿಕವಾಗಿ ಯಾವುದಾದರೂ ಕಲ್ಲು ಬಿದ್ದು ಹೋಗಿದ್ದರೆ, ಅದು ಮನೆ ನಿರ್ಮಿಸಲು ಉತ್ತಮ ಸ್ಥಳವಲ್ಲವೆಂದೂ ಈ ಸಮುದಾಯ ಬೇರೆ ಸ್ಥಳವನ್ನು ಆಯ್ಕೆ ಮಾಡುತ್ತಾರೆ. ಬೇರೆ ಸ್ಥಳದಲ್ಲಿಯೂ ಈ ಬಗೆಯ ಪರೀಕ್ಷೆಯು ನಡೆಯುತ್ತದೆ.

**೩ : ೯ : ೩ ಪೂಜೆ**

ಸ್ಥಳ ಪರೀಕ್ಷೆಯ ನಂತರ ಪೂಜೆಯು ನಡೆಯುತ್ತದೆ. ಉತ್ತಮವೆಂದು ಕಂಡುಬಂದ ಸ್ಥಳದಲ್ಲಿ ಸೋಮವಾರ ಇಲ್ಲವೇ ಶನಿವಾರದ ಶುಭದಿನಗಳಂದು ಸಮುದಾಯದ ಐದು ಅಥವಾ ಒಂಭತ್ತು ಮಂದಿ ಹಿರಿಯರು ಸೇರಿ ಪೂಜೆ ಪ್ರಾರಂಭಿಸುತ್ತಾರೆ. ಐದು, ಒಂಭತ್ತು ರೀತಿಯ ಧಾನ್ಯಗಳನ್ನು (ಹುರುಳಿ, ಭತ್ತ, ರಾಗಿ, ಅಲಸಂದೆ, ಎಳ್ಳು, ತೊಗರಿ, ಹೆಸರು, ದನಿಯಾ, ಹಣ) ಸೇರಿಸಿ ಅರಿಶಿನದ ಬಟ್ಟೆಯಲ್ಲಿ ಕಟ್ಟಿ ಅದನ್ನು ಮುಹೂರ್ತ ಕಂಬದ ಕೆಳಗಿನ ಕುಣಿಯಲ್ಲಿ ಹಾಕಿ ಮುಚ್ಚಿ ಅದರ ಮೇಲೆ ಮುಹೂರ್ತದ ಕಂಬವನ್ನು ನೆಡುವರು. ಈ ಮುಹೂರ್ತ ಕಂಬಕ್ಕೆ ಸಮುದಾಯದ ಐದು ಇಲ್ಲವೇ ಒಂಭತ್ತು ಮಂದಿ ಸೇರಿ ಅರಿಶಿನದ ದಾರವನ್ನು ಕಟ್ಟಿ ಮುತ್ತೈದೆಯರೊಂದಿಗೆ ಪೂಜೆ ಸಲ್ಲಿಸುತ್ತಾರೆ. ಪೂಜೆಯ ನಂತರ ಎಲ್ಲರಿಗೂ ಸಿಹಿಯನ್ನು ಹಂಚುತ್ತಾರೆ.

**೩ : ೯ : ೪ ಮನೆಯ ಮಾದರಿ**

ಪೂಜೆಯ ನಂತರ ಸಮನಾದ ಏಳು ಕಂಬಗಳನ್ನು ಸುತ್ತಲೂ ನಿಲ್ಲಿಸಿ, ಎರೆಕಂಬ ಕಾಯಕಂಬ, ಹೊಳೆಕಂಬ, ಕೊನುಕಂಬ, ಮುಹೂರ್ತಕಂಬ, ಅಡ್ಡಪಟ್ಟಿಯನ್ನಿಟ್ಟು ನಿಲ್ಲಿಸಿ ಮೇಲೆ ಅಚ್ಚೆ ಹಾಕುತ್ತಾರೆ. ಬಿದಿರನ್ನು ಸೀಳಿ ಮೇಲೆ ಅಚ್ಚೆಗೆ ಬಿಗಿಯುವರು. ಅದರ ಮೇಲೆ ಭತ್ತದ ಹುಲ್ಲು ಹಾಕಿ ಸೀಳಿದ ಬಿದಿರಿನೊಂದಿಗೆ ಹೆಣೆದು ಅಂಜರ ಕಟ್ಟುತ್ತಾರೆ. ಹುಲ್ಲು ಗಾಳಿಗೆ ಹೋಗದಂತೆ ಪಟ್ಟಿಗಳನ್ನು ಹಾಕಿ ನಾರಿನಿಂದ ಬಿಗಿಯುವರು. ಈ ಪಟ್ಟಿಗೆ ''ಭೀಮನಪಟ್ಟಿ'' ಎಂದು ಕರೆಯುತ್ತಾರೆ. ಈ ಭೀಮನ ಪಟ್ಟಿಯು ಮಳೆಯಿಂದ ಬರುವ ಸಿಡಿಲು ಹಾಗೂ ಕೆಲವು ಪೀಡೆಗಳಿಂದ ಬರುವ ಶಕ್ತಿಯನ್ನು

ತಡೆಗಟ್ಟುತ್ತದೆಂದು ನಂಬುತ್ತಾರೆ. ಸುತ್ತಲೂ ಕಟ್ಟಿದ ಅಂಜರದ ಮೇಲೆ ಮಣ್ಣನ್ನು ಕಲಿಸಿ ನೊರೆದು ಗೋಡೆಯನ್ನು ನಿರ್ಮಿಸುತ್ತಾರೆ. ಮನೆಯು ಒಂದು ಅಡುಗೆಮನೆ, ಪಡಸಾಲೆಯನ್ನು ಹೊಂದಿರುತ್ತದೆ. ಇದರಲ್ಲಿ ಒಂದು ಕಿಟಕಿಯನ್ನು ಬಿಡುತ್ತಾರೆ. ಅಲ್ಲದೇ ಬೆಳಕಿಗಾಗಿ ಒಂದು ತೂಬುಗಂಡಿ (ಬೆಳಕು ಕಿಂಡಿ)ಯನ್ನು ಮಾಡಿರುತ್ತಾರೆ. ಇವರ ಮನೆಗಳ ಬಾಗಿಲು ಪೂರ್ವದಿಕ್ಕಿಗೆ ಇರುತ್ತವೆ. ಬಾಗಿಲುಗಳು ಬಿದಿರಿನಿಂದ ಹೆಣೆದು ಕಟ್ಟಿರುತ್ತಾರೆ. ನೆಲವನ್ನು ಸೆಗಣಿಯಿಂದ ಸಾರಿಸಿ, ರಂಗೋಲಿಯನ್ನು ಹಾಕುತ್ತಾರೆ.

ಇತ್ತೀಚೆಗೆ ಕಲ್ಲಿನ ಮನೆಯನ್ನು ಆಧುನಿಕ ವಾಸ್ತು ಪದ್ಧತಿಗೆ ತಕ್ಕಂತೆ ನಿರ್ಮಿಸುತ್ತಿರುವುದು ಕಂಡುಬರುತ್ತದೆ.

**೩ : ೯ : ೫ ಗೃಹಪ್ರವೇಶ**

ಒಡಿಗರ ಸಮುದಾಯದ ವಸತಿಗಳ ನಿರ್ಮಾಣ ಸರಳವಾಗಿರುವುದರಿಂದ ಒಂದೆರೆಡು ದಿವಸದಲ್ಲಿ ನಿರ್ಮಾಣ ಕಾರ್ಯ ಮುಗಿಯುತ್ತದೆ. ನಂತರ ಪ್ರವೇಶಕ್ಕಾಗಿ ಸಮುದಾಯದ ಹಿರಿಯರು ಸೇರಿ ಶುಭದಿನವನ್ನು ನಿರ್ಧರಿಸುತ್ತಾರೆ. ಗೃಹಪ್ರವೇಶ ಮಾಡುವುದನ್ನು **''ವಕ್ಕಲು ಹೋಗುವುದು'' ''ಮನೆ ಸೇರುವುದು''** ಎಂದು ಕರೆಯುವರು. ಗೃಹಪ್ರವೇಶ ದಿನದಂದು ತಮ್ಮ ಬಂಧುವರ್ಗದವರು ನೆರೆಯುತ್ತಾರೆ.

ಮನೆಯನ್ನು ಸಾರಿಸಿ, ಮಾವಿನ ಎಲೆಯಿಂದ ತೋರಣ ಕಟ್ಟಿ, ನೇರಳೆ ಸೊಪ್ಪಿನಿಂದ ಅಲಂಕರಿಸುತ್ತಾರೆ. ಆರಂಭದಲ್ಲಿ **''ಬಾಗಿಲುಪೂಜೆ''** ನಡೆಯುತ್ತದೆ. ಮುತ್ತೈದೆಯರು ಹೊಳೆಯಿಂದ ಐದು ಕೊಡ ನೀರು ತಂದು ದೇವರ ಮನೆಯಲ್ಲಿಟ್ಟು ಕುಲದೈವದ ಚಿತ್ರಪಟಕ್ಕೆ ಪೂಜೆ ಮಾಡುತ್ತಾರೆ. ನಂತರ ಒಲೆಯ ಮೇಲೆ ಹಾಲನ್ನು ಉಕ್ಕಿಸುತ್ತಾರೆ. ಪೂರ್ವದಿಕ್ಕಿಗೆ ಹಾಲು ಉಕ್ಕಿದರೆ ಶುಭವೆಂದು ಈ ಸಮುದಾಯದ ನಂಬಿಕೆ.

ನಂತರ ಬಂಧುವರ್ಗದವರಿಗೆ ಅವರವರ ಸಾಮರ್ಥ್ಯವಿದ್ದಂತೆ ಅಡುಗೆ ಮಾಡಿಸಿ ಊಟ ಹಾಕಿಸುತ್ತಾರೆ. ಅನ್ನ, ಪಾಯಸ ಮುಂತಾದ ಸಿಹಿತಿಂಡಿ ಮಾಡುವರು.

**೩ : ೯ : ೬ ದನದ ಕೊಟ್ಟಿಗೆಯ ನಿರ್ಮಾಣ**

ತಮ್ಮೊಂದಿಗೆ ವಾಸಿಸುವ ಪ್ರಾಣಿಗಳಿಗೆ ಪ್ರತ್ಯೇಕವಾದ ಕೊಟ್ಟಿಗೆಯನ್ನು ನಿರ್ಮಿಸುವರು. ನಾಲ್ಕು ಮೂಲೆಗೆ ಕಂಬಗಳನ್ನು ನಿಲ್ಲಿಸಿ, ಅದರ ಮೇಲೆ ಬಿದಿರಿನ ಅಚ್ಚೆಯನ್ನು ಕಟ್ಟಿ ಭತ್ತದ ಹುಲ್ಲನ್ನು ಮೇಲೆ ಹೊದಿಸುತ್ತಾರೆ. ಪಶುಗಳು ಮಲಗಲು ಅನುಕೂಲವಾಗುವಂತೆ ಕೆಳಗೆ ಬಿದಿರಿನಿಂದ ಅಂಜರ ಹೆಣೆದು ಹಾಕಿ ಮೇಲೆ ಮಣ್ಣನ್ನು ಹಾಕಿ ಗಟ್ಟಿ ಮಾಡುತ್ತಾರೆ.

ಒಡಿಗ ಸಮುದಾಯವು ಹೀಗೆ ತಮ್ಮ ವಸತಿಯ ಆಯ್ಕೆಯಿಂದ ನಿರ್ಮಾಣದವರೆಗೆ ಹಲವಾರು ಸಂಪ್ರದಾಯ, ನಂಬಿಕೆಗಳನ್ನು ಇಟ್ಟುಕೊಂಡಿದೆ. ಕಾಡಿನಲ್ಲಿ ಇಪ್ಪತ್ತರಿಂದ ಮೂವತ್ತು ಗುಡಿಸಲು ನಿರ್ಮಿಸಿಕೊಂಡು ಇವರು ಗುಂಪು ಗುಂಪಾಗಿ ಜೀವಿಸುವರು. ಇವರು ತಾವು ವಾಸಿಸುವ ಒಂದೊಂದು ಮನೆಯನ್ನು ''ಊರು'' ಎಂದೇ ಕರೆಯುತ್ತಾರೆ. ಇವರೊಂದಿಗೆ ವಾಸಿಸುವ ಅನ್ಯ ಸಮುದಾಯಗಳು ಈ ಕಾಡಿನಲ್ಲಿದ್ದಾರೆ. ಕಾಡು ಮತ್ತು ಜೇನು ಕುರುಬ, ಎರವರ,

ಪಣೆಯರ ಮನೆಗಳ ಮಾದರಿ ಈ ಸಮುದಾಯದ ಮನೆಯ ಮಾದರಿಗಿಂತ ಭಿನ್ನವಾಗಿರುವುದನ್ನು ಗುರುತಿಸಬಹುದು. ಚಿತ್ರದುರ್ಗ ಪರಿಸರದ ಬೇಡರ ಮನೆಗಳ ಮಾದರಿಯನ್ನು ಒಡಿಗರ ನೆಲೆಗಳಲ್ಲಿ ಗುರುತಿಸಬಹುದಾದರೂ, ಸಂಪೂರ್ಣ ಸಾಮ್ಯತೆಯನ್ನು ಕಾಣಲಾಗದು. ಅರಣ್ಯದಲ್ಲಿ ವಾಸಿಸುವಾಗಿನಿಂದ ಇವರು ತಮ್ಮ ನೆಲೆಗಳ ನಿರ್ಮಾಣದಲ್ಲಿ ಸ್ಥಳೀಯ ಭೌಗೋಳಿಕ ಪರಿಸರದ ಪ್ರೇರಣೆಯನ್ನು ಪಡೆದುಕೊಂಡಿದೆ. ಆಧುನಿಕತೆಯ ಪ್ರಭಾವದಿಂದಾಗಿ ಇಂದು ಒಡಿಗರ ವಸತಿಗಳ ನಿರ್ಮಾಣದಲ್ಲಿ ಕೆಲವಾರು ಬದಲಾವಣೆಗಳಾಗಿರುವುದು ಕಂಡುಬರುತ್ತದೆ.

### ೩ : ೧೦ ವೃತ್ತಿಗಳು

ಕಸುಬು ಅಥವಾ ವೃತ್ತಿ ಎಂಬುದು ಮಾನವನ ಮೂಲಭೂತ ಮತ್ತು ಪ್ರಮುಖ ಆಧಾರವಾಗಿದೆ. ಆದರೆ ಇದರ ಅರ್ಥ ಅನಾಗರಿಕ ಸ್ಥಿತಿಯಿಂದ ಪ್ರಜ್ಞಾವಸ್ಥೆಗೆ ಮರಳುವ ಪ್ರಯತ್ನದಲ್ಲಿ ಹಲವಾರು ಅನ್ವೇಷಣೆಗಳು ಅವನ ದೈನಂದಿನ ಚಟುವಟಿಕೆಯಲ್ಲಿ ನಡೆದು ಹೋದವು. ಆ ದೈಹಿಕ ಚಹರೆಗಳೆ ಅವನ ಕಸುಬು ಎಂದು ಗುರುತಿಸಿದರೆ ತಪ್ಪೇನಿಲ್ಲಾ. ಇದು ಕಸುಬಿನ ಆರಂಭಿಕ ಹಂತ. ಮನುಷ್ಯನ ಹಸಿವು ಹೆಚ್ಚಾದಂತೆ ಅದರ ಶಮನಕ್ಕಾಗಿ ಆಹಾರದ ಹುಡುಕಾಟ ಆರಂಭವಾಯಿತು. ಈ ಹುಡುಕಾಟದಲ್ಲಿಯೇ ಕಸುಬಿನ ಅಥವಾ ವೃತ್ತಿಯ ಕವಲು ಅಡಗಿತ್ತು. ಅಂದರೆ ಹಸಿವಿಗಾಗಿ ಯಾವುದೋ ರೀತಿಯ ಆಹಾರ ಪಡೆಯುವಿಕೆಯನ್ನು ಆರಂಭಿಸಿದ ಮಾನವನು ಕಸುಬನ್ನು ಕಂಡುಕೊಂಡ. ಮೊದ ಮೊದಲು ಬೇಟೆಯನ್ನು ಅವಲಂಬಿಸಿದ ಇವನು ಅದನ್ನೆ ಒಂದು ಕಸುಬಾಗಿಯೂ ಸ್ವೀಕರಿಸಿದ ನಂತರ ಪಶುಪಾಲನೆ, ಪ್ರಾಣಿಸಾಕಾಣಿಕೆ, ವ್ಯವಸಾಯ ಈ ರೀತಿಯ ಭಿನ್ನ ಕಸಬುಗಳನ್ನು ಅವಲಂಬಿಸಿದ. ಈ ಮೂಲಕ ವೃತ್ತಿಪರ ಜಾತಿಗಳು ಅಥವಾ ಜಾತಿಯ ಕಲ್ಪನೆಯಿಲ್ಲದ ವೃತ್ತಿ ಆಧಾರಿತ ಸಮುದಾಯಗಳು ಹುಟ್ಟಿಕೊಂಡವು. ಈ ನೆಲೆಯಲ್ಲಿಯೇ ಅನೇಕ ಬುಡಕಟ್ಟು ಸಮುದಾಯಗಳು ಕೂಡ ತಮ್ಮ ತಮ್ಮ ವಿಭಿನ್ನ ವೃತ್ತಿಗಳಿಂದ ಗುಂಪು ಗುಂಪಾಗಿ ಚದುರಿ ತಮಗೆ ಇಷ್ಟ ಬಂದ ಭೂ ಪ್ರದೇಶದಲ್ಲಿ ನೆಲೆಯೂರಿದವರು ಹೆಚ್ಚಾಗಿ ಗುಡ್ಡಗಾಡು ಪ್ರದೇಶವನ್ನು, ಅರಣ್ಯವನ್ನು ತಮ್ಮ ಜೀವನಕ್ಕೆ ಆಯ್ದುಕೊಂಡ ಈ ಸಮುದಾಯ ಅಲ್ಲಿನ ನಿಸರ್ಗದತ್ತ ಕೊಡುಗೆಯನ್ನು ದಿನನಿತ್ಯದ ಜೀವನಕ್ಕೆ ಬಳಸಿಕೊಂಡರು. ಇಲ್ಲಿಯೆ ವೃತ್ತಿಯ ಆವಿಷ್ಕಾರವಿದೆ.

ಅನೇಕ ಬುಡಕಟ್ಟು ಸಮುದಾಯಗಳು ಕೂಡ ಇಂದು ಗುಡ್ಡಗಾಡು ಅರಣ್ಯ ಪ್ರದೇಶವನ್ನು ತಮ್ಮ ವಾಸದ ನೆಲೆಯಾಗಿ ಆಯ್ದುಕೊಂಡಿರುವುದು ವೃತ್ತಿಗಾಗಿಯೇ. ಏಕೆಂದರೆ ಅಲ್ಲಿ ದೊರೆಯುವ ಬಿದಿರು, ಮೇವು, ಕಟ್ಟಿಗೆ, ಜೇನು ಹೀಗೆ ಹಲವಾರು ವಸ್ತುಗಳನ್ನು ಅವಲಂಬಿಸಿ ಬದುಕಿದ ಬುಡಕಟ್ಟು ಸಮುದಾಯಗಳಿವೆ. ಕಟ್ಟಿಗೆಯನ್ನು ಮಾರಿ ಜೀವನವನ್ನು ನಡೆಸುವ ಲಂಬಾಣಿ ಬುಡಕಟ್ಟು ಹಾಗೂ ಜೇನು ಕುರುಬರು ಅರಣ್ಯದಲ್ಲಿ ಜೇನು ಕಿತ್ತು ಮಾರುತ್ತಾರೆ. ಈ ಸಮುದಾಯಗಳನ್ನು ನೋಡಿದರೆ ಇವರ ಆಯ್ಕೆ ಪ್ರಮುಖವಾಗಿ ವೃತ್ತಿಯನ್ನೇ ಅವಲಂಬಿಸಿದೆ. ಆದ್ದರಿಂದಲೇ ಬುಡಕಟ್ಟು ಸಮುದಾಯಕ್ಕೆ ಜೀವನದ ಮುಖ್ಯ ಅಂಗವಾಗಿರುವುದು ಕಸುಬು.

ಭೌಗೋಳಿಕವಾಗಿ ಅರಣ್ಯವನ್ನು ತಮ್ಮ ನೆಲೆಯನ್ನಾಗಿ ಆಯ್ದುಕೊಂಡು ಒಡಿಗ ಬುಡಕಟ್ಟು ಸಮುದಾಯವು ಕೂಡ ವೃತ್ತಿಯನ್ನು ಜೀವನದ ಮುಖ್ಯ ಅಂಗವನ್ನಾಗಿ ಸ್ವೀಕರಿಸಿದೆ. ಮೂಲತಃ ಬೇಡ ಜನಾಂಗದವರೆಂದು ನಂಬಲಾದ ಈ ಒಡಿಗರ ಮೂಲ ಕಸುಬು ಬೇಟೆ. ತದ ನಂತರದಲ್ಲಿ ಅನೇಕ ವೃತ್ತಿಗಳನ್ನು ಅವಲಂಬಿಸಿದರು. ಆಧುನಿಕವಾಗಿ ಇಂದು ವಿವಿಧ ವೃತ್ತಿಗಳನ್ನು ಈ ಸಮುದಾಯ ನಡೆಸುತ್ತಿದೆ. ಆ ಮೂಲಕ ತಮ್ಮ ಜೀವನದ ನಿರ್ವಹಣೆಯನ್ನು ಮಾಡುತ್ತಿದ್ದಾರೆ. ಇವರ ಕಸುಬನ್ನು ಕುರಿತಾಗಿ ಕೆಲವು ಅಂಶಗಳನ್ನು ಈ ರೀತಿಯಾಗಿ ತಿಳಿಯಬಹುದಾಗಿದೆ.

ಮೊದ ಮೊದಲು ಹಸಿವನ್ನು ಇಂಗಿಸಿಕೊಳ್ಳಲು ಪ್ರಾರಂಭಿಸಿದ ಬೇಟೆ, ಕೃಷಿ ಕಾರ್ಯ ಚಟುವಟಿಕೆಗಳನ್ನು ನಂತರ ತಮ್ಮ ಜೀವನದ ವೃತ್ತಿ ಬದುಕನ್ನಾಗಿ ರೂಢಿಸಿಕೊಂಡರು. ಒಡಿಗ ಸಮುದಾಯವು ಸಹ ಇದರಿಂದ ಹೊರತಾಗಿಲ್ಲ. ಈ ಸಮುದಾಯವು ಸಹ ಬೇಟೆ ಹಾಗೂ ವ್ಯವಸಾಯವನ್ನು ತಮ್ಮ ಮೂಲ ಕಸುಬನ್ನಾಗಿಸಿಕೊಂಡಿದ್ದಾರೆ.

**೩ : ೧೦ : ೧ ಬೇಟೆ**

ಆದಿಮಾನವ ತನ್ನ ಹೋರಾಟಮಯ ಬದುಕಿನಲ್ಲಿ ಭೂಮಿಯ ಮೇಲೆ ಜನ್ಮವೆತ್ತಿದ ಬಳಿಕ ತನ್ನ ಜೀವನದ ನಿರ್ವಹಣೆಗಾಗಿ ಕೈಗೊಂಡ ವೃತ್ತಿಗಳಲ್ಲಿ ಬೇಟೆ ಮೊದಲನೆಯದು. ಏಕೆಂದರೆ ಹಣ್ಣು ಹಂಪಲು, ಗಡ್ಡೆ-ಗೆಣಸು ಎಲ್ಲಾ ಋತುಮಾನಗಳಲ್ಲಿ ದೊರೆಯಲಾರದು. ನಿರ್ದಿಷ್ಟವಾದ ಋತುಮಾನದಲ್ಲಿ ಅಲೆದಾಡಿ ಆಹಾರಕ್ಕಾಗಿ ರುಚಿ ಬದಲಾವಣೆಯಿಂದ ಬೇಟೆಯನ್ನು ಒಂದು ವೃತ್ತಿ ಮಾಡಿಕೊಳ್ಳಬೇಕಾದ ಅನಿವಾರ್ಯ ಸ್ಥಿತಿ ಬಂದಿರಬೇಕು. ಅವನು ಬದುಕುಳಿಯಲು ಬೇಕಾದ ಆಹಾರ ಸಂಗ್ರಹಣೆಯನ್ನು ಬೇಟೆಯ ಮೂಲದಿಂದಲೇ ಪಡೆಯಬೇಕಾದ ಅನಿವಾರ್ಯತೆ ಇತ್ತು. ಜೊತೆಗೆ ನಿಸರ್ಗದ ಮಡಿಲಲ್ಲಿಯೇ ವಾಸಿಸುತ್ತಿದ್ದುದರಿಂದ ಕ್ರೂರ ಮೃಗಗಳಿಂದ ತಮ್ಮನ್ನು ರಕ್ಷಿಸಿಕೊಳ್ಳಲು ಬೇಟೆ ಅವಶ್ಯಕವಾಗಿತ್ತು. ''ಬೇಟೆ ಎನ್ನುವ ಶಬ್ದಕ್ಕೆ ಪ್ರಾಣಿಯನ್ನು ಕೊಲ್ಲುವ, ಹಿಂಸಿಸುವ ಅರ್ಥವಿದೆ. ಇಲ್ಲಿ ಪ್ರಾಣಿ-ಪಕ್ಷಿ ಜಲಚರಗಳನ್ನು ನಾನಾ ತರಹದ ಆಯುಧಗಳಿಂದ ಕೊಲ್ಲುವ ಪ್ರಕ್ರಿಯೆಗೆ ಬೇಟೆ ಎನ್ನಲಾಗುತ್ತಿದೆ. ಇದಕ್ಕೆ ಶಿಕಾರಿ-ಮೃಗಯ ಎಂತಲೂ ಕರೆಯುವರು''.[೬] ಈ ಬೇಟೆಯ ವಿಧಾನವು ಕಾಲದಿಂದ ಕಾಲಕ್ಕೆ ಬದಲಾವಣೆ ಹೊಂದಿರುವುದನ್ನು ಗಮನಿಸಬಹುದು. ಪ್ರಾಚೀನ ಕಾಲದಲ್ಲಿನ ಬೇಟೆಗೆ ಕಲ್ಲು, ದೊಣ್ಣೆಗಳೇ ಆಯುಧಗಳಾಗಿದ್ದವು. ನಂತರ ಭರ್ಜಿ, ಈಟಿ, ಅಂಬು, ಬಿಲ್ಲು ಮುಂತಾದ ಆಯುಧಗಳಿಂದ ಬೇಟೆಯಾಡುತ್ತಿದ್ದರು. ನಂತರದ ದಿನಗಳಲ್ಲಿ ಕೋವಿ, ಮದ್ದು, ಗಾಳ, ಬಲೆ ಮುಂತಾದ ಆಯುಧಗಳು ಬೆಳಕಿಗೆ ಬಂದವು. ಅಧ್ಯಾಯಗಳಿಂದ ತಿಳಿದ ಅಂಶವೆಂದರೆ ಬೇಟೆ ಮತ್ತು ಶಿಕಾರಿ ಇವೆರಡು ಸಮನಾರ್ಥಕ ಶಬ್ದಗಳು. ಆದರೆ 'ಬೇಟೆ' ಎಂದರೆ ಒಬ್ಬರೆ ಭಾಗವಹಿಸುವುದು ಎಂದರ್ಥ. ಶಿಕಾರಿ ಎಂದರೆ ಅನೇಕ ಜನ ಪಾಲ್ಗೊಳ್ಳುವುದನ್ನು ಸೂಚಿಸುತ್ತದೆ. ಪ್ರತಿಯೊಂದು ಬುಡಕಟ್ಟು ಸಮುದಾಯವು ಬೇಟೆಯನ್ನು ಪ್ರಮುಖ ವೃತ್ತಿಯನ್ನಾಗಿಸಿಕೊಂಡು ಬಂದಿವೆ. ಬುಡಕಟ್ಟು ಸಮುದಾಯಗಳು ಅರಣ್ಯ ಗುಡ್ಡಗಾಡು ಪ್ರದೇಶಗಳಲ್ಲಿ ವಾಸಿಸುವುದರಿಂದ ಬೇಟೆಯು ಅವರಿಗೆ ಆಹಾರದ ಮೂಲವಾಗಿರುತ್ತದೆ. ನಾಗರೀಕ ಸಮಾಜವು ಮಾಂಸಾಹಾರಿಗಳಾಗಿದ್ದರು ಮೂಲತಃ ಇವರು ಬೇಟೆಗಾರರಲ್ಲ. ಆದರೆ ಬುಡಕಟ್ಟು ಸಮುದಾಯಗಳಿಗೆ ಬೇಟೆ ಅತಿ

ಮುಖ್ಯವಾದ ಅಂಶ. ಹಬ್ಬ, ಹರಿದಿನ, ಜಾತ್ರೆ, ದೇವಿಯ ಆರಾಧನೆ ಮುಂತಾದ ಪೂಜಾಕಾರ್ಯಗಳಿಗೂ ಬೇಟೆಯೇ ಬೇಕು. ಬೇಟೆಯ ಅರ್ಪಣೆಯಿಂದ ದೇವರ ಆರಾಧನೆ ಮಾಡುವ ಮೂಲಕ ತಮ್ಮ ಜೀವನದಲ್ಲಿ ಇವರು ನೆಮ್ಮದಿಯನ್ನು ಬಯಸುತ್ತಾರೆ.

ಒಡಿಗ ಬುಡಕಟ್ಟು ಸಮುದಾಯವೂ ಕೂಡ ಬೇಟೆಯನ್ನು ಮೂಲ ಆಹಾರದ ಅಂಶ ಮತ್ತು ವೃತ್ತಿಯನ್ನಾಗಿ ಮಾಡಿಕೊಂಡಿದೆ. ಒಡಿಗ ಬುಡಕಟ್ಟು ಸಮುದಾಯದಲ್ಲಿರುವ ಬೇಟೆಯ ವಿವಿಧ ಅಂಶಗಳನ್ನು ಈ ಕೆಲವು ವಿವರಗಳಿಂದ ತಿಳಿಯಬಹುದು.

ಒಡಿಗ ಬುಡಕಟ್ಟು ಸಮುದಾಯದ ಪುರುಷರು ದೃಢವಾದ ಮೈಕಟ್ಟು ಹೊಂದಿದ್ದು, ಹೋರಾಟ ಮಾಡುವ ಪ್ರವೃತ್ತಿಯನ್ನು ಹೊಂದಿದ್ದು, ಅವರು ಪ್ರಬಲ ಬೇಟೆಗಾರರಾಗಿದ್ದರು ಎಂಬುದು ತಿಳಿಯುತ್ತದೆ. ಇವರು ಅನುಸರಿಸುವ ಬೇಟೆಯ ವಿಧಾನ ಕ್ರಮಗಳು ಸಹ ಇತರೆ ಬುಡಕಟ್ಟುಗಳಂತೆಯೇ ಇರುವುದು ಕಂಡುಬಂದರೂ ಇವರ ಬೇಟೆಯ ವಿಧಾನಗಳಲ್ಲಿ ಕೆಲವು ಭಿನ್ನತೆಗಳು ಇರುವುದನ್ನು ನೋಡಬಹುದು. ಇವರು ಹಕ್ಕಿ, ಪಕ್ಷಿಗಳನ್ನು, ಅಂಬು, ಬಿಲ್ಲುಗಳಿಂದ ಬೇಟೆಯಾಡುತ್ತಾರೆ. ಪ್ರಾಣಿಗಳನ್ನು ಬೇಟೆಯಾಡಲು ಅಂಬು-ಬಿಲ್ಲು, ಕೇಪಿನ ಕೋವಿ, ಕೋವಿಗಳನ್ನು ಬಳಸುತ್ತಿದ್ದರು. ನಾಯಿಗಳನ್ನು ಪಳಗಿಸಿ ಅವುಗಳ ಸಹಾಯದಿಂದ ಬೇಟೆಯಾಡುತ್ತಿದ್ದರು. ನಾಯಿಗಳನ್ನು ಪಳಗಿಸಿ ಬೇಟೆಯಾಡುವುದು ಈ ಸಮುದಾಯದವರಲ್ಲಿ ತುಂಬ ವಿರಳವಾಗಿದೆ. ಕೆಲವು ಸಲ ಮರದ ಮೇಲೆ ಕುಳಿತು ಪೊಟರೆ, ಗವಿ, ಮರಗಳ ಹಿಂದೆ ಅಡಗಿಕೊಂಡು ಕುಳಿತು ಬೇಟೆಯಾಡುತ್ತಿದ್ದರು. ಈ ಸಮುದಾಯದಲ್ಲಿ ಕಂಡು ಬರುವ ಮೂರು ಮುಖ್ಯವಾದ ಬೇಟೆಯ ವಿಧಾನಗಳು.

೧ ಪಕ್ಷಿ ಬೇಟೆ

೨ ಪ್ರಾಣಿ ಬೇಟೆ

೩ ಜಲಚರಗಳ ಬೇಟೆ

**೩ : ೧೦ : ೧ : ೧ ಪಕ್ಷಿ ಬೇಟೆ :** ಈ ಸಮುದಾಯವು ಹಕ್ಕಿ-ಪಕ್ಷಿಗಳ ಬೇಟೆಗೆ ಹೆಚ್ಚು ಮಹತ್ವ ಕೊಡದೆ ತಮ್ಮ ವಸತಿಗಳ ಸಮೀಪ ಬರುತ್ತಿದ್ದ ಹಕ್ಕಿ-ಪಕ್ಷಿಗಳನ್ನು ಬೇಟೆಯಾಡುತ್ತಿದ್ದರು. ಮತ್ತೆ ಪ್ರಾಣಿಗಳ ಬೇಟೆಗೆ ಹೋದಾಗ ಕಂಡುಬರುವ ಹಕ್ಕಿ-ಪಕ್ಷಿಗಳನ್ನು ಬೇಟೆಯಾಡುತ್ತಿದ್ದರು. ಇವುಗಳನ್ನು ಬೇಟೆಯಾಡಲು ಮೂರು ಗೆಣ್ಣು ಇರುವ ಚಿಕ್ಕ ಅಂಬು-ಬಿಲ್ಲುಗಳನ್ನು ಉಪಯೋಗಿಸುತ್ತಿದ್ದರು. ಕಾರಣ ಇದು ಹಗುರವಾಗಿತ್ತು. ಇದರಿಂದ ತುಂಬಾ ಸುಲಭವಾಗಿ ಅವುಗಳನ್ನು ಬೇಟೆ ಮಾಡಬಹುದು ಎಂದು ಅಭಿಪ್ರಾಯ ಪಡುತ್ತಾರೆ. ಜೊತೆಗೆ ಬಲೆಗಳನ್ನು ಸಹ ಹಕ್ಕಿ-ಪಕ್ಷಿಗಳ ಬೇಟೆಗೆ ಬಳಸುತ್ತಾರೆ. ಇವರು ಬೇಟೆಯಾಡುತ್ತಿದ್ದ ಹಕ್ಕಿ-ಪಕ್ಷಿಗಳೆಂದರೆ ಕೌಜುಗ, ಕಾಡುಕೋಳಿ, ನವಿಲು, ಗೊರವಂಕ. ಆದರೆ ಇಂದು ಸರ್ಕಾರದ ನಿರ್ಬಂಧದಿಂದ ಬೇಟೆಯಾಡುವುದು ಅಷ್ಟಾಗಿ ಕಂಡುಬರುವುದಿಲ್ಲ.

**೩ : ೧೦ : ೧ : ೨ ಪ್ರಾಣಿ ಬೇಟೆ :** ಇವರು ಪ್ರಾಣಿಗಳನ್ನು ಬೇಟೆಯಾಡುವಾಗ (ಬಂದೂಕು) ಕೇಪಿನ ಕೋವಿ, ಕೋವಿ ೫ ಗೆಣ್ಣುಗಳಿರುವ ದೊಡ್ಡ ಅಂಬು-ಬಿಲ್ಲುಗಳಿಂದ ರಾತ್ರಿ ಸಮಯದಲ್ಲಿ ತಲೆಗೆ ಬೆಳಕನ್ನು ಕಟ್ಟಿಕೊಂಡು ಬೇಟೆಯಾಡಲು ಹೋಗುತ್ತಾರೆ. ಇವರ ಬೇಟೆಯನ್ನು ನಾಲ್ಕು ರೀತಿಯಾಗಿ ವಿವರಿಸಬಹುದಾಗಿದೆ.

೧ ಘಂಟೆ ಬೇಟೆ

೨ ತೇಡ್ ಬೇಟೆ

೩ ಕೊಪ್ಪ ತೆಗೆಯುವುದು

೪ ಹೆಂಚ್ ಬೇಟೆ

ಇತರೆ.

**ಘಂಟೆ ಬೇಟೆ :** ಬಿದಿರಿನಿಂದ ಬುಟ್ಟಿಯನ್ನು ಹೆಣೆದು ಅದರಲ್ಲಿ ದೀಪವನ್ನು ಇಟ್ಟುಕೊಂಡು ಒಬ್ಬನು ಅದನ್ನು ತನ್ನ ತಲೆಯ ಮೇಲೆ ಒತ್ತುಕೊಂಡು ಮುಂದೆ ಸಾಗುತ್ತಾನೆ. ಅವನ ಹಿಂದೆ ಇನ್ನೊಬ್ಬ ಘಂಟೆಯನ್ನು ಹಿಡಿದು ಬಾರಿಸುತ್ತಾ ಮುಂದೆ ಹೋದಂತೆ ಇವರ ಹಿಂದೆ ೮-೧೦ ಜನ ಗುಂಪಾಗಿ ಅಂಬು-ಬಿಲ್ಲುಗಳನ್ನು ಹಿಡಿದು ಹೊರಡುತ್ತಾರೆ. ಘಂಟೆಯನ್ನು ಬಾರಿಸುವವನು ಒಂದೇ ನಾದ ಕೇಳಿ ಬರುವಂತೆ ಬಾರಿಸಬೇಕು. ಅಂದರೆ ಕುಳಿ-ಕುಳಿ, ಓಡು- ಓಡು, ನಿಲ್ಲು-ನಿಲ್ಲು ಎಂದು ಶಬ್ದ ಬರುವಂತೆ ಬಾರಿಸುತ್ತಾ ಹೋಗಬೇಕು. ಮೊಲ, ಜಿಂಕೆ, ಕಡವೆ ಎಂಬ ಪ್ರಾಣಿಗಳು ಈ ಶಬ್ದ ಕೇಳಿ ಓಡದೆ ಅಲ್ಲಿಯೇ ನಿಲ್ಲುತ್ತಿದ್ದವು ಎಂಬ ನಂಬಿಕೆ ಪ್ರಬಲವಾಗಿತ್ತು. ಆಗ ಪ್ರಾಣಿಗಳನ್ನು ಸುಲಭವಾಗಿ ಬೇಟೆಯಾಡಬಹುದು. ನಂತರ ಅದನ್ನು ಎಲ್ಲರೂ ಸಮ ಭಾಗವಾಗಿ ಹಂಚಿಕೊಳ್ಳುತ್ತಿದ್ದರು.

**ತೇಡ್ ಬೇಟೆ :** ಈ ಬೇಟೆಗೆ ಹೋಗುವಾಗ ಸಾಮಾನ್ಯವಾಗಿ ಸಂಜೆ ಅಥವಾ ಬೆಳಿಗ್ಗೆ ಬೆಳಕಿನ ವೇಳೆಯಲ್ಲಿ ಹೋಗುತ್ತಿದ್ದರು. ಮೊದಲು ಹತ್ತು ಹದಿನೈದು ಜನರು ಗುಂಪಾಗಿ ಕಾಡಿನೊಳಗೆ ಪ್ರವೇಶಿಸಿ ಪೊದೆ, ಪೊಟರೆಗಳಲ್ಲಿ ಅಡಗಿರುವ ಪ್ರಾಣಿಗಳನ್ನು ಎಬ್ಬಿಸಲು ಹಾಹಾಕಾರದ ಕೇಕೆ ಹಾಕುತ್ತಾ, ಅಬ್ಬರಿಸುತ್ತಾ ತಮಟೆ ವಾದ್ಯಗಳಿಂದ ಶಬ್ದ ಮಾಡುತ್ತಾ ನಾಯಿಗಳನ್ನು ಛೂ ಬಿಡುತ್ತಾ ಹೋಗುತ್ತಾರೆ. ಪ್ರಾಣಿಗಳನ್ನು ಎಬ್ಬಿಸಿ ಓಡಿಸಿಕೊಂಡು ಇನ್ನೊಂದು ಕಡೆ ಎಂಟು, ಹತ್ತು ಜನರು ಅಂಬು-ಬಿಲ್ಲು ಹಾಗೂ ಕೋವಿ ಗಳನ್ನು ಹಿಡಿದು ನಿಂತಿರುವ ಕಡೆಗೆ ಓಡಿಸಿದಾಗ ಅವರು ತಮ್ಮ ಕೋವಿ, ಅಂಬು ಬಿಲ್ಲುಗಳಿಂದ ಆ ಪ್ರಾಣಿಗಳನ್ನು ಗುರಿಯಿಟ್ಟು ಹೊಡೆಯುತ್ತಿದ್ದರು.

**ಕೊಪ್ಪ ತೆಗೆಯುವುದು :** ಸುಮಾರು ಹದಿನೈದು ಇಪ್ಪತ್ತು ಜನರು ಸೇರಿ ಎರಡು, ಮೂರು ದೊಡ್ಡ ದೊಡ್ಡ ಹಳ್ಳ (ಗುಳಿ)ಗಳನ್ನು ತೆಗೆದು ಅವುಗಳು ಗೋಚರಿಸದಂತೆ ಅದರ ಮೇಲೆ ಸೊಪ್ಪು, ಸೋದೆ, ಹುಲ್ಲು, ಗಿಡಗಂಟೆಗಳಿಂದ ಅವುಗಳನ್ನು ಮುಚ್ಚುತ್ತಾರೆ. ಅನಂತರ ಅರಣ್ಯ ಪ್ರವೇಶಿಸಿ ಅಡಗಿರುವ ಪ್ರಾಣಿಗಳನ್ನು ಎಬ್ಬಿಸಲು ಕೇಕೆ ಹಾಕುತ್ತಾ, ಅಬ್ಬರಿಸುತ್ತಾ ಅವುಗಳನ್ನು ಎಬ್ಬಿಸಿ ಇವರು ತೆಗೆದಿರುವ ಗುಂಡಿಗಳ ಕಡೆಗೆ ಓಡಿಸಿಕೊಂಡು ಬಂದು ಆ ಪ್ರಾಣಿಗಳು

ಗುಂಡಿಯ ಒಳಗೆ ಬೀಳುವಂತೆ ಮಾಡುತ್ತಾರೆ. ಒಳಗೆ ಬಿದ್ದ ಪ್ರಾಣಿಗಳನ್ನು ಈಟಿ, ಭರ್ಜಿಗಳಿಂದ ಚುಚ್ಚಿ ಚುಚ್ಚಿ ಕೊಲ್ಲುತ್ತಾರೆ. ಮೇಲೆ ತೆಗೆದು ಅದನ್ನು ಎಲ್ಲರೂ ಸಮಭಾಗ ಮಾಡಿ ಹಂಚಿಕೊಳ್ಳುತ್ತಾರೆ.

**ಹೆಂಚ್‌ಬೇಟೆ :** ಈ ರೀತಿಯ ಬೇಟೆಗೆ ಹೋಗುವಾಗ ಇಬ್ಬರು ಅಥವಾ ಮೂರು ಜನರು ಮಾತ್ರ ಹೋಗುತ್ತಾರೆ. ಬೆಳಿಗ್ಗೆ ಬೇಗ ಎದ್ದು ಹೋಗುತ್ತಾರೆ. ಹೆಚ್ಚಾಗಿ ಬೆಳದಿಂಗಳ ಸಮಯದಲ್ಲಿ ಬೆಳಿಗ್ಗೆ ಐದು ಅಥವಾ ಆರು ಘಂಟೆಯ ಒಳಗೆ ಹೋಗುವುದು. ಕಾರಣ ಪ್ರಾಣಿಗಳೆಲ್ಲವು ಒಟ್ಟಿಗೆ ಬಂದು ಒಂದು ಕಡೆ ಸೇರಿರುತ್ತವೆ. ಈ ಬೇಟೆಗೆ ಹೋಗುವಾಗ ಅಂಬು-ಬಿಲ್ಲು ಅಥವಾ ಸಣ್ಣ ಕೋವಿಗಳನ್ನು ತೆಗೆದುಕೊಂಡು ಹೋಗುತ್ತಾರೆ. ಪ್ರಾಣಿಗಳು ಇರುವ ಸ್ಥಳವನ್ನು ದೂರದಿಂದಲೇ ಗಮನಿಸಿ ಮೆಲ್ಲಗೆ ಸದ್ದಾಗದಂತೆ ಅವುಗಳ ಬಳಿಗೆ ತೆರಳಿ ಮರದ ಮರೆಯಲ್ಲಿ ನಿಂತು ಬೇಟೆಯಾಡುತ್ತಾರೆ.

**ಇತರೆ :** ಎಂಟು ಹತ್ತು ಜನರ ಗುಂಪು ಸೇರಿ ಜಿನುಗುವ ಮಳೆಯಲ್ಲಿ ಅಂಬು-ಬಿಲ್ಲು-ಕೋವಿಗಳನ್ನು ಹಿಡಿದು ಒಟ್ಟಿಗೆ ಹೊರಡುತ್ತಾರೆ. ಪ್ರಾಣಿಗಳ ಹೆಜ್ಜೆ ಗುರುತುಗಳನ್ನು ಗಮನಿಸಿ ಅವುಗಳ ಬರುವಿಕೆಯನ್ನು ಮರದ ಪೊಟರೆಗಳಲ್ಲಿ ಅಥವಾ ಮರಗಳ ಹಿಂದೆ ಅಡಗಿ, ಮರದ ಮೇಲೆ ಅವಿತು ಕುಳಿತುಕೊಂಡು ಪ್ರಾಣಿಗಳ ಬರುವಿಕೆಯನ್ನು ನೋಡಿ ಹತ್ತಿರ ಬಂದಾಗ ಅವುಗಳನ್ನು ಹೊಡೆದು ಬೀಳಿಸುತ್ತಾರೆ. ಕೆಲವು ಬಾರಿ ರಾತ್ರಿ ವೇಳೆಯಲ್ಲಿ ತಲೆಗೆ ಬೆಳಕು (ಬ್ಯಾಟರಿ) ಕಟ್ಟಿಕೊಂಡು ಗುಂಪಾಗಿ ಬೇಟೆಗೆ ಹೋಗುತ್ತಾರೆ. ಇದು ತುಂಬಾ ಅಪಾಯಕಾರಿ, ತುಂಬಾ ಎಚ್ಚರಿಕೆಯಿಂದ ಇರಬೇಕು. ಒಬ್ಬನು ತನ್ನ ತಲೆಗೆ ಕಟ್ಟಿಕೊಂಡಿರುವ ಬೆಳಕಿನಿಂದ ಸುತ್ತಲೂ ನೋಡುತ್ತಾರೆ. ಯಾವುದಾದರು ಕ್ರೂರ ಪ್ರಾಣಿಗಳು ಬಂದರೆ ಉಳಿದವರಿಗೆ ಸೂಚನೆಯನ್ನು ಕೊಡುತ್ತಾನೆ. ಉಳಿದವರು ಬೇಟೆಯ ಕಡೆಗೆ ಗಮನವಿಟ್ಟಿರುತ್ತಾರೆ. ಮೊಲ, ಉಡ ಇವುಗಳು ಇರುವ ಸ್ಥಳವನ್ನು ಗಮನಿಸಿ ಮರದ ಪೊಟರೆ, ಗಿಡಗಂಟಿಗಳ ಪೊದೆಗಳಲ್ಲಿ ಅಡಗಿಕೊಂಡಿರುವುದನ್ನು ನೋಡಿ ಅವುಗಳನ್ನು ಬೇಟೆಯಾಡುತ್ತಾರೆ. ಮೊಲ, ಉಡ ಇವುಗಳ ಬೇಟೆಗೆ ಒಬ್ಬರೆ ಹೋಗುತ್ತಾರೆ.

ಕೆಲವು ಸಲ ಎಷ್ಟೇ ಅಲೆದರು ಯಾವ ಪ್ರಾಣಿಗಳು ಕಂಡುಬರದೆ ಆ ದಿನ ಬೇಟೆಯಾಗದಿದ್ದರೆ ಆ ಪ್ರದೇಶಗಳಲ್ಲಿರುವ ಸ್ಥಳೀಯ ವನ ದೇವತೆಗಳನ್ನು ಕುರಿತು ಪ್ರಾರ್ಥನೆ ಸಲ್ಲಿಸಿ, ಈ ದಿನ ಬೇಟೆಯಾದರೆ ನಿನಗೆ ಒಂದು ಪಾಲನ್ನು ನೀಡುತ್ತೇನೆ ಎಂದು ಕೇಳಿಕೊಳ್ಳುತ್ತಾರೆ. ನಂತರ ಬೇಟೆಗೆ ತೆರಳುತ್ತಾರೆ. ಆಗ ಖಂಡಿತವಾಗಿಯೂ ಬೇಟೆಯಾಗುತ್ತಿತ್ತು. ಯಾವುದಾದರೂ ಪ್ರಾಣಿಗಳು ಕಾಣಿಸಿಕೊಳ್ಳುತ್ತಿದ್ದವು ಎಂಬ ಬಲವಾದ ನಂಬಿಕೆ ಇತ್ತು. ಆಗ ಸಿಕ್ಕ ಬೇಟೆಯಲ್ಲಿ ದೇವತೆಗೂ ಒಂದು ಪಾಲನ್ನು ತೆಗೆದು ದೇವಿಯ ಪೂಜೆಯೊಂದಿಗೆ ಸಮರ್ಪಿಸಿ ಆಮೇಲೆ ಎಲ್ಲರೂ ಸಮವಾಗಿ ಹಂಚಿಕೊಳ್ಳುತ್ತಿದ್ದರು.

**ಕೇಪಿನ ಕೋವಿ :** ಕೇಪಿನ ಕೋವಿಯು ಬತ್ತಿ ಕೋವಿಯಷ್ಟು ಅಪಾಯಕಾರಿಯಲ್ಲ. ಈ ಕೋವಿಯನ್ನು ಸ್ಥಿರ ಹೆಜ್ಜೆಯಲ್ಲಿ ನಿಂತು ಕುದುರೆಯನ್ನು ಸದ್ದಾಗದಂತೆ ಮೇಲೆತ್ತಿ ಟ್ರಿಗರನ್ನು ಒತ್ತಿದರೆ ಕುದುರೆ ನಿಪ್ಪಲಿಗೆ ಘರ್ಷಿಸಿ ಕೇಪು ಸಿಡಿದು ಈಡಾಗುವುದು. ಕೇಪಿನ ಕೋವಿಗೆ ತುಂಬಿಸುವ ಈಡು ಹೊಡೆಯಬೇಕಾದ ಪ್ರಾಣಿಯ ಬಲಿಷ್ಠತೆಯನ್ನು ಅವಲಂಬಿಸಿರುವುದೆಂಬುದು ಅನುಭವಿ ಬೇಟೆಗಾರರ ಅಭಿಪ್ರಾಯವಾಗಿದೆ.

**೩ : ೧೦ : ೧ : ೩ ಜಲಚರಗಳ ಬೇಟೆ :** ಇವರು ಪ್ರಾಣಿಗಳ ಬೇಟೆಗೆ ಕೊಟ್ಟಿದ್ದ ಮಹತ್ವ ಈ ಜಲಚರಗಳ ಬೇಟೆಗೆ

ಕೊಟ್ಟಿರಲಿಲ್ಲ. ಇವರು ಕಪಿಲ ನದಿಯ ಆಯಕಟ್ಟಿನಲ್ಲಿ ವಾಸಿಸುತ್ತಿರುವುದರಿಂದ ಮೀನು, ಏಡಿ(ನಳ್ಳಿ), ಸಿಗಡಿ ಹಾಗೂ ಆಮೆ ಇವುಗಳನ್ನು ಬೇಟೆಯಾಡುತ್ತಾರೆ. ಮೀನುಗಳನ್ನು ಹಿಡಿಯಲು ಬಲೆಗಳನ್ನು ಬಳಸುತ್ತಾರೆ. ಈ ಸಮುದಾಯದವರು ಗಂಡತ್ತೂರು ಎಂಬ ಗ್ರಾಮದಲ್ಲಿ ವಾಸಿಸುತ್ತಿದ್ದು ವಿಶಾಲವಾದ ಕಪಿಲ ನದಿಯ ವಿಸ್ತಾರದಿಂದ ಈ ಸಮುದಾಯದ ಮೂರು ಅಥವಾ ನಾಲ್ಕು ಮನೆಗಳವರು ನದಿಯಲ್ಲಿ ದೊಡ್ಡ ದೊಡ್ಡ ಬಲೆಗಳನ್ನು ಬಿಟ್ಟು ಮೀನುಗಳನ್ನು ಹಿಡಿಯುತ್ತಾರೆ. ರಾತ್ರಿ ವೇಳೆಯಲ್ಲಿ ನಾಲ್ಕೈದು ಜನರು ಸೇರಿ ಹರಿಗೋಲಿನಲ್ಲಿ ಹೋಗಿ ಬಲೆಯನ್ನು ಬೀಸಿ ಬರುತ್ತಾರೆ. ನಂತರ ಬೆಳಿಗ್ಗೆ ಬೇಗ ಹೋಗಿ ಅಥವಾ ಅಲ್ಲಿಯೇ ರಾತ್ರಿ ಕಾವಲಿದ್ದು ಬಲೆಯನ್ನು ತೆಗೆದು ಸಿಕ್ಕ ಬೇಟೆಯಲ್ಲಿ ಎಲ್ಲರೂ ಸಮವಾಗಿ ಹಂಚಿಕೊಳ್ಳುತ್ತಾರೆ. ಹುಡುಗರು ಮನೋರಂಜನೆಗಾಗಿ ಹತ್ತಿರದ ಹಳ್ಳಕೊಳ್ಳಗಳಲ್ಲಿ ಗಾಳಗಳಿಂದ ಮೀನು ಹಿಡಿಯುತ್ತಾರೆ. ಮೀನುಗಳು ಹೆಚ್ಚಾಗಿ ಸಿಕ್ಕರೆ ಅವುಗಳನ್ನು ಉಪ್ಪು, ಖಾರ ಮಿಶ್ರಣ ಮಾಡಿ ಒಣಗಿಸಿ ದಿನನಿತ್ಯದ ಅಡುಗೆಗಳಲ್ಲಿ ಉಪಯೋಗಿಸುತ್ತಾರೆ. ಕೆರೆ, ಬಾವಿ, ಹಳ್ಳ, ಹೊಂಡಗಳಲ್ಲಿ ಹಾಗೂ ಪೊಟರೆಗಳಲ್ಲಿರುವ ಏಡಿಗಳು, ಆಮೆಗಳನ್ನು ಸಹ ಒಬ್ಬರೇ ಬೇಟೆಯಾಡುತ್ತಾರೆ.

**೩ : ೧೦ : ೨ ಇತರೆ ಬುಡಕಟ್ಟಿನೊಂದಿಗೆ ಸಂಬಂಧಿಸಿದಂತೆ ಬೇಟೆ :** ಒಡಿಗ ಬುಡಕಟ್ಟು ಸಮುದಾಯದ ನೆಲೆಯ ಆಯಕಟ್ಟಿನೊಂದಿಗೆ ವಾಸಿಸುತ್ತಿರುವ ಜೇನು ಕುರುಬ, ಕಾಡುಕುರುಬ, ಎರವರು, ಇತರೆ ಬುಡಕಟ್ಟನ್ನು ಸಹ ತಾವು ಬೇಟೆಗೆ ಹೋಗುತ್ತಿದ್ದಾಗ ಅಂದರೆ ಪ್ರಾಣಿಗಳ ಬೇಟೆಗೆ ಹೋದಾಗ ಮಾತ್ರ ಕರೆದುಕೊಂಡು ಹೋಗುತ್ತಿದ್ದರು. ಉತ್ತಮ ಸಹಭಾಗಿತ್ವ ಹೊಂದಿದ್ದು, ಬೇಟೆಯ ನಂತರ ಅವರಿಗೂ ಸಹ ಸಮಪಾಲನ್ನು ನೀಡುತ್ತಾರೆ. ಇದರಲ್ಲಿ ಯಾವ ಭೇದಭಾವ ಇರುವುದಿಲ್ಲ.

ಮೂಲತಃ ಚಿತ್ರದುರ್ಗ ಬೇಡ ನಾಯಕರ ಗುಂಪುಗಳಿಂದ ಜೀವ ಭಯದಿಂದ ಹೆದರಿ ಓಡಿ ಬಂದಿರುವುದಾಗಿ ಹೇಳುವ ಇವರ ಬೇಟೆಯ ವಿಧಾನಗಳಲ್ಲಿ ಮೂಲ ಆಚರಣಾ ವಿಧಿಗಳು ಕಂಡು ಬಂದಿದ್ದರು ಕೆಲವು ವಿಧಾನಗಳಲ್ಲಿ ಸಾಮ್ಯತೆ ಕಂಡುಬರುತ್ತದೆ.

ಇವರು ಕೆಲವು ಹಬ್ಬ ಹರಿದಿನಗಳಲ್ಲಿ ಬೇಟೆಯನ್ನು ಹೆಚ್ಚಾಗಿ ಕೈಗೊಳ್ಳುತ್ತಾರೆ. ದೀಪಾವಳಿಯ ಹಬ್ಬದ ಸಂದರ್ಭದಲ್ಲಿ ಬೇಟೆಗೆ ಹೋಗುವುದು ಪ್ರಮುಖವಾಗಿತ್ತು. ಹಿಂದೆ ಇವರು ಅರಣ್ಯ ಅಧಿಕಾರಿಗಳ ಜೊತೆ ಉತ್ತಮ ಬಾಂಧವ್ಯ ಹೊಂದಿದ್ದರು. ಅವರ ಕೆಲಸ ಕಾರ್ಯಗಳಲ್ಲಿ ಭಾಗಿಯಾಗಿ ಅವರಿಗೆ ಸಹಕರಿಸುತ್ತಿದ್ದರು. ಮೈಸೂರು ರಾಜ್ಯರ ಆಳ್ವಿಕೆಯ ಕಾಲದಲ್ಲಿ ಆನೆಗಳನ್ನು ಹಿಡಿಯಲು ಮತ್ತು ಪಳಗಿಸಲು ಈ ಸಮುದಾಯದವರು ಸಹಕರಿಸುತ್ತಿದ್ದರು. ಬೇಟೆಗೆ ಹೋಗುವಾಗ ಯಾವುದೇ ನಿಬಂಧನೆಯಿಲ್ಲದೆ ಇವರ ಜೊತೆ ಅರಣ್ಯಾಧಿಕಾರಿಗಳು ಹೋಗುತ್ತಿದ್ದರು. ಇಂದು ಸರ್ಕಾರದ ನಿರ್ಬಂಧನೆಯಿಂದ ಬೇಟೆಯಾಡುವುದು ಕಂಡುಬರುವುದಿಲ್ಲ.

**೩ : ೧೦ : ೨ ಕೃಷಿ**

ಕೃಷಿ ಎಂಬುದು ಮಾನವನು ಅನಾಗರಿಕ ಸ್ಥಿತಿಯಿಂದ ನಾಗರಿಕ ಪ್ರಜ್ಞೆಗೆ ಬಂದ ನಂತರದ ಒಂದು ಪ್ರಮುಖ ವೃತ್ತಿ.

ಕಾಲ ಬದಲಾದಂತೆ ಮಾನವ ಭೂಕೃಷಿ ಮಾಡುವುದನ್ನು ಕಲಿತ. ಆರಂಭದಲ್ಲಿ ಆದಿವಾಸಿಗಳು ಭೂ ವ್ಯವಸಾಯವನ್ನು ಕೆತ್ತು ಬೇಸಾಯದಿಂದ ಆರಂಭಿಸಿ ಉಳುಮೆಗಾಗಿ ಪ್ರಾಣಿಗಳನ್ನು ಉಪಯೋಗಿಸಿಕೊಂಡರು. ಪಶುಪಾಲನೆ ಮಾಡುತ್ತಾ ಕಾಡು ಮತ್ತು ಸಾಧು ಪ್ರಾಣಿಗಳನ್ನು ಹಿಡಿದು ಮನೆಗೆಲಸಕ್ಕಾಗಿ ಬಳಸಿಕೊಂಡರು. ಪಶುಪಾಲನೆಯನ್ನು ಆರಂಭಿಸಿದ ಕಾಲದಲ್ಲಿ ಅವುಗಳನ್ನು ಪಳಗಿಸಿ ಒಂದು ನಿಯಂತ್ರಣಕ್ಕೆ ತಂದುಕೊಂಡ ಕಾಲದಲ್ಲಿ ಕೃಷಿಗೆ ಬಳಸಿಕೊಂಡರು. ಹಸಿಮಾಂಸದಿಂದ ಆರಂಭಿಸಿದ ಆಹಾರ ನಿಯಮಗಳಲ್ಲಿ ಅನೇಕ ಬದಲಾವಣೆಗಳನ್ನು ಕಂಡುಕೊಳ್ಳಲಾಯಿತು. ಧಾನ್ಯಾದಿಗಳನ್ನು ತಿಂದು ಬದುಕುವ ಮತ್ತು ಅದರ ಅವಶ್ಯಕತೆಯನ್ನು ತಿಳಿದುಕೊಂಡು, ಮುಂದೆ ಕೃಷಿಯ ಮೂಲಕ ಭೂಮಿಯನ್ನು ಊಳಿ ತನಗೆ ಬೇಕಾದ ಬೆಳೆಗಳನ್ನು ಬೆಳೆದುಕೊಂಡು ಅದನ್ನೇ ಮುಖ್ಯ ಆಹಾರ ಎಂದು ಸ್ವೀಕರಿಸಿಕೊಂಡ. ಇಡೀ ಮಾನವ ಕುಲವೇ ಇಂದು ವ್ಯವಸಾಯದ ಮೇಲೆ ಜೀವಿಸುತ್ತಿರುವುದನ್ನು ಕಂಡರೆ ಬಹುಶಃ ಕೃಷಿಯನ್ನು ಅನಾವರಣ ಮಾಡಿದ ಪ್ರಾಚೀನರನ್ನು ಗೌರವಿಸಲೇ ಬೇಕಾಗುತ್ತದೆ. ಕೃಷಿಯ ಮೂಲಕ ಬದುಕನ್ನು ಕಂಡುಕೊಂಡ ಅನೇಕ ಬುಡಕಟ್ಟು ಸಮುದಾಯಗಳು ನಮ್ಮ ದೇಶದಲ್ಲಿವೆ. ಆ ಮೂಲಕ ಶ್ರಮ ಸಂಸ್ಕೃತಿಯನ್ನು ಹುಟ್ಟು ಹಾಕಿಕೊಂಡದ್ದು ನಮ್ಮ ಹಳೆಯ ಇತಿಹಾಸ. ಈ ಶ್ರಮ ಸಂಸ್ಕೃತಿಯು ಒಂದು ರೀತಿಯಲ್ಲಿ ಶೋಷಣೆಯ ಹಂತಕ್ಕೂ ಬಂದು ನಿಂತಿತೆನ್ನಬಹುದು. ಕೃಷಿ ಭೂಮಿಯನ್ನು ಅಧಿಕವಾಗಿ ಹೊಂದಿದ್ದ ಜಮೀನ್ದಾರರು. ಬುಡಕಟ್ಟು ಸಮುದಾಯದವರನ್ನು ಆ ಭೂಮಿಯಲ್ಲಿ ದುಡಿಯುವ ಕೂಲಿಗಳನ್ನಾಗಿ ಬಳಸಿಕೊಂಡದ್ದು ಈ ನೆಲದ ದುರಂತ. ಮೂಲತಃ ನೆಲವನ್ನೇ ನಂಬಿಕೊಂಡು ಬಂದ ಈ ಜನಾಂಗ ನೆಲ ಕಚ್ಚಿದ್ದು ಇವರ ಅಜ್ಞಾನದಿಂದಲೇ ಎಂದರೆ ತಪ್ಪಿಲ್ಲ. ಆಧುನಿಕವಾಗಿ ಕೆಲವು ಬುಡಕಟ್ಟು ಜನರು ಕೃಷಿಯನ್ನು ಅವಲಂಬಿಸಿ ಜೀವನವನ್ನು ನಡೆಸುತ್ತಿದ್ದಾರೆ. ಒಡಿಗ ಸಮುದಾಯವು ಕೂಡ ವ್ಯವಸಾಯವನ್ನು ಅವಲಂಬಿಸಿದೆ. ಅವರ ವ್ಯವಸಾಯದ ಕೆಲವು ಪದ್ಧತಿಗಳನ್ನು ಇಲ್ಲಿ ವಿವರಿಸಲಾಗಿದೆ.

ಒಡಿಗ ಬುಡಕಟ್ಟು ಸಮುದಾಯದವರು ಬೇಟೆಯ ಜೊತೆಗೆ ಕೃಷಿಗೂ ಆದ್ಯತೆ ನೀಡಿದ್ದಾರೆ. ಬೇಸಾಯ ಕ್ರಮವನ್ನು ಹಿಂದಿನಿಂದಲೂ ರೂಢಿಸಿಕೊಂಡು ಬಂದಿದ್ದಾರೆ. ಬೇಟೆಯ ಜೊತೆ ಜೊತೆಗೆ ಬೇಸಾಯವನ್ನು ಮಾಡಿಕೊಂಡು ಬಂದು ಬೇಟೆಯು ಮೂಲ ಕಸುಬು, ಕೃಷಿಯು ಅವಲಂಬಿತ ವೃತ್ತಿಯಾಗಿದೆ. ಕೆಲವರಿಗೆ ಸರ್ಕಾರಿ ಜಮೀನುಗಳಿದ್ದು ಮತ್ತೆ ಕೆಲವರು ಅರಣ್ಯ ಭಾಗದ ಭೂಮಿಯಲ್ಲಿ ವ್ಯವಸಾಯ ಮಾಡುತ್ತಿದ್ದಾರೆ. ಇದರಿಂದ ಆಗಾಗ ತೊಂದರೆಗೆ ಒಳಗಾಗುತ್ತಾರೆ.

ಈ ಬುಡಕಟ್ಟು ಸಮುದಾಯದ ಬೇಸಾಯಕ್ರಮವು ಸಾಮಾನ್ಯ ನಾಗರೀಕ ವ್ಯವಸ್ಥೆಯನ್ನೇ ಹೋಲುತ್ತದೆ. ಬೇಸಾಯವನ್ನು ತನ್ನದೇ ಆದ ವಿಶಿಷ್ಟ ಮಾದರಿಗಳಿಂದ ಗುರುತಿಸಿಕೊಂಡಿದ್ದಾರೆ. ಹೊಲ-ಗದ್ದೆಗಳನ್ನು ಉಳುಮೆ ಮಾಡುವುದಕ್ಕೆ ''ಉಳುಮೆಯಿಸುವುದು'' ''ಎರು ಕಟ್ಟುವುದು'' ಎಂದು ತಮ್ಮ ಮಾತಿನಲ್ಲಿ ಹೇಳುತ್ತಾರೆ. ಉಳುಮೆ ಮಾಡುವಾಗ ಎತ್ತುಗಳು ಆ ಕಡೆ ಈ ಕಡೆ ಹೋಗದಂತೆ ತಮ್ಮದೆ ಆದ ರಾಗದಲ್ಲಿ ಆ...ಆ... ಆ... ಎಂದು ಹೇಳುತ್ತಿರುತ್ತಾರೆ. ಒಣಬೇಸಾಯ ಕ್ರಮವಿದ್ದು ಇವರು ನಿರ್ವಹಿಸುವ ಬೇಸಾಯ ಕ್ರಮ ನೀರಾವರಿಗಿಂತ ಹೆಚ್ಚಾಗಿ ಮಳೆಯನ್ನೇ ಆಶ್ರಯಿಸಿ ನಡೆಯುತ್ತದೆ. ಇವರ ವ್ಯವಸಾಯವು ಸಹ ಪರಂಪರಾಗತವಾದುವೆ ಹೊರತು ಪ್ರಗತಿಪರವಲ್ಲ.

ಸಾಮಾನ್ಯ ರೂಢಿಯಂತೆ ಸೋಮವಾರದಂದು ಎರು ಕಟ್ಟುವುದಿಲ್ಲ.

ಈ ಸಮುದಾಯದಲ್ಲಿ ಎರಡು ರೀತಿಯ ಬೇಸಾಯ ಕ್ರಮಗಳಿವೆ.

೧ ಆಹಾರ ಬೆಳೆಗಳು

೨ ವಾಣಿಜ್ಯ ಬೆಳೆಗಳು

**೩ : ೧೦ : ೨ : ೧ ಆಹಾರ ಬೆಳೆಗಳು :** ಇವರು ಕೈಗೊಳ್ಳುವ ಬೇಸಾಯವು ತುಂಬಾ ಸರಳವಾಗಿದೆ. ಮುಖ್ಯವಾಗಿ ಭತ್ತ, ರಾಗಿ, ಗೆಣಸುಗಳನ್ನು ಬೆಳೆಯುತ್ತಾರೆ. ಕೃಷಿಯು ಮಳೆ ಆಧಾರಿತವಾಗಿದೆ. ಮುಂಗಾರಿನಲ್ಲಿ ಮಾತ್ರ ಬೆಳೆಗಳನ್ನು ಬೆಳೆಯುತ್ತಾರೆ. ಬೇಸಾಯ ಕ್ರಮವು ನಾಟಿಗಿಂತ ಹೆಚ್ಚಾಗಿ ಚೆಲ್ಲುವುದು ಕಂಡುಬರುತ್ತದೆ. ಕಾರಣ ನೀರಿನ ಅಭಾವ ಮತ್ತು ಕೃಷಿ ಕೆಲಸಗಳು ಬೇಗ ಆರಂಭವಾಗಿ ಬೇಗ ಮುಗಿಯುತ್ತದೆ. ಹೊಲ-ಗದ್ದೆಗಳಲ್ಲಿ ಮನೆಮಂದಿಯಲ್ಲಾ ಸೇರಿ ದುಡಿಯುತ್ತಾರೆ. ಮೊದಲು ಹೊಲ-ಗದ್ದೆಗಳನ್ನು ಉಳುಮೆ ಮಾಡುವುದರ ಮೂಲಕ ಪ್ರಾರಂಭಿಸಿ ಎರಡು ರೀತಿಯಲ್ಲಿ (ಬಾರಿ) ಹೊಲ-ಗದ್ದೆಗಳನ್ನು ಉಳುಮೆ ಮಾಡುತ್ತಾರೆ. ನಂತರ ಭತ್ತ, ರಾಗಿಯನ್ನು ಚೆಲ್ಲುತ್ತಾರೆ. ಹೊಲ-ಗದ್ದೆಗಳಿಗೆ ಕೊಟ್ಟಿಗೆ ಗೊಬ್ಬರವನ್ನು ಹಾಕುತ್ತಾರೆ. ಹೊಲಗಳಲ್ಲಿರುವ ಕಳೆಯ ಒಂದು ಅಥವಾ ಎರಡು ಬಾರಿ ತೆಗೆಯುತ್ತಾರೆ. ಬೆಳೆಯು ಬಂದ ಮೇಲೆ ಕಟಾವು ಮಾಡಿ ಕಣಗಳನ್ನು ತಮ್ಮ ತಮ್ಮ ಮನೆಯ ಮುಂದೆಯೇ ಮಾಡುತ್ತಾರೆ.

**೩ : ೧೦ : ೨ : ೧ : ೧ ಕಣ :** ಬೆಳೆದ ಫಸಲನ್ನು ಕಟಾವು ಮಾಡಿದ ನಂತರ ಅದನ್ನು ತಂದು ಮನೆಯ ಮುಂದಿನ ಜಾಗದಲ್ಲಿ ಹಾಕುತ್ತಾರೆ. ಪ್ರತಿಯೊಬ್ಬರ ಮನೆಯ ಮುಂದೆಯೂ ಮೇಟಿ ಕಂಬವನ್ನು ಕಾಣಬಹುದು. ಮೇಟಿ ಕಂಬಕ್ಕೆ ಪವಿತ್ರ ಸ್ಥಾನವಿದೆ. ಕಣದ ಕೆಲಸಕ್ಕೆ ಮನೆ ಮಂದಿಯೆಲ್ಲರು ಸೇರುತ್ತಾರೆ ಜೊತೆಗೆ ಅಕ್ಕಪಕ್ಕದ ಮನೆಯವರು ಸೇರಿ ಭತ್ತ ಬಡಿದು ಶುದ್ಧಗೊಳಿಸುತ್ತಾರೆ. ಕಣದ ಕೆಲಸ ಮುಗಿಸಿ ಅಲ್ಲಿಯೇ ರಾಶಿ ಪೂಜೆ ಮಾಡುತ್ತಾರೆ. ಮೊದಲು ಬೆಳೆಯಲ್ಲಿ ಸ್ಥಳೀಯ ದೇವರಾದ ''ಕಾಳಿಕಟ್ಟೆ'' ದೇವರಿಗೆ ತೆರೆ ಕೊಡುವುದು ಐದು ಸೇರು ಭತ್ತ ತೆಗೆದು ನೆನಸಿ, ಕಟ್ಟೆ ದೇವರಿಗೆ ನೈವೇದ್ಯ ಮಾಡುತ್ತಾರೆ. ಕಣವನ್ನು 'ಕಳಹೊಕ್ಕರೆ' ಎನ್ನುವರು. ಕಳವನ್ನು ಮತ್ತೆ ಸಾರಿಸಿ ಶುದ್ಧಗೊಳಿಸಿ ರಂಗೋಲಿ ಬಿಟ್ಟು, ರಾಶಿಗೆ ಅರಿಶಿನ ಕುಂಕುಮ ಹೂ-ಹಣ್ಣುಗಳಿಂದ ರಾಶಿ ಪೂಜೆ ಮಾಡುತ್ತಾರೆ. ದೇವರಿಗೆ ನೈವೇದ್ಯ ಸಲ್ಲಿಸಿದ, ಕುಟ್ಟಿದ ಹಸಿ ಅಕ್ಕಿಗೆ ಬೆಲ್ಲ, ಕಾಯಿ ಹಾಕಿ ಫಲಹಾರವಾಗಿ ಹಂಚುತ್ತಾರೆ.

**೩ : ೧೦ : ೨ : ೨ ವಾಣಿಜ್ಯ ಬೆಳೆಗಳು :** ಈ ಸಮುದಾಯದ ಸುಮಾರು ೧%ರಷ್ಟು ಕುಟುಂಬಗಳು ಮಾತ್ರ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ. ಶುಂಠಿ, ಮೆಣಸು, ಹತ್ತಿ ಮುಖ್ಯ ವಾಣಿಜ್ಯ ಬೆಳೆಗಳಾಗಿವೆ. ಕೆಲವು ಕುಟುಂಬಗಳಿಗೆ ಆರು ಅಥವಾ ಎಂಟು ಎಕರೆಗಳಂತೆ ಜಮೀನು ಇದ್ದು ಅವರು ಹೆಚ್ಚಾಗಿ ಮೆಣಸಿನ ಬಳ್ಳಿಯನ್ನು, ಹತ್ತಿಯನ್ನು, ಶುಂಠಿ ಬೆಳೆದು ಉತ್ತಮ ಜೀವನ ಹೊಂದಿದ್ದಾರೆ. ಬೆಳೆದ ಬೆಳೆಗಳನ್ನು ನೆರೆ ರಾಜ್ಯದ ಪುಲಪ್ಪಳ್ಳಿಯ ಹತ್ತಿರವಾಗುವುದರಿಂದ ಅಲ್ಲಿ ಮಾರಾಟ ಮಾಡುತ್ತಾರೆ.

**೩ : ೧೦ : ೨ : ೩ ಕೃಷಿ ಸಲಕರಣೆಗಳು :** ಕೃಷಿ ಸಲಕರಣೆಗಳು ಹಿಂದಿನ ಹಿರಿಯರಿಂದ ಬೆಳೆದುಬಂದವು. ಹಲವು ಆವಿಷ್ಕಾರಗೊಂಡವು, ಮತ್ತೆ ಕೆಲವು ಆಧುನಿಕ ಕೃಷಿ ಸಲಕರಣೆಗಳು. ನೇಗಿಲು, ನುಗ, ಅಲುಬೆ ಇವು ಉಳುಮೆ ಸಾಧನಗಳು. ಹೊಲ-ಗದ್ದೆಗಳ ಉಳುಮೆಗೆ ಬಳಸಲಾಗುತ್ತದೆ. ಕಳೆಗುದ್ದಲಿ, ಕೈಗುದ್ದು ಬೆಳೆಯಲ್ಲಿ ಬೆಳೆದ ಕೃಷಿ ಕಳೆಯನ್ನು ಕೀಳಲು ಉಪಯೋಗಿಸುವರು. ತಾವೇ ಗೊಬ್ಬರ ಕುಕ್ಕೆ, ಗೊಬ್ಬರಗಳನ್ನು ಎತ್ತಿಹಾಕಲು ಅನುಕೂಲವಾಗುವಂತೆ ರಚಿಸಿಕೊಂಡಿರುತ್ತಾರೆ. ಕುಡುಗೋಲು, ಸೊಪ್ಪು, ಸೆದೆ, ಗಿಡ, ಮರಗಳನ್ನು ಕತ್ತರಿಸಲು ಉಪಯೋಗವಾಗುತ್ತದೆ. ಮೊರ ಇತ್ಯಾದಿ ಕಣದ ಸಾಮಾನುಗಳು ಒಕ್ಕಣೆ ಕಾರ್ಯಗಳಿಗೆ ಬಳಸುತ್ತಾರೆ. ಮರದಿಂದ ಮಾಡಿದ ಅಳತೆಪಟ್ಟಿಗಳು, ಆಹಾರಧಾನ್ಯ, ಭತ್ತ, ರಾಗಿ ಅಳೆಯಲು ಉಪಯೋಗಿಸುವರು. ಕೃಷಿ ಸಲಕರಣೆಗಳು ಈ ಸಮುದಾಯದವರು ಪೂಜ್ಯ ಭಾವನೆಯಿಂದ ನೋಡುತ್ತಾರೆ. ಆದ್ದರಿಂದ ಅವುಗಳು ಹಳೆಯದಾದರೆ ಅಥವಾ ಮುರಿದು ಹೋದರೆ ಬೆಂಕಿಯಲ್ಲಿ ಹಾಕದೆ ಮನೆಯ ಒಂದು ಬದಿಯಲ್ಲಿಟ್ಟು ಬಿಡುತ್ತಾರೆ ಜೊತೆಗೆ ಅವುಗಳನ್ನು ಕಾಲಿನಿಂದ ಒದೆಯಬಾರದು, ತಗುಲಿಸಬಾರದು ಎಂಬ ಪೂಜ್ಯ ಭಾವನೆಗಳಿವೆ.

**೩ : ೧೦ : ೨ : ೪ ಪಶುಪಾಲನೆ :** ಪಶುಪಾಲನೆಯೆಂದರೆ ಹೈನುಗಾರಿಯೆಂದೆಲ್ಲಾ ತಮ್ಮ ಕೃಷಿ ಕಾರ್ಯಗಳಿಗೆ ಅನುಕೂಲವಾಗುವಂತೆ ದನಕರುಗಳನ್ನು, ಹಸುಗಳನ್ನು ಸಾಕುತ್ತಾರೆ ಜೊತೆಗೆ ಕೋಳಿ, ಮೇಕೆಗಳನ್ನು ಸಾಕುತ್ತಾರೆ. ಕೆಲವರು ತಮ್ಮ ದೈನಂದಿನ ಹಾಲು, ಮೊಸರು, ಮಜ್ಜಿಗೆ ಸಹಾಯಕವಾಗುವಂತೆ ಹಸುಗಳನ್ನು ಸಾಕುವರು.

**೩ : ೧೦ : ೨ : ೫ ಆಹಾರ ಸಂಗ್ರಹಣೆ :** ಇವರು ಬೆಳೆಯುವ ಆಹಾರವನ್ನು ಸಂಗ್ರಹಿಸಲು ತಮ್ಮ ಮಧ್ಯೆ ಸಿಗುವ ಬಿದಿರಿನಿಂದ ಮಾಡಿದ ಕುಮ್ಮೆ ಇವುಗಳನ್ನು ಬಿದಿರಿನಿಂದ ಹೆಣೆದು ಬುಟ್ಟಿಯಾಕಾರದಲ್ಲಿ ಮಾಡಿಕೊಂಡಿದ್ದು ಅದರಲ್ಲಿ ಭತ್ತವನ್ನು ತುಂಬಿಕೊಳ್ಳುತ್ತಾರೆ. ಮರದ ಪತಾಯಿಗಳು, ಮಡಿಕೆಗಳಲ್ಲಿ ತಾವು ಬೆಳೆದ ಆಹಾರಗಳನ್ನು ಸಂಗ್ರಹಿಸುತ್ತಾರೆ. ಮುಖ್ಯವಾಗಿ ಇವರು ಬೆಳೆಯುವ ಆಹಾರ ಬೆಳೆಗಳು ಸಂಗ್ರಹಿಸುವಷ್ಟು ಇರುವುದಿಲ್ಲ. ತಾವು ಬೆಳೆದ ಆಹಾರ ಬೆಳೆಗಳು ಮೂರು ನಾಲ್ಕು ತಿಂಗಳಿನಲ್ಲಿ ಮುಗಿದು ಹೋಗುತ್ತದೆ. ನಂತರ ಕೂಲಿ ಕೆಲಸ ಮಾಡುತ್ತಾ ಜೀವನ ನಡೆಸುತ್ತಿದ್ದಾರೆ.

**೩ : ೧೦ : ೨ : ೬ ಪ್ರಾಣಿಗಳ ಹಾವಳಿ :** ತಮ್ಮ ಬೆಳೆಗಳಿಗೆ ಕಾಡು ಪ್ರಾಣಿಗಳ ಹಾವಳಿಯು ಅಧಿಕವಾಗಿರುತ್ತದೆ. ಈ ಸಮುದಾಯವು ಬೇಸಾಯಕ್ಕೆ ಅರಣ್ಯದ ಭೂ ಪ್ರದೇಶವನ್ನೇ ನಂಬಿರುವುದರಿಂದ ಬೆಳೆಯನ್ನು ಬೆಳೆಯುವಾಗ ಅನೇಕ ತೊಂದರೆಗಳು ಬರುತ್ತವೆ. ಬಿತ್ತನೆ ಕಾರ್ಯದ ಸಮಯದಲ್ಲಿ ಕಾಡು-ಕೋಳಿಗಳು ಬಂದು ಚೆಲ್ಲಿರುವ ಭತ್ತ, ರಾಗಿಯನ್ನು ಕೆದಕಿ ತಿಂದು ಹೋಗುತ್ತವೆ. ಬೆಳೆದ ಬೆಳೆಗೆ ಆನೆ, ಜಿಂಕೆ, ಕಡವೆ ಮುಂತಾದವು ಬಂದು ತಿಂದು ಮತ್ತು ತುಳಿದು ನಾಶಪಡಿಸುತ್ತವೆ. ಬೆಳೆಯ ರಕ್ಷಣೆಗಾಗಿ ಕಾವಲು ಕಾಯಬೇಕಾಗುತ್ತದೆ. ಎತ್ತರವಾದ ಮರಗಳ ಮೇಲೆ ಅಟ್ಟವನ್ನು ಕಟ್ಟಿ ಗುಡಿಸಲು ನಿರ್ಮಿಸಿಕೊಳ್ಳುತ್ತಾರೆ. ದೂರದಲ್ಲೇ ಬರುವ ಪ್ರಾಣಿಗಳನ್ನು ಗಮನಿಸಿ ಹತ್ತಿರ ಬಂದಂತೆ ಮದ್ದುಗಳನ್ನು ಸಿಡಿಸಿ ಶಬ್ದಗಳನ್ನು ಮಾಡುವುದರ ಮೂಲಕ ಅವುಗಳನ್ನು ಹಿಂದಕ್ಕೆ ಓಡಿಸುವರು. ಮತ್ತೆ ಕೆಲವು ಸಾರಿ ಅತಿಯಾದ ಮಳೆಯಿಂದಲೂ ಬೆಳೆದ ಬೆಳೆಗಳು ನಾಶವಾಗುತ್ತವೆ ಮತ್ತು ಸಕಾಲಕ್ಕೆ ಮಳೆಯಾಗದೆ ತೊಂದರೆ, ಒಟ್ಟಾರೆ ಬೆಳೆದ ಬೆಳೆಯನ್ನು ತಮ್ಮದಾಗಿಸಿಕೊಳ್ಳಲು ಹಲವು ರೀತಿಯ ಸಂಕಷ್ಟಗಳಿಗೆ ಗುರಿಯಾಗುತ್ತಾರೆ.

ಈ ಸಮುದಾಯದ ವ್ಯವಸಾಯ ಕ್ರಮ ತನ್ನದೆ ಆದ ವಿಶಿಷ್ಟತೆಯಿಂದ ಕೂಡಿದೆ. ಈ ಸಮುದಾಯದ ಬೇಸಾಯ ಕ್ರಮವು ಇಂದು ಹಲವು ನ್ಯೂನತೆಗಳಿಂದ ಕೂಡಿದೆ. ಇದರಲ್ಲಿ ಶೇ ೨೦% ರಷ್ಟು ಜನರು ಸರ್ಕಾರದಿಂದ ಮಂಜೂರಾಗಿರುವ ಭೂಮಿಯನ್ನು ಹೊಂದಿದ್ದಾರೆ. ಮತ್ತೆ ಕೆಲವರು ಅರಣ್ಯಭಾಗದ ಭೂಮಿಯಲ್ಲಿ ಬೇಸಾಯ ಮಾಡುತ್ತಿದ್ದಾರೆ. ಇದರಿಂದ ತುಂಬಾ ತೊಂದರೆ ಅನುಭವಿಸುತ್ತಿದ್ದಾರೆ. ಭೂಮಿ ಇಲ್ಲದವರು ಕೂಲಿ ಕೆಲಸವನ್ನು ಮಾಡುತ್ತಾ ಜೀವನ ನಡೆಸುತ್ತಿದ್ದಾರೆ. ಪಕ್ಕದ ಕೇರಳ ರಾಜ್ಯದ ಭೂಮಾಲೀಕರ ತೋಟಗಳಲ್ಲಿ ಕಾವಲುಗಾರರಾಗಿ ಮತ್ತು ಅಡಿಕೆ ಸುಲಿಯುವ ಕೆಲಸಗಳಲ್ಲಿ ದಿನಗೂಲಿ ಮಾಡುತ್ತಾ ಮತ್ತೆ ಕೆಲವರು ದನಗಾಯಿಗಳಾಗಿ ನಿತ್ಯ ಜೀವನವನ್ನು ಸಂಕಷ್ಟದೊಂದಿಗೆ ನಡೆಸುತ್ತಿರುವುದು ಕಂಡುಬರುತ್ತದೆ.

**ಅಡಿ ಟಿಪ್ಪಣಿಗಳು**

೧ ಹನುಮಂತರಾವ್ : ಕುಟುಂಬ ಜೀವನ : ಪ್ರಸಾರಾಂಗ : ಮೈಸೂರು ವಿಶ್ವವಿದ್ಯಾಲಯ : ಮೈಸೂರು : ೧೯೮೦.

೨ ಕರಿಶೆಟ್ಟಿರುದ್ರಪ್ಪ : ಮ್ಯಾಸನಾಯಕರು ಒಂದು ಜನಾಂಗಿಕ ಅಧ್ಯಯನ : ಕನ್ನಡ ಸಾಹಿತ್ಯ ಪರಿಷತ್ತು : ಬೆಂಗಳೂರು : ೧೯೯೫.

೩ ರಹಮತ್‌ತರೀಕೆರೆ : ಧರ್ಮ : ಕನ್ನಡ ವಿಶ್ವಕೋಶ-೩ : ಪ್ರಸಾರಾಂಗ : ಕನ್ನಡ ವಿಶ್ವವಿದ್ಯಾಲಯ : ಹಂಪಿ : ೨೦೦೦.

೪ ಜಾರ್ವಿನ್ ಡಿ.ಸಿ. : ಫೋಕ್ ಮೆಡಿಸಿನ್.

೫ ಕೇಶವನ್ ಪ್ರಸಾದ್ : ಕೊಳ್ಳೆಗಾಲಿನ ಸುತ್ತಲಿನ ಕಪ್ಪೆ ಹೊಲೆಯರ ಊಟೋಪಚಾರ ಒಂದು ಅಧ್ಯಯನ : ಮೈಸೂರು ವಿಶ್ವವಿದ್ಯಾಲಯಕ್ಕೆ ಒಪ್ಪಿಸಿದ ಪಿ.ಎಚ್.ಡಿ. ಮಹಾಪ್ರಬಂಧ : (ಅಪ್ರಕಟಿತ) : ೧೯೯೬.

೬ ಚನ್ನಬಸಪ್ಪ ಗೊ.ರು. ಗ್ರಾಮಜ್ಯೋತಿ : ಕೆ.ಆರ್. ಲಿಂಗಪ್ಪನವರ ಅಭಿನಂದನ ಸಮಿತಿ : ಬೆಂಗಳೂರು : ೧೯೭೯.

೭ ವಿರೂಪಾಕ್ಷಿ : ಮಧ್ಯಕಾಲೀನ ಕನ್ನಡ ಕಾವ್ಯಗಳಲ್ಲಿ ನಿರೂಪಿತವಾಗಿರುವ ಬೇಟೆ ಮತ್ತು ಬೇಡರ ಸಂದರ್ಭಗಳು : ಒಂದು ಚಾರಿತ್ರಿಕ ಅಧ್ಯಯನ : ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಿರುವ ಪಿ.ಎಚ್.ಡಿ. ಮಹಾಪ್ರಬಂಧ (ಅಪ್ರಕಟಿತ) : ೨೦೦೦.

ಅಧ್ಯಾಯ - ೪

# ಸಂಪ್ರದಾಯ ಮತ್ತು ನಂಬಿಕೆಗಳು

## ಪ್ರವೇಶ

೪ : ೧ ಜನನ ಸಂಸ್ಕಾರ

೪ : ೨ ಹಾಲು ಕದುರು ಶಾಸ್ತ್ರ (ನಾಮಕರಣ)

೪ : ೩ ಕೂದಲು ತೆಗೆಯುವ ಶಾಸ್ತ್ರ

೪ : ೪ ಋತುಮತಿ ಶಾಸ್ತ್ರ

೪ : ೫ ಮದುವೆ

೪ : ೬ ಶವ ಸಂಸ್ಕಾರ

೪ : ೭ ವಿಧಿ ನಿಷೇಧಗಳು

## ಪ್ರವೇಶ

ಸಂಪ್ರದಾಯ ಮತ್ತು ನಂಬಿಕೆಗಳು ಸಮುದಾಯ ಜೀವನದ ಅವಿಭಾಜ್ಯ ಅಂಗಗಳಾಗಿವೆ. ಪ್ರಾಚೀನ ಕಾಲದ ಸಾಮಾಜಿಕ ಜೀವನ ಅನೇಕ ಬಗೆಯ ಸಂಪ್ರದಾಯ ಮತ್ತು ನಂಬಿಕೆಗಳನ್ನು ರೂಢಿಸಿಕೊಂಡು ಬಂದಿದೆ. ಇವು ಆ ಕಾಲದ ಜೀವನ ಪದ್ಧತಿಯ ಸಂವಿಧಾನವೆಂಬಂತೆ ಉಳಿದುಕೊಂಡು ಬಂದಿರುವುದು ಅವುಗಳ ಮಹತ್ವವನ್ನು ತೋರಿಸುತ್ತದೆ. ಸಮುದಾಯಗಳು ತಮ್ಮ ಸಂಸ್ಕೃತಿಯಲ್ಲಿ ಅಳವಡಿಸಿಕೊಂಡ ಈ ಬಗೆಯ ನಂಬಿಕೆಗಳು ಒಂದರ್ಥದಲ್ಲಿ ಜೀವನದ ಕೆಲವು ಸಂಗತಿಗಳನ್ನು ನಿರ್ಬಂಧಿಸುತ್ತಿದ್ದವು. ಆ ಮೂಲಕ ಜೀವನದ ಅರ್ಥವಂತಿಕೆಗೆ ಕಾರಣವಾಗುತ್ತಿದ್ದ ವೆಂಬುದನ್ನು ಗಮನಿಸಬೇಕಾಗುತ್ತದೆ. ಪ್ರಕೃತಿ ಜೀವನದಲ್ಲಿ ಸಂಪ್ರದಾಯ, ನಂಬಿಕೆಗಳು ಗೊಡ್ಡು ಮೂಢನಂಬಿಕೆಗಳಾಗಿ ತೋರಿದರೂ, ಅಂದಿನ ಗ್ರಾಮ ಸಮಾಜಗಳು ಅವುಗಳಿಗೆ ಬದ್ಧವಾಗಿದ್ದವು. ಆಚರಣಾತ್ಮಕ ನೆಲೆಯಲ್ಲಿ ಹುಟ್ಟಿಕೊಂಡ ಸಂಪ್ರದಾಯಗಳು ಸಂಸ್ಕೃತಿಯ ವಿಕಾಸದಲ್ಲಿ ಮಹತ್ತರವಾದ ಪಾತ್ರವನ್ನು ವಹಿಸಿವೆಯೆನ್ನಬಹುದು.

''ಸಂಪ್ರದಾಯಗಳೆಂದರೆ ತಲೆತಲಾಂತರದಿಂದ ಸಾಗಿ ಬಂದ ನಡೆವಳಿಕೆಗಳು''[1] ಎಂದು ಶಂಬಾಜೋಶಿಯವರು ಅಭಿಪ್ರಾಯ ಪಡುತ್ತಾರೆ. ಅಂದರೆ ಪರಂಪರಾಗತ ಜೀವನದಲ್ಲಿ ಮಾನವ ಚಟುವಟಿಕೆಗಳೇ ಈ ಬಗೆಯ ಧೋರಣೆಗಳಿಗೆ ಎಡೆಮಾಡಿಕೊಟ್ಟಿರುತ್ತವೆ. ಸಾಮಾಜಿಕ ವರ್ಗ ಪರಂಪರಾನುಗತವಾಗಿ ಅನುಸರಿಸುತ್ತಾ ಬಂದಿರುವ ಕ್ರಿಯಾ ವಿನ್ಯಾಸವನ್ನು ಸಂಪ್ರದಾಯವೆಂದು ಕರೆಯಬಹುದು. ಸಂಪ್ರದಾಯವೆನ್ನುವುದು ಯಾವಾಗಲೂ ವೈಯಕ್ತಿಕವಾಗಿರುವುದಿಲ್ಲ. ಬದಲಾಗಿ ಅದು ಸಾಮೂಹಿಕವಾಗಿರುತ್ತದೆ. ''ಜನರು ಮಾಡುವುದು ಏನು ಎಂಬುದನ್ನು ತಿಳಿಸುವುದೇ ಸಂಪ್ರದಾಯ. ಅದನ್ನು ಏಕೆ ಮಾಡಬೇಕೆಂದು ಅವರು ತಿಳಿದಿದ್ದಾರೋ ಅದೇ ನಂಬಿಕೆ''[2] Traditional pattern of human action accepted by a group. Individual habit is included. custom is what folks do; belief is why they think they do it.

''ಒಂದು ಜನಾಂಗ ಸಂಸ್ಕಾರ ವಿಶೇಷವಾದ ಭದ್ರ ಬುನಾದಿಯ ಮೇಲೆ ರೂಪಿತಗೊಂಡು ಪರಂಪರಾಗತವಾಗಿ ತಲೆಮಾರಿನಿಂದ ತಲೆಮಾರಿಗೆ ಆ ಸಮಾಜದಲ್ಲಿ ಮುಂದುವರಿಯುವ ಉಪಾಸನೆ ಪದ್ಧತಿಗಳು, ಜನತೆಯ ಮನೋಭಾವ,ರೂಢಿ ಪದ್ಧತಿಗಳೇ ಸಂಪ್ರದಾಯ. ಮನುಕುಲದ ಶ್ರೇಯಸ್ಸಿಗಾಗಿ ಅತ್ಯವಶ್ಯವೆಂದು ಎಣಿಕೆಗೊಂಡಿರುವ ನಂಬಿಕೆಗಳೇ ಸಂಪ್ರದಾಯಗಳಾಗಿ, ವಿಧಿ-ನಿಷೇಧಗಳಾಗಿ, ಉಪಾಸನೆಗಳಾಗಿ ಸಾಕಾರತೆಯನ್ನು ಪಡೆಯುತ್ತವೆ''[3].

Newway ಅವರ ಪ್ರಕಾರ "Tradition means system of myth, rituals, feasts, sacred customs. games, songs, tales, existant is such prosume that valums would be required to contain the lore of each saparate tribe"

ಹೀಗೆ ಪ್ರತಿಯೊಂದು ಬುಡಕಟ್ಟು ಸಮುದಾಯಗಳಿಗೆ ತಮ್ಮದೇ ಆದಂತಹ ವೈಶಿಷ್ಟ್ಯಪೂರ್ಣ ಸಂಪ್ರದಾಯ, ನಂಬಿಕೆಗಳಿರುತ್ತವೆ. ಇದು ಅವರು ವಾಸಿಸುವ ಭೌಗೋಳಿಕ ಪರಿಸರ, ಸಾಂಸ್ಕೃತಿಕ ಪರಿಸರವನ್ನು ಅವಲಂಬಿಸಿರುತ್ತದೆ.

ಪ್ರತಿಯೊಂದು ಬುಡಕಟ್ಟು ಸಮುದಾಯ ತಮ್ಮ ಜೀವನದ ನಾನಾ ಆಚರಣೆಗಳಿಂದಾಗಿ ಭಿನ್ನ ಮಾದರಿಯ ನಂಬಿಕೆ, ವಿಧಿ ನಿಷೇಧಗಳನ್ನು ಹೊಂದಿರುತ್ತವೆ.

'ಒಡಿಗ' ಬುಡಕಟ್ಟು ಸಮುದಾಯವೂ ಕೂಡ ತಮ್ಮ ಸಂಸ್ಕೃತಿಗೆ ಅನುಗುಣವಾಗಿ ಅನೇಕ ಸಂಪ್ರದಾಯ, ವಿಧಿ ನಿಷೇಧಗಳನ್ನು ರೂಢಿಸಿಕೊಂಡಿದೆ. ಮುಖ್ಯವಾಗಿ ಈ ಸಮುದಾಯವು ಸಂಖ್ಯೆಯ ದೃಷ್ಟಿಯಿಂದ ಕಡಿಮೆಯಿದೆ. ಆದರೂ ಇವರು ತಮ್ಮ ಸೀಮಿತ ವಲಯದಲ್ಲಿಯೇ ಹಲವು ವೈಶಿಷ್ಟ್ಯಪೂರ್ಣವಾದಂತಹ ಆಚರಣಾ ನೆಲೆಗಳನ್ನು ಹೊಂದಿದ್ದಾರೆ. ಹುಟ್ಟಿನಿಂದ ಸಾವಿನವರೆಗೆ ಒಂದಲ್ಲ ಒಂದು ಬಗೆಯಲ್ಲಿ ಹಲವಾರು ಆಚರಣೆಗಳಿವೆ. ಅಂತಹ ಕೆಲವು ಸಂಪ್ರದಾಯ ಮತ್ತು ನಂಬಿಕೆಗಳನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

**೪ : ೧ ಜನನ ಸಂಸ್ಕಾರ**

ಬುಡಕಟ್ಟು ಸಮುದಾಯಗಳು ಸಾಮಾನ್ಯವಾಗಿ ಹೆರಿಗೆಯನ್ನು ಸೂತಕವೆಂದು ಭಾವಿಸುತ್ತವೆ. ಆ ಸಮುದಾಯಗಳು ಬರುವಂತಹ ಮಗುವನ್ನು ಸಂಭ್ರಮದಿಂದ ಸ್ವೀಕರಿಸುತ್ತವೆ. ಆದರೆ ಬಾಣಂತಿಯನ್ನು ಸೂತಕವೆಂದು ಬಗೆಯುವ ಸಂಪ್ರದಾಯ ಇವರಲ್ಲಿ ಬೆಳೆದು ಬಂದಿರುವುದು ಕಂಡುಬರುತ್ತದೆ. ತಾಯಿ ಮತ್ತು ಮಗುವನ್ನು ಪ್ರತ್ಯೇಕವಾದ ಗುಡಿಸಲುಗಳಲ್ಲಿ ಇಡಲಾಗುತ್ತದೆ.

ಒಡಿಗ ಸಮುದಾಯವೂ ಹೆರಿಗೆಯನ್ನು ಸೂತಕವೆಂದೇ ಭಾವಿಸುತ್ತದೆ. ಈ ಸಮುದಾಯದವರು ಹಿಂದೆ, ಹೆರಿಗೆಯ ಸಂಪ್ರದಾಯವನ್ನು ಬಹಳ ಕಟ್ಟುನಿಟ್ಟಿನ ಕ್ರಮಗಳಿಂದ ಪಾಲಿಸಿಕೊಂಡು ಬಂದಿದ್ದರು. ಬಾಣಂತಿಗೆ ಒಂದು ಪ್ರತ್ಯೇಕವಾದ ಗುಡಿಸಲನ್ನು ನಿರ್ಮಿಸಿಕೊಡುತ್ತಿದ್ದರು. ಅವಳ ಹೆರಿಗೆಯೂ ಆ ಗುಡಿಸಲಿನಲ್ಲಿಯೇ ನಡೆಯಬೇಕಿತ್ತು. ಇತರೆ ಬುಡಕಟ್ಟು ಸಮುದಾಯಗಳಲ್ಲಿ ರೂಢಿಯಲ್ಲಿರುವಂತೆ ಒಡಿಗರಲ್ಲಿಯೂ ಚೊಚ್ಚಲ ಹೆರಿಗೆಯನ್ನು ತವರುಮನೆಯವರೇ ನಿರ್ವಹಿಸುತ್ತಾರೆ. ಸಾಮಾನ್ಯವಾಗಿ ಐದು ಇಲ್ಲವೇ ಒಂಭತ್ತನೇ ತಿಂಗಳಲ್ಲಿ ಗಂಡನ ಮನೆಯಿಂದ ಗರ್ಭಿಣಿ ಹೆಣ್ಣನ್ನು ತವರು ಮನೆಯವರು ಕರೆದುಕೊಂಡು ಹೋಗುವರು. ಕರೆದುಕೊಂಡು ಹೋಗುವಾಗ ಹೂವು, ಹಣ್ಣು, ಕುಪ್ಪಸ, ಬಳೆ, ಅರಿಶಿನ, ಕುಂಕುಮ ಮುಂತಾದ ಶುಭ ಸೂಚಕಗಳೊಂದಿಗೆ ಶಾಸ್ತ್ರವನ್ನು ನೆರವೇರಿಸಿ ಕರೆತರುತ್ತಾರೆ. ಒಡಿಗ ಸಮುದಾಯದಲ್ಲಿ 'ಒಸುಗೆ' ಹಾಕುವ ಪದ್ಧತಿಯು ಕಂಡು ಬರುವುದಿಲ್ಲ.

ಬಾಣಂತಿ ಮತ್ತು ಆಕೆಯ ಮಗುವಿನ ಹತ್ತಿರ ಪ್ರತ್ಯೇಕವಾದ ಗುಡಿಸಲಿನಲ್ಲಿ ಸೂಲಗಿತ್ತಿಯು ಇರುತ್ತಾಳೆ. ಸೂಲಗಿತ್ತಿಯು ಅದೇ ಸಮುದಾಯಕ್ಕೆ ಸೇರಿದವಳಾಗಿದ್ದು, ಮಗುವಿನ ಪೋಷಣೆ, ಬಾಣಂತಿಯ ಶುಶ್ರೂಷೆ ಕೆಲಸಗಳನ್ನು ನಿರ್ವಹಿಸುತ್ತಾಳೆ. ಸೂಲಗಿತ್ತಿಯ ಹೊರತಾಗಿ ಬಾಣಂತಿಯ ಗುಡಿಸಲಿಗೆ ಒಬ್ಬ ಅನುಭವಸ್ಥೆ ಹಿರಿಯ ಮಹಿಳೆಗೆ ಮಾತ್ರ ಪ್ರವೇಶವಿರುತ್ತದೆ. ಹೆರಿಗೆಯಾದ ಒಂಭತ್ತರಿಂದ ಹನ್ನೊಂದು ದಿವಸಗಳವರೆಗೆ ಅದೇ ಗುಡಿಸಲಿನಲ್ಲಿ ಬಾಣಂತಿಯು ಇರಬೇಕಾಗುತ್ತದೆ.

ಹೆರಿಗೆಯ ನಂತರ ಮಗುವಿನ ಹೊಕ್ಕಳು (ಕರುಳು)ಬಳ್ಳಿಯನ್ನು ಕತ್ತರಿಸಿ, ಅದನ್ನು ಹಿತ್ತಲಿನಲ್ಲಿ ಒಂದು ಹಳ್ಳವನ್ನು ತೆಗೆದು ಮುಚ್ಚುತ್ತಾರೆ. ಮಗು ಜನಿಸಿದ ಮೂರು ದಿವಸದ ನಂತರ ಸೂಜಿಯನ್ನು ಕಾಯಿಸಿ ಹೊಟ್ಟೆಯ ಕೆಳಭಾಗದಲ್ಲಿ ಬರೆಯನ್ನು ಹಾಕುವ ಪದ್ಧತಿ ಇವರಲ್ಲಿದೆ.

ಹೆರಿಗೆಯ ಸಂದರ್ಭದಲ್ಲಿ ತೊಂದರೆಯಾದಾಗ ''ಒಂದು ಕೋಳಿಯನ್ನು ಅಥವಾ ತೆಂಗಿನ ಕಾಯಿಯನ್ನು ತೆಗೆದುಕೊಂಡು ಗರ್ಭಿಣಿಯ ತಲೆಯ ಸುತ್ತ ಮೂರು ಬಾರಿ ನಿವಾಳಿಸಿ ತೆಗೆಯುವರು. ಕೋಳಿಯನ್ನು ನಿವಾಳಿಸುವಾಗ *ಆತ, ಭೂತ, ಚಾಡಿ-ಚಾಮುಂಡಿ, ಘೇಯಿ, ಪಿಶಾಚಿ, ಹಾದಿದೇವರು, ಬೀದಿದೇವರು, ಏನೇ ಹಿಡಿದಿದ್ದರೂ ಆ ತಲೆ ಬಿಟ್ಟು ಈ ತಲೆ ಸೇರು, ಆ ಮೈಬಿಟ್ಟು ಈ ಮೈ ಸೇರು, ಇದನ್ನು ನಿನಗೆ ಹದಿನಾರು ದಿನಕ್ಕೆ ಒಪ್ಪಿಸುತ್ತೇವೆ*'' ಎಂದು ಹೇಳುತ್ತಾರೆ. ತೆಂಗಿನಕಾಯಿಯನ್ನೂ ಈ ಬಗೆಯಲ್ಲಿ ನಿವಾಳಿಸಿ ತೆಗೆಯುತ್ತಾರೆ. ಈ ಪದ್ಧತಿಯಿಂದ ಹೆರಿಗೆಯು ಸುಸೂತ್ರವಾಗಿ ನಡೆಯುತ್ತದೆಂಬುದನ್ನು ಒಡಿಗರು ಗಾಢವಾಗಿ ನಂಬಿದ್ದಾರೆ. ಹೆರಿಗೆಯು ಸುಸೂತ್ರವಾಗಿ ಆದ ಮೇಲೆ ಕೋಳಿ ಅಥವಾ ತೆಂಗಿನಕಾಯಿಯನ್ನು ಅಡುಗೆ ಮಾಡಿ ನಾಲ್ಕಾರು ಜನಕ್ಕೆ ಉಣಬಡಿಸುತ್ತಾರೆ. ಈ ಊಟ ಹೆರಿಗೆಯಾದ ದಿನದ ಸಂಜೆ ಅಥವಾ ಮಗುವಿನ ನಾಮಕರಣದ ದಿವಸ ಹಾಕುತ್ತಾರೆ. ಇದೊಂದು ವಿಶೇಷ ಸಂಪ್ರದಾಯ ಒಡಿಗರಲ್ಲಿದೆಯೆಂಬುದು ಗಮನಾರ್ಹ.

### ೪ : ೧ : ೧ ಬಾಣಂತಿಯ ಆರೈಕೆ

ಹೆರಿಗೆಯಾದ ಮೂರುದಿನಗಳ ನಂತರ ಬಾಣಂತಿ ಸ್ತ್ರೀಗೆ ಸ್ನಾನ ಮಾಡಿಸುತ್ತಾರೆ. ನೆಲದ ಮೇಲೆ ಭತ್ತದ ಹುಲ್ಲನ್ನು ಹಾಸಿ ಅದರ ಮೇಲೆ ಚಾಪೆ ಮತ್ತು ಹಳೆಯ ಬಟ್ಟೆಗಳನ್ನು ಹಾಕಿ ಅವಳನ್ನು ಮಲಗಿಸುತ್ತಾರೆ. ಬಾಣಂತಿಯು ತನ್ನ ಗುಡಿಸಲಿನಿಂದ ಒಬ್ಬೊಂಟಿಯಾಗಿ ಹೊರ ಹೋಗುವಂತಿಲ್ಲ. ಜೊತೆಗೆ ಯಾರನ್ನಾದರೂ ಕರೆದುಕೊಂಡು ಹೋಗಬೇಕೆಂಬುದು ಕಡ್ಡಾಯ. ಬಾಣಂತಿಯ ಆಹಾರ ಬಹಳ ಸರಳವಾಗಿರುತ್ತದೆ. ಅನ್ನ, ತಿಳಿಯಾದ ಸಾರು, ಅಕ್ಕಿಯ ಗಂಜಿಯನ್ನು ಮಾತ್ರ ಮೂರು-ನಾಲ್ಕು ತಿಂಗಳವರೆಗೆ ನೀಡುತ್ತಾರೆ. ಅವಳಿಗೆ ಗಂಡು ಅಥವಾ ಹೆಣ್ಣು ಯಾವುದೇ ಮಗು ಜನಿಸಿದರೂ ಈ ಆಹಾರಪದ್ಧತಿ ಸಾಮಾನ್ಯವೇ ಆಗಿರುತ್ತದೆ.

### ೪ : ೧ : ೨ ಮಗುವಿನ ಆರೈಕೆ

ಒಡಿಗರು ಮಗು ಜನಿಸಿದ ಮೂರು ದಿವಸಗಳ ನಂತರ ಸ್ನಾನ ಮಾಡಿಸುತ್ತಾರೆ. ಮಗುವಿನ ಮೈಗೆಲ್ಲಾ ಎಣ್ಣೆ ಹಚ್ಚಿ ನಿಧಾನವಾಗಿ ತಿಕ್ಕುವರು. ಸೂಲಗಿತ್ತಿಯು ಮಗುವನ್ನು ತನ್ನೆರೆಡು ಕಾಲುಗಳ ಮೇಲೆ ಬೋರಲಾಗಿ ಮಲಗಿಸಿಕೊಂಡು ತುಸು ಬೆಚ್ಚಗಿನ ನೀರನ್ನು ಎರೆಯುತ್ತಾಳೆ. ಸ್ನಾನದ ಬಳಿಕ ಮಗುವಿನ ಮೈ, ಕೈಗೆ ಸಾಂಬ್ರಾಣಿಯ ಹೊಗೆಯನ್ನು ಕೊಡುವರು. ನಂತರ ಅಂಗೈ, ಅಂಗಾಲು, ಕಣ್ಣು ಉಬ್ಬು ಭಾಗಕ್ಕೆ ಕಾಡಿಗೆ ಹಚ್ಚುವರು ಹಾಗೂ ಕೆನ್ನೆಗೆ ದೃಷ್ಟಿ ಬೊಟ್ಟು ಇಡುವರು.

ಐದರಿಂದ ಆರು ತಿಂಗಳವರೆಗೆ ತಾಯಿಯ ಎದೆಹಾಲು ಮಗುವಿನ ಆಹಾರವಾಗಿರುತ್ತದೆ. ನಂತರ ಅನ್ನ ಇತ್ಯಾದಿ ಸರಳ ಲಘುವಾದ ಆಹಾರವನ್ನು ನೀಡುತ್ತಾರೆ. ಕೊಂಚ ಬಿಸಿಯಾದ ನೀರನ್ನು ಕುಡಿಸುವರು.

### ೪ : ೧ : ೩ ನಿಷೇಧಗಳು

ಈ ಸಮುದಾಯವು ಹೆರಿಗೆಯನ್ನು ಸೂತಕವೆಂದು ಭಾವಿಸುವುದರಿಂದ, ಹದಿನಾರು ದಿನಗಳವರೆಗೆ ತಮ್ಮ ಹತ್ತಿರದ ಸಂಬಂಧಿಕರನ್ನು ಹೊರೆತುಪಡಿಸಿ, ಬೇರೆ ಯಾರನ್ನು ಮನೆಗೆ ಬರಗೊಡುವುದಿಲ್ಲ. ಅಲ್ಲದೇ ದೇವಸ್ಥಾನ, ಪೂಜೆ ಮುಂತಾದ ಶುಭಕಾರ್ಯಗಳಿಗೆ ಸೂತಕವಿರುವ ಬಾಣಂತಿಯ ಮನೆಯವರು ಹೋಗುವಂತಿಲ್ಲ.

ಹೆರಿಗೆಯಾದ ಹದಿನಾರು ದಿನಗಳಲ್ಲಿ ಈ ಸೂತಕವನ್ನು ಕಳೆಯುತ್ತಾರೆ. ನೆಲಗಳನ್ನು ಸಾರಿಸಿ, ಗೋಮೂತ್ರ ಸಿಂಪಡಿಸಿ, ಸರಳವಾದ ಪೂಜೆಯೊಂದಿಗೆ ತಾಯಿ ಮಗುವನ್ನು ಪ್ರತ್ಯೇಕ ಗುಡಿಸಲಿನಿಂದ ಮನೆಗೆ ಕರೆದುಕೊಳ್ಳುತ್ತಾರೆ. ಮನೆಯನ್ನು ಪ್ರವೇಶಿಸುವ ಬಾಣಂತಿಯು ಸೂರ್ಯನಿಗೆ ಎದುರಾಗಿ ಬರಬಾರದು. ಆದ್ದರಿಂದ ಮನೆಯ ಹಿತ್ತಲ ಬಾಗಿಲಿನ ಪಶ್ಚಿಮ ದಿಕ್ಕಿನಿಂದ ಮನೆಯನ್ನು ಪ್ರವೇಶಿಸುತ್ತಾಳೆ.

ಆಧುನಿಕತೆಯ ಪ್ರಭಾವದಿಂದಾಗಿ ಒಡಿಗ ಸಮುದಾಯದ ಬಾಣಂತಿಯ ಕೆಲವು ಆಚರಣಾ ನಿಯಮಗಳು ಬದಲಾವಣೆಗೊಳ್ಳುತ್ತಿರುವುದು ಕಂಡುಬರುತ್ತಿದೆ. ಬಾಣಂತಿಗೆ ಈಗ ಪ್ರತ್ಯೇಕ ಗುಡಿಸಲು ಹಾಕುವ ಬದಲಾಗಿ, ತಮ್ಮ ಮನೆಯ ಒಂದು ಕೊಠಡಿಯಲ್ಲಿ ಇರಿಸುತ್ತಾರೆ. ಅಲ್ಲದೇ ಆಹಾರನಿಯಮದಲ್ಲಿಯೂ ಕೆಲವು ಬದಲಾವಣೆಗಳಾಗುತ್ತಿವೆ. ಬಾಣಂತಿಯ ಹೆರಿಗೆ ಸೂತಕ ಕಳೆಯಲು 'ಗೋಮೂತ್ರ' ಸಿಂಪಡಿಸುವುದು ಬಹುಶಃ ಆರ್ಯರ ಪೂಜಾ ಪದ್ಧತಿ. ಆದರೆ ಬುಡಕಟ್ಟು ಸಮುದಾಯವಾದ ಒಡಿಗರು ಇದನ್ನು ಇಂದು ಪಾಲಿಸುತ್ತಿದ್ದಾರೆ. ಇದು ಆಧುನಿಕತೆಯ ಪ್ರಭಾವದಿಂದ ಆಗಿರಬಹುದು. ಅಲ್ಲದೇ ಮಗುವಿಗೆ ಸೂಜಿಯಿಂದ ಬರೆ ಎಳೆಯುವುದು ಕಡಿಮೆಯಾಗುತ್ತಿದೆ. ಅನಕ್ಷರಸ್ಥ ಹಾಗೂ ಇಂದಿಗೂ ಕಾಡಿನಲ್ಲಿರುವ ಒಡಿಗ ಕುಟುಂಬಗಳು ಸಂಪ್ರದಾಯವನ್ನು ಬಿಗಿಯಾಗಿ ಪಾಲಿಸುತ್ತಿವೆ. ನಾಗರಿಕ ಸಮಾಜದ ಸೋಂಕನ್ನು ಪಡೆದ ಗ್ರಾಮಜೀವನದ ಒಡಿಗರಲ್ಲಿ ಮೂಲ ಸಂಪ್ರದಾಯ ಮತ್ತು ನಂಬಿಕೆಗಳು ಸಡಿಲವಾಗುತ್ತಿರುವುದನ್ನು ಗುರುತಿಸಬಹುದು.

### ೪ : ೨ ಹಾಲು ಕದುರು ಶಾಸ್ತ್ರ (ನಾಮಕರಣ)

ಮಗು ಜನಿಸಿದ ಹದಿನಾರು ದಿನದಲ್ಲಿ ಅಥವಾ ಐದು ತಿಂಗಳು ಕಳೆದ ಮೇಲೆ ನಾಮಕರಣ ಅಥವಾ ಹೆಸರಿಡುವ ಕಾರ್ಯ ನಡೆಯುತ್ತದೆ. ಒಡಿಗರು ಇದಕ್ಕೆ ''ಹಾಲು ಕದುರು ಶಾಸ್ತ್ರ''ವೆಂದು ಕರೆಯುವರು. ನಾಮಕರಣದ ದಿವಸ ಮನೆಯನ್ನು ಸ್ವಚ್ಛಗೊಳಿಸಿ, ಶೃಂಗರಿಸುತ್ತಾರೆ. ಮನೆಯ ಮುಂದೆ ಚಪ್ಪರ ಹಾಕಿ, ತೆಂಗಿನ ಗರಿ ಕಟ್ಟಿ, ಚಪ್ಪರದ ಮೇಲೆ ನೇರಳೆ ಸೊಪ್ಪನ್ನು ಹಾಕಬೇಕೆಂಬ ನಿಯಮ ಈ ಸಮುದಾಯದಲ್ಲಿದೆ. ಮನೆಯ ಒಳಾವರಣ ಮತ್ತು ಹೊರಾವರಣದಲ್ಲಿ ಗೋಮೂತ್ರವನ್ನು ಸಿಂಪಡಿಸುತ್ತಾರೆ. ಹೊಸ ಬಟ್ಟೆಯನ್ನು ತಾಯಿ-ಮಗು ಧರಿಸಿರುತ್ತಾರೆ. ಸಾಮಾನ್ಯವಾಗಿ ಗಂಡನ ಮನೆಯವರು ಬಟ್ಟೆಯನ್ನು ತಂದಿರುತ್ತಾರೆ. ಕುಲದೈವಕ್ಕೆ ಪೂಜೆಯನ್ನು ಸಲ್ಲಿಸುವ ಮೂಲಕ ನಾಮಕರಣವು ಆರಂಭವಾಗುತ್ತದೆ. ತಾಯಿ-ಮಗುವನ್ನು ಕುಳ್ಳಿರಿಸಿ ಮುತ್ತೈದೆಯರು ಆರತಿ ಮಾಡುತ್ತಾರೆ. ಮಗುವಿಗೆ ಸೂಲಗಿತ್ತಿಯು ಆರತಿ ಎತ್ತುತ್ತಾಳೆ. ತದನಂತರ ಮಗುವಿನ ತಂದೆಯ ಕಡೆಯವರ ಅಪೇಕ್ಷೆಯನ್ನು ಮನ್ನಿಸಿ ಸೂಲಗಿತ್ತಿಯು ಮಗುವಿನ

ಕಿವಿಯಲ್ಲಿ ಮೂರು ಬಾರಿ ಹೆಸರನ್ನು ಕೂಗಿ ಕರೆಯುತ್ತಾಳೆ. ನಾಮಕರಣದ ದಿನ ಬಂಧುಗಳೆಲ್ಲರೂ ಸೇರುತ್ತಾರೆ. ಸಿಹಿಯೂಟ ಅಂದು ನಡೆಯುತ್ತದೆ.

ಗಂಡು ಮಗುವಾದರೆ ಬೊಮ್ಮ, ತಿಮ್ಮ, ದೇವೇಶ, ಮಲ್ಲ, ನಂಜ, ಜವರ ಎಂದೂ ಹೆಣ್ಣು ಮಗುವಾದರೆ ದೇವಮ್ಮ, ದೇವೀರಿ, ನಂಜಿ, ಮಲ್ಲಮ್ಮ ಎಂಬ ವ್ಯಕ್ತಿನಾಮಗಳನ್ನು ಕರೆಯುತ್ತಾರೆ. ಒಡಿಗರಲ್ಲಿ ನಾಮಕರಣ ಕಾರ್ಯಕ್ಕೆ ಪುರೋಹಿತರನ್ನು ಕರೆಯುವ ಪದ್ಧತಿಯಿಲ್ಲ. ಅಲ್ಲದೇ ಮಗುವಿನ ಜನನದ ಕಾಲ, ನಕ್ಷತ್ರ, ರಾಶಿ, ಜಾತಕ ಮುಂತಾದ ಜ್ಯೋತಿಷ್ಯ ವಿವರಗಳನ್ನು ಕೇಳುವ ಪದ್ಧತಿಯೂ ಕಂಡುಬರುವುದಿಲ್ಲ. ಈ ದೃಷ್ಟಿಯಿಂದ ಇವರು ಜ್ಯೋತಿಷ್ಯದಂತಹ ನಂಬಿಕೆಯಿಂದ ದೂರವೇ ಇದ್ದಾರೆ. ಆದರೆ ಇತ್ತೀಚೆಗೆ ಈ ನಿಯಮದಿಂದ ಬದಲಾವಣೆಗೆ ಒಳಗಾಗಿರುವುದು ಕಂಡುಬರುತ್ತದೆ. ಅಂತೆಯೇ ಮಗುವಿನ ಹೆಸರುಗಳಲ್ಲಿ ಸಾಂಪ್ರದಾಯಿಕ ದೈವಗಳ ಹೆಸರಿಗೆ ಬದಲಾಗಿ ಕಲ್ಪನಾ, ಮಾನಸ, ರಮ್ಯ, ಭವ್ಯ, ರಾಧ, ರಾಜ, ಕುಮಾರ, ರಾಕೇಶ ಮುಂತಾದ ಭಾವನಾಮ ಮತ್ತು ಆಧುನಿಕ ವ್ಯಕ್ತಿನಾಮಗಳು ಕಂಡುಬರುತ್ತಿವೆ.

ನಾಮಕರಣವಾದ ನಂತರದ ದಿನಗಳಲ್ಲಿ ಗಂಡನ ಮನೆಯವರು ಕರೆಯಲು ಬರುತ್ತಾರೆ. ಗಂಡನ ಮನೆಗೆ ಹೊರಡುವಾಗ ಊರಿನ ಹೊರಗೆ ಇರುವ ಒಂದು ಎಕ್ಕೆಯ ಗಿಡ ಅಥವಾ ಯಾವುದಾದರೂ ಹಸಿರು ಮರಕ್ಕೆ ಅರಿಶಿಣ, ಕುಂಕುಮ, ಹೂವು, ಹಣ್ಣು, ತೆಂಗಿನಕಾಯಿ ಮುಂತಾದುವುಗಳಿಂದ ಪೂಜಿಸುತ್ತಾರೆ. ನಂತರ ಗಂಡುಮಗುವಾಗಿದ್ದರೆ ಬಿಲ್ಲುಬಾಣವನ್ನು, ಹೆಣ್ಣು ಮಗುವಾಗಿದ್ದರೆ ತೊಟ್ಟಿಲುಗಳನ್ನು ಆ ಮರಕ್ಕೆ ಕಟ್ಟುವ ಪದ್ಧತಿ ಒಡಿಗ ಸಮುದಾಯದವರಲ್ಲಿದೆ. ಒಡೆದ ತೆಂಗಿನ ಕಾಯಿಯನ್ನು, ತಾಯಿ, ಮಗು ದಾಟಿಕೊಂಡು ಗಂಡನ ಮನೆಗೆ ಹೋಗುವರು. ಗಂಡನ ಮನೆಯಲ್ಲಿ ಆರತಿ ಮಾಡಿ ಇವರನ್ನು ಒಳಗೆ ಕರೆದುಕೊಳ್ಳುವ ರೂಢಿಯಿರುತ್ತದೆ.

**೪ : ೩ ಕೂದಲು ತೆಗೆಯುವ ಶಾಸ್ತ್ರ**

ಮಗುವಿಗೆ ಕೂದಲು ತೆಗೆಸುವ ಶಾಸ್ತ್ರ ಒಡಿಗರಲ್ಲಿಯೂ ರೂಢಿಯಲ್ಲಿದೆ. ಜನಿಸಿದ ಮಗುವಿಗೆ ಐದು ತಿಂಗಳು ತುಂಬಿದ ಮೇಲೆ ಮುಡಿಯನ್ನು ತೆಗೆಯುತ್ತಾರೆ. ಇದರಲ್ಲಿ ಮಗುವಿನ ಸೋದರಮಾವ ಪ್ರಮುಖ ಪಾತ್ರವಹಿಸುತ್ತಾನೆ. ಕೂದಲು ತೆಗೆಸುವಾಗ ತಮ್ಮ ಕುಲದೈವಗಳಾದ ಮಸಣೆ, ಚಾಮುಂಡಿ, ಕರಿಗಾಳಮ್ಮತಾಯಿ, ಮಾರಿ, ಮೇಲದೈವ, ಮಲ್ಲೇಶಸ್ವಾಮಿಗಳನ್ನು ಸ್ಮರಿಸುತ್ತಾರೆ. ಕೂದಲು ತೆಗೆಯುವ ಸಂದರ್ಭದಲ್ಲಿ ಕ್ಷೌರಿಕನಿಗೆ ಕಾಣಿಕೆಯಾಗಿ ಭತ್ತ, ಬಟ್ಟೆ, ಹೂ, ಹಣ್ಣುಗಳೊಂದಿಗೆ ಒಂದರಿಂದ ಹತ್ತು ರೂಪಾಯಿಗಳವರೆಗೆ ದಕ್ಷಿಣೆಯನ್ನು ಮಗುವಿನ ಸೋದರಮಾವ ನೀಡುತ್ತಾನೆ. ಮನೆಯನ್ನು ಸಿಂಗರಿಸಿದ ಈ ದಿನದಂದು ತಾಯಿಯು ಮಗುವನ್ನೆತ್ತಿಕೊಂಡು ಪೂಜಾಸ್ಥಾನದಲ್ಲಿ ಕುಳಿತು ಕೊಳ್ಳುತ್ತಾಳೆ. ಕ್ಷೌರಿಕನು ಮಗುವಿನ ಕೂದಲನ್ನು ಕತ್ತರಿಸುತ್ತಾನೆ. ಪಾತ್ರೆಯಲ್ಲಿನ ಕಾಯಿಸಿದ ಹಾಲಿಗೆ ಬೆಲ್ಲವನ್ನು ಹಾಕಿ ಕತ್ತರಿಸಿದ ಕೂದಲನ್ನು ಹಾಕುತ್ತಾರೆ. ಕೂದಲು ಹಾಕಿದ ಹಾಲಿನ ಪಾತ್ರೆಯನ್ನು ಗಂಗೆಯಲ್ಲಿ ಬಿಟ್ಟು ಬರುವ ಪದ್ಧತಿಯಿದ್ದು, ಈ ಕಾರ್ಯಕ್ರಮ ಸರಳವಾಗಿ ನಡೆಯುತ್ತದೆ. ಬಂಧುವರ್ಗವೆಲ್ಲ ಅಂದು ನೆರೆದಿರುತ್ತದೆ. ಈ ದಿನದಂದು ಸಿಹಿಯೂಟ ನಡೆಯುತ್ತದೆ.

### ೪ : ೪ ಕಿವಿ ಚುಚ್ಚುವುದು

ಮಗುವಿಗೆ ಸೋಮವಾರ ಅಥವಾ ಶನಿವಾರಗಳಂದು ಕುಲದೈವದ ದಿನಗಳಾದ್ದರಿಂದ ಒಳ್ಳೆಯ ದಿನಗಳಂದು ಪರಿಗಣಿಸಿ ಕಿವಿಯನ್ನು ಚುಚ್ಚುತ್ತಾರೆ. ನೈಸರ್ಗಿಕವಾಗಿ ದೊರೆಯುವ ಕಾರೆಯ ಮುಳ್ಳಿನಿಂದ ಮಗುವಿನ ಸೋದರಮಾವನು ಕಿವಿ ಚುಚ್ಚುತ್ತಾನೆ. ಹೆಣ್ಣು ಮತ್ತು ಗಂಡು ಮಗುವಿಗೆ ಕಿವಿಯನ್ನು ಚುಚ್ಚುತ್ತಾರೆ. ಕಾರೆ ಮುಳ್ಳಿನಿಂದ ಕಿವಿ ಚುಚ್ಚುವುದರಿಂದ ಯಾವುದೇ ರೀತಿಯ ಚರ್ಮದ ತೊಂದರೆ ಕಾಣಿಸಲಾರದೆಂದು ಒಡಿಗರು ಹೇಳುತ್ತಾರೆ. ಈ ಕಾರ್ಯಕ್ರಮದಂದು ಸೂಲಗಿತ್ತಿಗೆ ಹೊಸಬಟ್ಟೆಯನ್ನು ಉಡಿಸಿ, ಶಕ್ತ್ಯಾನುಸಾರ ಕಾಣಿಕೆಯನ್ನು ನೀಡುತ್ತಾ, ಅವಳೊಂದಿಗೆ ತಾಯಿ-ಮಗುವಿಗೆ ಆಶೀರ್ವಾದವನ್ನು ಕೇಳುತ್ತಾರೆ.

### ೪ : ೫ ಋತುಮತಿ ಶಾಸ್ತ್ರ

ಬುಡಕಟ್ಟು ಸಮುದಾಯಗಳು ಹೆಣ್ಣು ಮಗುವು ದೊಡ್ಡದಾಗಿ ಬೆಳೆದು ಋತುಮತಿಯಾಗಿ ಪ್ರೌಢಾವಸ್ಥೆಗೆ ಬಂದಾಗ ಅತ್ಯಂತ ಸಂಭ್ರಮವನ್ನು ವ್ಯಕ್ತಪಡಿಸುತ್ತಾರೆ. ಅಲ್ಲದೇ ಕೆಲವು ಬುಡಕಟ್ಟು ಸಮುದಾಯಗಳು ಅತ್ಯಂತ ದುಃಖವನ್ನು ವ್ಯಕ್ತಪಡಿಸಿ ಮತ್ತೆ ಸಂಭ್ರಮವಾಗಿ ಆಚರಿಸುತ್ತಾರೆ. ಪ್ರೌಢಾವಸ್ಥೆಗೆ ಬಂದ ಹೆಣ್ಣು ತವರನ್ನು ಬಿಟ್ಟು ಅನ್ಯರ ಮನೆಗೆ ಹೋಗುತ್ತಾಳೆಂದು ಅಳುವುದುಂಟು. ಅಲ್ಲದೇ ಋತುಮತಿಯಾದ ಹೆಣ್ಣು ದುಃಖ ವ್ಯಕ್ತಪಡಿಸುತ್ತಾಳೆ. ಈ ಸಮಯದಲ್ಲಿ ಇವಳ ದೈಹಿಕ ಚಹರೆಗಳು ತುಂಬಾ ಬದಲಾಗಿರುತ್ತವೆ. ಈ ಸಂದರ್ಭದಲ್ಲಿ ಆಯಾ ಸಮುದಾಯದ ನಿಯಮದಂತೆ ಸಂಸ್ಕಾರಗಳನ್ನು ಮಾಡುತ್ತಾರೆ. ಪ್ರೌಢಾವಸ್ಥೆಗೆ ತಲುಪಿದ ಈ ಕ್ರಿಯೆಯನ್ನು ಒಡಿಗರು ಮೈನೆರೆಯುವುದು ಎಂದು ಕರೆಯುತ್ತಾರೆ. ಹೆಣ್ಣು ಈ ಬಗೆಯ ಮೈ ನೆರೆಯುವಿಕೆಯನ್ನು ಒಡಿಗರು ಅವಳ ಬದುಕಿನ ಮಹತ್ವದ ಘಟ್ಟವೆಂದು ಭಾವಿಸುತ್ತಾರೆ. ಇವರು ಈ ಸಂದರ್ಭದಲ್ಲಿ ಕೆಲವು ಸಂಸ್ಕಾರ ವಿಧಿಗಳನ್ನು ನೆರವೇರಿಸುತ್ತಾರೆ.

ಬುಡಕಟ್ಟು ಸಮುದಾಯಗಳಲ್ಲಿ ಬಾಲ್ಯವಿವಾಹ ಹೆಚ್ಚಾಗಿ ಇದ್ದುದರಿಂದ ಋತುಮತಿಯಾಗುವ ಪೂರ್ವದಲ್ಲಿಯೇ ವಿವಾಹಗಳು ನಡೆಯುತ್ತಿದ್ದವು. ಆಗ ಹೆಣ್ಣು ತನ್ನ ಗಂಡನ ಮನೆಯಲ್ಲಿಯೇ ಋತುಮತಿಯಾದರೆ ಗಂಡನ ಮನೆಯವರೇ ಶಾಸ್ತ್ರ ಮಾಡಬೇಕಾಗುತ್ತಿತ್ತು. "When she is exbited every evening in the company of married women who are invited. All the end of his peried she is again bathed and taken into the house"[೪]

''ಕಾಡುಗೊಲ್ಲರಲ್ಲಿ ಮೈನೆರೆದ ಹೆಣ್ಣನ್ನು ತಮ್ಮ ಹಟ್ಟಿಯಿಂದ ದೂರದಲ್ಲಿ ಒಂದು ಪ್ರತ್ಯೇಕ ಗುಡಿಸಲನ್ನು ಹಾಕಿ, ಸೂತಕ ಕಳೆಯುವವರೆಗೂ ಆ ಹೆಣ್ಣನ್ನು ಗುಡಿಸಲಿನಲ್ಲಿ ಇಡುತ್ತಾರೆ''[೫]. ಅದರಂತೆ ಒಡಿಗ ಸಮುದಾಯದವರು ಋತುವಾದ ಹೆಂಗಸಿಗೆ ಪ್ರತ್ಯೇಕವಾದ ಗುಡಿಸಲನ್ನು ನಿರ್ಮಿಸಿ ಅದರಲ್ಲಿ ಬಿಡುತ್ತಾರೆ. ಈ ಗುಡಿಸಲು ಮನೆಯ ಪಕ್ಕದಲ್ಲಿ ಇಲ್ಲವೇ ಅಂಗಳದಲ್ಲಿ ಕಟ್ಟಿರುತ್ತಾರೆ. ಈ ಗುಡಿಸಲನ್ನು ಕಟ್ಟಲು ಋತುವಾದ ಹೆಣ್ಣಿನ ಸೋದರಮಾವ ಬರಲೇಬೇಕೆಂಬ ಪದ್ಧತಿಯಿದೆ. ಈ ಗುಡಿಸಲು ಸೋದರಮಾವ ನಿರ್ಮಿಸಿ ಅದರ ಮೇಲೆ ತೆಂಗು ಮತ್ತು ನೇರಳೆ ಸೊಪ್ಪನ್ನು ಹಾಕುತ್ತಾನೆ.

ಈ ಗುಡಿಸಲಿಗೆ ಪೂಜೆಯನ್ನು ಮಾಡಿ ಅವಳನ್ನು ಒಳಗೆ ಬಿಡಲಾಗುತ್ತದೆ. ಒಂಭತ್ತು ಇಲ್ಲವೆ ಹದಿನಾರು ದಿವಸದವರೆಗೆ ಆ ಗುಡಿಸಲಿನಲ್ಲಿ ವಾಸಿಸಬೇಕು. ಋತುವಾದವಳಿಗೆ ಮಲಗಲು ಒಂದು ಚಾಪೆಯ ಮೇಲೆ ಭತ್ತದ ಹುಲ್ಲು, ಬೇವಿನಸೊಪ್ಪು, ನೇರಳೆ ಸೊಪ್ಪನ್ನು ಹಾಕುವರು. ಅಲ್ಲದೇ ಇವಳಿಗೆ ಪ್ರತ್ಯೇಕ ಹೊದಿಕೆಯನ್ನು ನೀಡುತ್ತಾರೆ. ಊಟಕ್ಕೆ ಪ್ರತ್ಯೇಕ ತಟ್ಟೆಯನ್ನು ಕೊಡುವರು. ಅಲ್ಲದೇ ಋತುವಾದ ಹೆಣ್ಣಿನ ತಾಯಿಯ ಸೋದರ ಸಂಬಂಧಿಗಳು ಪ್ರತಿದಿನವು ಸಿಹಿಯಾದ ತಿಂಡಿಗಳನ್ನು ತಂದುಕೊಡುತ್ತಾರೆ. ಕೆಲವರು ಬಾಳೆಎಲೆ, ಮಣ್ಣಿನ ಕುಡಿಕೆಯನ್ನು ಊಟದ ಸಾಮಗ್ರಿಯಾಗಿ ನೀಡುವ ರೂಢಿಯಿದೆ.

### ೪ : ೫ : ೧ ನಿಷೇಧಗಳು

ಋತುಮತಿಯಾದ ಹೆಣ್ಣುಮಗಳಿಗೆ ಒಡಿಗ ಸಮುದಾಯವು ಕೆಲವೊಂದು ನಿಷೇಧಗಳನ್ನು ಮಾಡಿದೆ.

ಅ ಋತುಮತಿಯಾದವಳು ಒಂಟಿಯಾಗಿ ಓಡಾಡುವಂತಿಲ್ಲ.

ಆ ಪ್ರತ್ಯೇಕ ಗುಡಿಸಲಿನಲ್ಲಿ ಇವಳೊಂದಿಗೆ ವೃದ್ಧೆಯಿರುತ್ತಾಳೆ, ಅವಳ ಹೊರತು ಮತ್ತಾರಿಗೂ ಪ್ರವೇಶವಿರುವುದಿಲ್ಲ.

ಇ ಋತುವಾದ ಆರಂಭದ ಮೂರು ದಿನಗಳಲ್ಲಿ ಅವಳು ನಿದ್ರೆಯನ್ನು ಮಾಡುವಂತಿಲ್ಲ. ಈ ಮೂರು ದಿನಗಳಲ್ಲಿ ಕಥೆ, ಹಾಡು ಹೇಳುವ ಮೂಲಕ ಆಕೆಗೆ ಮನರಂಜನೆಯನ್ನು ನೀಡುತ್ತಾರೆ.

ಈ ಋತುಮತಿಯಾದ ಹೆಣ್ಣಿನ ಮನೆಯಲ್ಲಿ ಹದಿನಾರು ದಿನಗಳವರೆಗೆ ಸೂತಕ ಇರುತ್ತದೆ. ಈ ಕಾಲಾವಧಿಯಲ್ಲಿ ಸೋದರ ಸಂಬಂಧಿಗಳ ಹೊರತಾಗಿ ಬೇರೆ ಯಾರಿಗೂ ಮನೆಯೊಳಗೆ ಪ್ರವೇಶವಿರುವುದಿಲ್ಲ. ಅಲ್ಲದೆ ಹೆಣ್ಣಿನ ಮನೆಯವರು ಯಾವುದೇ ಪೂಜಾಕಾರ್ಯ, ದೇವಸ್ಥಾನಾದಿಗಳಿಗೆ ಹೋಗುವುದಿಲ್ಲ.

### ೪ : ೫ : ೨ ಒಸುಗೆ

ಹೆಣ್ಣು ಋತುಮತಿಯಾದ ಹದಿನಾರನೆಯ ದಿವಸಕ್ಕೆ ಒಡಿಗ ಸಮುದಾಯದವರು ಒಸುಗೆ ಕಾರ್ಯವನ್ನು ಮಾಡುತ್ತಾರೆ. ಒಸುಗೆ ಎಂಬ ಶಬ್ದಕ್ಕೆ Joy: Joyful occasion a feast, a festival ಎಂದು ಕಿಟೆಲ್ ಕೋಶ ಅರ್ಥನೀಡುತ್ತದೆ. ಒಸುಗೆಯ ದಿನ ಹಬ್ಬದ ವಾತಾವರಣವಿರುತ್ತದೆ. ಅಂದು ಮನೆಯನ್ನು ಸಾರಿಸಿ, ತಳಿರು, ತೋರಣ ಕಟ್ಟಿ ಶೃಂಗಾರಿಸುತ್ತಾರೆ. ಒಸುಗೆಯ ದಿನದಂದು ಮನೆಯ ಅಂಗಳದಲ್ಲಿ ಏಳು ಅಥವಾ ಎಂಟು ಕಂಬಗಳಿಂದ ಚಪ್ಪರವನ್ನು ಹಾಕುವ ಪದ್ಧತಿ ಇವರಲ್ಲಿದೆ. ಚಪ್ಪರದ ಮೇಲೆ ನೇರಳೆ ಗಿಡದ ಸೊಪ್ಪು ಹಾಕುವರು. ಒಸುಗೆಯ ದಿನ ಸಾಮಾನ್ಯವಾಗಿ ಮಂಗಳವಾರ ಇಲ್ಲವೇ ಶುಕ್ರವಾರದಂದು ಮಾಡುತ್ತಾರೆ. ಹೆಣ್ಣಿನ ಸೋದರಮಾವನ ಪಾತ್ರ ಇಲ್ಲಿ ಮುಖ್ಯವಾಗಿರುತ್ತದೆ. ಒಸುಗೆಯ ದಿನದಂದು ಸಾಬೂನು ಮುಂತಾದ ಗೃಹೋಪಯೋಗಿ ಮತ್ತು ಅಲಂಕಾರಿಕ ಸಾಮಗ್ರಿಗಳನ್ನು ಸೋದರಮಾವ ತಂದು ಕೊಡುತ್ತಾನೆ. ಒಸುಗೆ ಕಾರ್ಯವನ್ನು ಅವನೇ ಮುಂದೆ ನಿಂತು ನೆರವೇರಿಸುತ್ತಾನೆ.

ಋತುಮತಿಯಾದವಳನ್ನು ಮನೆಯ ಅಂಗಳಕ್ಕೆ ಮುತ್ತೈದೆಯರು ಕರೆತಂದು, ಚಪ್ಪರದ ಅಡಿಯಲ್ಲಿ ಕುಳ್ಳಿರಿಸುತ್ತಾರೆ. ಇವಳು ಕುಳಿತ ಹಸೆಮಣೆಯ ಸುತ್ತಲೂ ಹುಡಿನೂಲನ್ನು ಐದು ಮಡಪುಗಳಲ್ಲಿ ಬಿಟ್ಟಿರುತ್ತಾರೆ. ಪಕ್ಕದಲ್ಲಿ ದೀಪಗಳಿರುತ್ತವೆ. ಮುತ್ತೈದೆಯರು ಅವಳಿಗೆ ಅರಿಶಿನ ನೀರನ್ನು ಎರೆಯುತ್ತಾರೆ. ''ಮಡಿಬಟ್ಟೆಯನ್ನು ಅಗಸರ ಬದಲಾಗಿ, ಕ್ಷೌರಿಕರು ತಂದು ಕೊಡುವುದು ಈ ಸಮುದಾಯದಲ್ಲಿನ ವಿಶೇಷವಾಗಿದೆ''. ನಂತರ ಸೋದರಮಾವ ತಂದ ಹೊಸ ಬಟ್ಟೆಯನ್ನುಡಿಸಿ ಅವಳನ್ನು ಶೃಂಗರಿಸುತ್ತಾರೆ. ನಡುಮನೆಯಲ್ಲಿ ಚಾಪೆಯ ಮೇಲೆ ಕೂರಿಸುವರು. ಸೋದರ ಮಾವ ತಂದಂತಹ ಅಕ್ಕಿ, ತಂಬಿಟ್ಟು, ಬೆಲ್ಲ, ತುಪ್ಪ, ಕೊಬ್ಬರಿಯನ್ನು ಕೊಡುತ್ತಾರೆ. ಈ ಸಿಹಿತಿಂಡಿಗಳನ್ನು ಆಕೆ ಐದು ಬಾರಿ ತಿಂದು, ಉಳಿದದ್ದನ್ನು ಅಕ್ಕಪಕ್ಕದವರಿಗೆ ನೀಡತ್ತಾಳೆ. ನಂತರ ಸಂಬಂಧಿಕರು ತಂದಂತಹ ಬಟ್ಟೆ, ಸಿಹಿ ತಿನಿಸುಗಳನ್ನು ನೀಡಲಾಗುತ್ತದೆ. ಸೋದರಮಾವ ಎರಡು ತೆಂಗಿನಕಾಯಿ, ಬಾಳೆಹಣ್ಣು, ಹೂವು, ಬಳೆ, ಬಟ್ಟೆಗಳೊಂದಿಗೆ ಉಡುಗೊರೆ ಯಾಗಿ ಆಭರಣಗಳನ್ನು ನೀಡುತ್ತಾನೆ. ನಂತರ ಬಂಧು ಬಳಗದವರಿಗೆ ಸಿಹಿಯೂಟವಿರುತ್ತದೆ.

ಒಡಿಗ ಸಮುದಾಯದಲ್ಲಿಯೂ ಬಾಲ್ಯವಿವಾಹ ಪದ್ಧತಿಯಿದೆ. ಹೆಣ್ಣು ಗಂಡನ ಮನೆಯಲ್ಲಿ ಋತುಮತಿಯಾದರೆ, ಈ ವಿಧಿಗಳನ್ನು ಗಂಡನ ಮನೆಯಲ್ಲಿಯೇ ಮಾಡಲಾಗುತ್ತದೆ. ಸೋದರಮಾವನೇ ಇಲ್ಲಿಯೂ ಮುಂದೆ ನಿಂತು ಕಾರ್ಯಕ್ರಮಗಳನ್ನು ನೆರವೇರಿಸುತ್ತಾನೆ. ಅವಳು ಅವಿವಾಹಿತೆಯಾಗಿದ್ದಲ್ಲಿ ಋತುಮತಿಯಾದ ಒಂದು ವರ್ಷದೊಳಗೆ ಮದುವೆಯನ್ನು ಮಾಡುತ್ತಾರೆ. ಮದುವೆಯ ನಂತರ ಋತುಮತಿಯಾದರೆ ಮೂರು ತಿಂಗಳಲ್ಲಿ ನಿಷೇಕ ಕ್ರಿಯೆ (ಶೋಭನ)ಯನ್ನು ಮಾಡಿಸುತ್ತಾರೆ.

ನಾಗರಿಕ ಸಮಾಜದ ಆಧುನಿಕ ಪ್ರಭಾವದಿಂದಾಗಿ ಋತುಮತಿ ಕಾರ್ಯಗಳಲ್ಲಿ ಕೊಂಚ ಕಟ್ಟುನಿಟ್ಟಿನ ಕಾರ್ಯಗಳು ಸಡಿಲಗೊಂಡಿವೆ. ಅಲ್ಲದೇ ಪ್ರತ್ಯೇಕ ಗುಡಿಸಲಿನ ಬದಲಾಗಿ ಮನೆಯ ಒಂದು ಭಾಗದಲ್ಲಿ ಕುಳ್ಳಿರಿಸುವ ರೂಢಿಯೂ ಈ ಸಮುದಾಯದಲ್ಲಿ ಇಂದು ಕಂಡು ಬರುತ್ತಿದೆ. ಕಾಲದ ಪ್ರಭಾವದಿಂದ ಇದು ಸಹಜವೂ ಆಗಿದೆ.

### ೪ : ೬ ಮದುವೆ

ಭಾರತೀಯ ಸಂಸ್ಕೃತಿಯಲ್ಲಿ ಮದುವೆಯೆಂಬುದು ಅತ್ಯಂತ ಮಹತ್ವದ ಘಟ್ಟವಾಗಿದೆ. ಈ ಕ್ರಮವು ಶಾಸ್ತ್ರಬದ್ಧವಾದ ಕೆಲವು ನಿಯಮಗಳನ್ನು ಹೊಂದಿದೆ. ಬುಡಕಟ್ಟು ಸಮುದಾಯಗಳು ಮದುವೆಯನ್ನು ಒಂದು ಪವಿತ್ರ ಕಾರ್ಯವೆಂದೇ ನಂಬಿವೆ. ಪ್ರಾಚೀನ ಕಾಲದಿಂದಲೂ ಮದುವೆಯ ಆಚರಣೆಗಳು ಭಿನ್ನ ನೆಲೆಯಲ್ಲಿ ಬೆಳೆದುಬಂದಿವೆ. ಅಪಹರಣ, ಗಂಧರ್ವ, ಒಪ್ಪಿಗೆ ಈ ಮೂರು ಬಗೆಯಲ್ಲಿ ಸಾಂಸಾರಿಕ ಜೀವನಕ್ಕೆ ಅಣಿಯಾಗುವ ಪದ್ಧತಿಯಿತ್ತು. ಅದು ಇಂದಿಗೂ ಒಂದಲ್ಲ ಒಂದು ಬಗೆಯಲ್ಲಿ ಉಳಿದುಕೊಂಡು ಬಂದಿದೆ. ತಮ್ಮ ವಂಶದ ಅಭಿವೃದ್ಧಿಗಾಗಿ ಸಮುದಾಯಗಳಿಗೆ ಮದುವೆಯು ಅನಿವಾರ್ಯವಾಗಿದೆ.

ಒಡಿಗ ಸಮುದಾಯದವರು ಮದುವೆಯನ್ನು ಪವಿತ್ರವೆಂದು ಭಾವಿಸುವರು. ಈ ಸಮುದಾಯ ಮದುವೆಯ ಹೆಣ್ಣು ಮತ್ತು ಗಂಡನ್ನು ತಮ್ಮ ಬೆಡಗಿಗೆ ಬದಲಾಗಿ ಅದೇ ಸಮುದಾಯದ ಬೇರೆ ಬೆಡಗಿನವರನ್ನು ಆಯ್ಕೆ ಮಾಡಿಕೊಳ್ಳುತ್ತಾರೆ.

ಒಂದೇ ಬೆಡಗಿನವರು ಸೋದರ ಸಂಬಂಧಿಗಳಾಗುವರು. ಬೇರೆ ಬೆಡಗಿನವರು ಬೀಗರು ಎಂದು ಈ ನಿಯಮ ಕಟ್ಟುನಿಟ್ಟಾಗಿ ಪಾಲಿಸುತ್ತಾರೆ. ಒಡಿಗರ ಮದುವೆಗಳು ತಮ್ಮದೇ ಆದ ವೈಶಿಷ್ಟ್ಯಗಳನ್ನು ಪಡೆದುಕೊಂಡಿವೆ.

ಒಡಿಗರಲ್ಲಿ ಮುಖ್ಯವಾಗಿ ಎರಡು ಪಂಗಡಗಳಿವೆ. ಒಂದು 'ಗೂಡುಮನೆ' ಮತ್ತೊಂದು 'ಮುಳ್ಳುಮನೆ' ಎಂದು. ಗೂಡುಮನೆಯವರು ವೈಷ್ಣವ ಪಂಥದ ಅನುಯಾಯಿಗಳು. ಮುಳ್ಳುಮನೆಯವರು ಶೈವಪಂಥದ ಅನುಯಾಯಿಗಳು. ವಿವಾಹದ ಸಂಬಂಧವನ್ನು ಏರ್ಪಡಿಸುವಾಗ ಈ ಎರಡೂ ಪಂಥದ ಬೆಡಗಿನವರಿಗೆ ಯಾವುದೇ ನಿಷೇಧ ಇರುವುದಿಲ್ಲ. ಆದರೆ ಗೂಡುಮನೆಯೆಂಬ ವೈಷ್ಣವ ಪಂಥದವರು ಮುಳ್ಳುಮನೆಯ ಪಂಗಡದವರಲ್ಲಿ ಹೆಣ್ಣನ್ನು ತಂದಲ್ಲಿ, ಅವರ ಕುಲದೈವವಾದ  ತಿರುಪತಿ ವೆಂಕಟೇಶ್ವರನಿಗೆ ಪೂಜೆಯನ್ನು ಸಲ್ಲಿಸಿ, ಆ ಮದುವೆಯ ಹೆಣ್ಣನ್ನು ತಮ್ಮ ಗೂಡುಮನೆಯ ಪಂಗಡಕ್ಕೆ ಸೇರಿಸಿಕೊಳ್ಳುತ್ತಾರೆ. ಅಲ್ಲದೇ ಅಕ್ಕನ ಮಗಳು, ಸೋದರ ಅತ್ತೆಯ ಮಗಳು, ಸೋದರ ಮಾವನ ಮಕ್ಕಳನ್ನು ವಿವಾಹವಾಗುವುದುಂಟು. ಒಡಿಗರಲ್ಲಿ ಬಹುಪತ್ನಿತ್ವಕ್ಕೆ ಅವಕಾಶವಿರುವುದಿಲ್ಲ. ಆದರೆ 'ಕೂಡುವಳಿ ವಿವಾಹ ಪದ್ಧತಿ' ಇವರಲ್ಲಿ ರೂಢಿಯಲ್ಲಿದೆ. ಬಾಲ್ಯವಿವಾಹವೂ ಇವರಲ್ಲಿದೆ. ಇಂದು ಬಾಲ್ಯವಿವಾಹ ತುಂಬಾ ಕಡಿಮೆ.

ಒಡಿಗರಲ್ಲಿ ಪ್ರೇಮವಿವಾಹಕ್ಕೆ ಅವಕಾಶವಿಲ್ಲ. ಮಕ್ಕಳು ಪ್ರೌಢಾವಸ್ಥೆಗೆ ಬಂದಾಗ ಹಿರಿಯರೇ ಮದುವೆಯನ್ನು ನಿಶ್ಚಯಿಸುತ್ತಾರೆ. ಕನ್ನೆಯನ್ನು ನೋಡಲು ಹಿರಿಯರು, ಮುತ್ತೈದೆಯರು, ವರನ ತಂದೆ-ತಾಯಿ ಹೀಗೆ ಒಂಭತ್ತು ಜನ ಹೋಗುತ್ತಾರೆ. ಹೀಗೆ ಐದು ಬಾರಿ ಬಂದು ಒಪ್ಪಿಗೆಯನ್ನು ನೀಡುತ್ತಾರೆ. ವಧುವನ್ನು ನೋಡಲು ಬಂದವರಿಗೆ ತಿಂಡಿ, ಪಾನೀಯಗಳ ಉಪಚಾರವಿರುತ್ತದೆ. ಒಂದು ಶುಭ ದಿನದಂದು ಮದುವೆಯ ನಿಶ್ಚಿತಾರ್ಥ ಇಟ್ಟುಕೊಳ್ಳುವರು.

ಒಡಿಗರು ಜನಸಂಖ್ಯಾ ದೃಷ್ಟಿಯಿಂದ ಅತ್ಯಂತ ಅಲ್ಪಸಂಖ್ಯಾತರು. ಆದ್ದರಿಂದ ಇವರು ಎಲ್ಲರೂ ಒಂದು ಕಡೆಯಿಂದ ಸಂಬಂಧಿಗಳೇ ಆಗಿರುತ್ತಾರೆ. ವಧು, ವರ ಅನ್ವೇಷಣೆಗೆ ಅಷ್ಟಾಗಿ ತೊಂದರೆ ಪಡುವುದಿಲ್ಲ. ಯಾವುದಾದರೂ ಹಬ್ಬ, ಆಚರಣೆ, ಜಾತ್ರೆ ಸಂದರ್ಭಗಳಲ್ಲಿ ವಧು, ವರಗಳನ್ನು ನೋಡಿ ಆಯ್ಕೆ ಮಾಡುತ್ತಾರೆ. ಹಿಂದೆ ವಧುದಕ್ಷಿಣೆ ಇವರಲ್ಲಿತ್ತು. ಇಂದು ವರದಕ್ಷಿಣೆ ಪದ್ಧತಿ ಇವರಲ್ಲಿರುವುದು ತಿಳಿಯುತ್ತದೆ.

**೪ : ೬ : ೧ ನಿಶ್ಚಿತಾರ್ಥ**

ನಿಶ್ಚಿತಾರ್ಥ ಕಾರ್ಯಕ್ರಮವನ್ನು ಹೆಣ್ಣಿನ ಮನೆಯಲ್ಲಿ ನೆರವೇರಿಸುತ್ತಾರೆ. ಇದು ಸಾಯಂಕಾಲದ ಸಮಯದಲ್ಲಿ ನಡೆಯುತ್ತದೆ. ವರನ ಜೊತೆಯಲ್ಲಿ ತಂದೆ, ತಾಯಿ, ಸೋದರಮಾವ, ಕೆಲವು ಹಿರಿಯರು ಮತ್ತು ಬಂಧುಗಳು ಬರುತ್ತಾರೆ. ಅಲ್ಲದೇ ವಧುವಿನ ಹತ್ತಿರದ ಸಂಬಂಧಿಗಳೂ ಬಂದಿರುತ್ತಾರೆ. ವರನ ಕಡೆಯವರು ತಾವು ತಂದ ಫಲ-ಪುಷ್ಪಾದಿಗಳನ್ನು, ಬಟ್ಟೆ, ಬಳೆಗಳನ್ನು, ಆಭರಣಗಳನ್ನು ವಧುವಿಗೆ ನೀಡುವರು. ವರನ ಕಡೆಯವರು ನೀಡಿದ ಸಾಮಗ್ರಿಗಳಿಂದ ವಧುವನ್ನು ಸಿಂಗರಿಸುತ್ತಾರೆ. ಸಿಂಗಾರಗೊಂಡ ಮದುವಣಗಿತ್ತಿಯು ಮುತ್ತೈದೆಯರೊಂದಿಗೆ ಬಂದು ಕುಳಿತುಕೊಳ್ಳುತ್ತಾಳೆ. ಆಗ ವಧು-ವರರ ಹಿರಿಯರ ಸಮ್ಮುಖದಲ್ಲಿ ನಿಶ್ಚಿತಾರ್ಥ ಕಾರ್ಯ ನಡೆಯುತ್ತದೆ.  ಸಂದರ್ಭದಲ್ಲಿ ವಧುವಿಗೆ ಕೊಡಬೇಕಾದ ಆಭರಣ, ದಕ್ಷಿಣೆ, ವರನಿಗೆ ಕೊಡಬೇಕಾದ ಆಭರಣ, ದಕ್ಷಿಣೆಯ ಕುರಿತು ಚರ್ಚಿಸುತ್ತಾರೆ. ಈ ಎಲ್ಲವುಗಳ ಒಪ್ಪಿಗೆಯಾದ

ಬಳಿಕ ಪರಸ್ಪರರು ವೀಳ್ಯವನ್ನು ಬದಲಿಸಿಕೊಳ್ಳುವರು. ವೀಳ್ಯದ ಬದಲಿಕೆಯ ನಂತರ ಯಾವುದೇ ಕಾರಣಕ್ಕೆ ಮದುವೆಯು ನಿಲ್ಲುವಂತಿಲ್ಲ. ನಿಶ್ಚಿತಾರ್ಥದ ದಿನದಂದೇ ಮದುವೆಯ ದಿನವನ್ನು ನಿರ್ಧರಿಸುತ್ತಾರೆ. ನಿಶ್ಚಿತಾರ್ಥದ ಬಳಿಕ ಬಂಧುವರ್ಗದವರಿಗೆ ಊಟೋಪಚಾರವಿರುತ್ತದೆ. ಈ ನಿಶ್ಚಿತಾರ್ಥ ಕಾರ್ಯವು ಮದುವೆಯ ಪೂರ್ವ ಮಹತ್ವದ ಘಟ್ಟವಾಗಿರುತ್ತದೆ.

ನಿಶ್ಚಿತಾರ್ಥದ ದಿನದಂದೇ ಮದುವೆಯ ದಿನವನ್ನು ನಿರ್ಧರಿಸುತ್ತಾರಾದ್ದರಿಂದ, ಮದುವೆಯ ಸಿದ್ಧತೆಗಳು ಅಂದಿನಿಂದಲೇ ಆರಂಭವಾಗುತ್ತವೆ. ಮುಂದೆ ಮದುವೆಯು ಹತ್ತಿರ ಬಂದಾಗ ವಧುವಿನ ಕಡೆಯಿಂದ ಇಬ್ಬರು, ವರನ ಕಡೆಯಿಂದ ಇಬ್ಬರು ಜೊತೆಗೆ ಒಬ್ಬ ಮುತ್ತೈದೆಯನ್ನು ಸೇರಿಸಿ ಐದು ಮಂದಿ ಮದುವೆಯ ದಿನವನ್ನು ತಿಳಿಸಲು ಹೊರಡುತ್ತಾರೆ. ಜೊತೆಗೆ ಎರಡು ಕೊಡೆಯನ್ನು ಹಿಡಿದುಕೊಂಡು ನಡೆದೇ ಹೋಗುವುದು ಇವರ ಸಂಪ್ರದಾಯ.

ಈ ಸಮುದಾಯದವರಲ್ಲಿ ಹೆಚ್ಚಾಗಿ ಮಂಗಳವಾರ, ಬುಧವಾರ ಅಥವಾ ಶುಕ್ರವಾರ, ಶನಿವಾರಗಳಂದು ಮದುವೆಗಳನ್ನು ಮಾಡಲಾಗುತ್ತದೆ. ಬೇರೆ ದಿನಗಳಂದು ಮದುವೆ ಮಾಡುವುದಿಲ್ಲ. ಕುಂಭಮಳೆ, ಮೀನಮಳೆಗಳ ಸಂದರ್ಭದಲ್ಲಿ ಒಡಿಗರ ಮದುವೆಗಳು ನಡೆಯುತ್ತವೆ. ಒಡಿಗರ ವಿವಾಹಗಳಲ್ಲಿ ಇವರ ಕುಲಗುರುಗಳಾದ ವೈಷ್ಣವರು ಪುರೋಹಿತರಾಗಿ ಕಾರ್ಯ ನಿರ್ವಹಿಸುತ್ತಾರೆ. ಮದುವೆಯ ದಿನದಂದು ಹನ್ನೆರಡು ಕಂಬದ ಚಪ್ಪರವನ್ನು ಹಾಕಿ, ಸಂಪ್ರದಾಯದಂತೆ ಚಪ್ಪರದ ಮೇಲೆ ನೇರಳೆ ಸೊಪ್ಪನ್ನು ಹಾಕುವರು. ಇದಕ್ಕೆ ಒಡಿಗರು 'ಹನ್ನೆರಡು ಕಂಬ', 'ಹನ್ನೆರಡು ಗುಂಬ' ಎಂದು ಕರೆಯುತ್ತಾರೆ.

ಮದುವೆಯು ವಂಶಾಭಿವೃದ್ಧಿಯ ಸಂಕೇತ. ಸಂತಾನಾಭಿವೃದ್ಧಿಯ ತೊಟ್ಟಿಲು ಎಂದು ಒಡಿಗರು ನಂಬುತ್ತಾರೆ. ಮದುವೆಯಾಗದೇ ವ್ಯಕ್ತಿಯು ಸತ್ತರೆ ಅವರಿಗೆ ಮೋಕ್ಷ ದೊರೆಯುವುದಿಲ್ಲವೆಂದೂ ನಂಬಿದ್ದಾರೆ. ಒಡಿಗರ ಮದುವೆಗಳಲ್ಲಿ ಕೆಲವು ವಿಶಿಷ್ಟವಾದ ಸಂಪ್ರದಾಯಗಳಿವೆ. ಅವುಗಳನ್ನು ಹೀಗೆ ವಿವರಿಸಲಾಗಿದೆ.

### ೪ : ೬ : ೨ ಗೋಡೆಶಾಸ್ತ್ರ (ಗಾರೆ ಅರೆಯುವುದು)

ಗೋಡೆಶಾಸ್ತ್ರವೆಂಬುದು ಒಡಿಗರ ಮದುವೆಗಳಲ್ಲಿ ಒಂದು ವಿಶಿಷ್ಟ ಸಾಂಪ್ರದಾಯಿಕ ಆಚರಣೆಯಾಗಿದೆ. ಮದುವೆಗಳು ಒಂಭತ್ತರಿಂದ ಹದಿನೈದು ದಿನಗಳು ನಡೆಯುತ್ತಿದ್ದ ಸಂದರ್ಭದಲ್ಲಿ, ವಧುವಿನ ಮನೆಗೆ ಬಂದ ವರನು ಆರಂಭದ ದಿನ ಗೋಡೆಶಾಸ್ತ್ರವನ್ನು ಮಾಡುತ್ತಿದ್ದನು. ಗೋಡೆಶಾಸ್ತ್ರವೆಂದರೆ ವಧುವಿನ ಮನೆಯ ಒಂದು ಸುಣ್ಣದ ಗೋಡೆಗೆ ವರ ಚಿತ್ರಗಳನ್ನು ಬರೆಯುವುದು. ಈ ಚಿತ್ರ ಬರೆಯಲು ವಧುವು ಒಂದು ಕೊಳಗದಲ್ಲಿ ಅಕ್ಕಿಯನ್ನು ನೆನೆಯಿಸಿ, ಕೆಮ್ಮಣ್ಣು, ಇದ್ದಿಲುಗಳನ್ನು ರುಬ್ಬಿ ಕೊಟ್ಟಾಗ, ಆ ವರ್ಣಗಳಿಂದ ಗಿಡ ಮರ, ಪ್ರಾಣಿ ಪಕ್ಷಿ, ಕೆಲವು ರೇಖಾಚಿತ್ರಗಳನ್ನು ಬರೆಯುತ್ತಿದ್ದನು. ಇದು ಮುಂದೆ ಬುಡಕಟ್ಟು ಚಿತ್ರಕಲೆಯನ್ನು ಪ್ರತಿನಿಧಿಸುತ್ತದೆ. ಬಹುಶಃ ಈ ಬಗೆಯ ಗೋಡೆಶಾಸ್ತ್ರ ಒಂದು ಹವ್ಯಾಸವನ್ನಾಗಿಯೂ, ಸಮಯಪಾಲನೆಯ ದೃಷ್ಟಿಯಿಂದಲೂ ಹುಟ್ಟಿಕೊಂಡಿರಬಹುದು. ವರನು ಒಂಭತ್ತು ದಿವಸ ಕಾಲಕಳೆಯುವ ನೆಪದಲ್ಲಿ ಬಹುಶಃ ಈ ಬಗೆಯ ಆಚರಣೆಗಳು ಬುಡಕಟ್ಟು ಸಮುದಾಯಗಳಲ್ಲಿ ಹುಟ್ಟಿಕೊಂಡಿರಬೇಕು. ಆ ಮೂಲಕ ಬುಡಕಟ್ಟು ಜನರ ಕಲೆಯೂ ಮಹತ್ವದ್ದಾಗಿ ಬೆಳೆದಿದೆಯೆಂಬುದನ್ನು ಗುರುತಿಸಬಹುದು. ಇಂದು ಈ ಗೋಡೆಶಾಸ್ತ್ರವನ್ನು ಒಡಿಗರ ಯುವ ಪೀಳಿಗೆಯು ಮುಂದುವರೆಸುತ್ತಿಲ್ಲ.

### ೪ : ೬ : ३ ಪೆಟ್ಟಿಗೆ ಬಂಗಾರದ ಶಾಸ್ತ್ರ

ಒಂದು ಎತ್ತನ್ನು ಸಿಂಗರಿಸಿ, ಅದರ ಮೇಲೆ ಒಂದು ಪೆಟ್ಟಿಗೆಯನ್ನಿಡುತ್ತಾರೆ. ಆ ಪೆಟ್ಟಿಗೆಯಲ್ಲಿ ವಧುವಿಗೆ ಕೊಡಬೇಕಾದ ವಸ್ತ್ರ, ಒಡವೆ, ಆಭರಣ, ಕೆಲವು ಗೃಹೋಪಯೋಗಿ ವಸ್ತುಗಳನ್ನಿಟ್ಟುಕೊಂಡು ವಧುವಿನ ಮನೆಗೆ ಬರುತ್ತಿದ್ದರು. ಇದನ್ನು ಒಡಿಗರು 'ಪೆಟ್ಟಿಗೆ ಬಂಗಾರದ ಶಾಸ್ತ್ರ'ವೆಂದು ಕರೆಯುತ್ತಾರೆ. ಅಲ್ಲದೇ ಇನ್ನೂ ನಾಲ್ಕು ಎತ್ತುಗಳ ಮೇಲೆ ಉಳಿದ ಸಾಮಾನು, ಸರಕುಗಳನ್ನು ತೆಗೆದುಕೊಂಡು ಬರುವರು. ಇಂದು ಎತ್ತಿನ ಮೇಲೆ ಭತ್ತ, ಕೆಲವು ಒಡವೆಗಳನ್ನು ತರುತ್ತಾರೆ. ವಧುವಿನ ಕಡೆಯವರು, ವರನ ಕಡೆಯವರಿಗೆ ಪಾನೀಯಗಳನ್ನು ಕೊಡುವ ಮೂಲಕ ಸ್ವಾಗತಿಸುತ್ತಾರೆ. ನಂತರ ವರನ ಕಡೆಯವರು ತಾವು ತಂದ ಭತ್ತವನ್ನು ಐದು ಬಾರಿ ಅಳೆದು ವಧುವಿನ ತಂದೆಗೋ ಇಲ್ಲವೆ ಸೋದರ ಮಾವನಿಗೋ ನೀಡುವರು. ಈ ಭತ್ತವನ್ನು ನೀಡುವುದಕ್ಕೆ ''ಐಲು ಭತ್ತ ಅಳೆಯುವುದು'' ಎಂದು ಕರೆಯುತ್ತಾರೆ. ಇದು ಬಹುಶಃ ಐದು ಭತ್ತವಿರಬಹುದು. ಒಡಿಗರ ಆಡುನುಡಿಯಲ್ಲಿ ಐಲುಭತ್ತವಾಗಿರಬಹುದು.

ಐಲ್ ಭತ್ತವನ್ನು ಅಳೆಯುವಾಗ ವರನ ಕಡೆಯವರು ''ಕೊಟ್ಟು, ಮಂಡಲೆ, ಕೊಡುವಲೆ, ದೇವೇಶ ಬೈನಾಡು ಮುಕ್ಕಣ್ಣ ಹೊಯ್'' ಎಂದು ಗುಂಪಾಗಿ ನುಡಿಯುತ್ತಾರೆ. ಐಲ್ ಭತ್ತ ಅಳೆದ ನಂತರ ವರ ಮತ್ತು ಆತನ ಸಂಬಂಧಿಕರಿಗೆ ಕಾಲಿಗೆ ನೀರು ಕೊಟ್ಟು ಪ್ರತ್ಯೇಕ ಕೊಠಡಿಯಲ್ಲಿ ಬಿಡುತ್ತಾರೆ. ಅವರಿಗೆ ತುಪ್ಪ, ಬೆಲ್ಲ, ಬಾಳೆಹಣ್ಣು ಮೂರನ್ನು ಬೆರೆಸಿ ತಿನ್ನಲು ಕೊಡುವರು. ಇದು ಮದುವೆಯ ಆರಂಭದ ದಿನ ನಡೆಯುವ ಒಂದು ಸಾಂಪ್ರದಾಯಿಕ ಶಾಸ್ತ್ರವಾಗಿರುತ್ತದೆ. ಈ ಶಾಸ್ತ್ರ ಮುಗಿಯುವುದು ರಾತ್ರಿ ವೇಳೆಯಲ್ಲಿ. ನಂತರ ಬೀಗರಿಗೆ ಊಟೋಪಚಾರವಿರುತ್ತದೆ.

### ೪ : ೬ : ೪ ಎಣ್ಣೆ ಎರೆಯುವ ಶಾಸ್ತ್ರ

ವಿವಾಹದ ಮೊದಲ ದಿನ ಪೆಟ್ಟಿಗೆ ಬಂಗಾರದ ಶಾಸ್ತ್ರ ರಾತ್ರಿ ವೇಳೆ ಹತ್ತು ಗಂಟೆ ಸುಮಾರಿಗೆ ಮುಗಿಯುತ್ತದೆ. ನಂತರ ಬೆಳಗಿನ ಜಾವ ಮೂರು-ನಾಲ್ಕು ಗಂಟೆಗೆ 'ಎಣ್ಣೆ ಎರೆಯುವ ಶಾಸ್ತ್ರ' ಆರಂಭವಾಗುತ್ತದೆ. ಮದುಮಗ ಹಾಗೂ ಮದುಮಗಳಿಬ್ಬರೂ ಬಿಳಿಯ ಬಟ್ಟೆಗಳನ್ನು ಧರಿಸುತ್ತಾರೆ. ಒಬ್ಬೊಬ್ಬರನ್ನು ಕರೆತಂದು ಹಸೆಮಣೆಯಲ್ಲಿ ಕೂರಿಸಿ ಐದು ಜನ ಮುತ್ತೈದೆಯರು ಒಂದು ಬಟ್ಟಲಿನಲ್ಲಿ ಎಣ್ಣೆ ಹಾಗೂ ಗರಿಕೆಪತ್ರೆಯನ್ನು ತರುವರು. ಇಬ್ಬರಿಗೂ ಗರಿಕೆಯಿಂದ ಎಣ್ಣೆಯನ್ನು ತೆಗೆದುಕೊಂಡು ತಲೆ, ಭುಜ, ಮಂಡಿಗೆ ಹಚ್ಚುವರು. ಮುತ್ತೈದೆಯರ ನಂತರ ವಧು, ವರರ ಸೋದರಮಾವ ಎಣ್ಣೆ ಹಚ್ಚುತ್ತಾನೆ. ಅನಂತರ ಆ ಸಮುದಾಯದ ಕೆಲವು ಹಿರಿಯರು ಎಣ್ಣೆ ಹಚ್ಚುತ್ತಾರೆ.

### ೪ : ೬ : ೫ ಉಗುರು ತೆಗೆಯುವ ಶಾಸ್ತ್ರ

ಎಣ್ಣೆ ಎರೆಯುವ ಶಾಸ್ತ್ರದ ತರುವಾಯ ವರನನ್ನು ಹಸೆಮಣೆಗೆ ಕರೆತರುತ್ತಾರೆ. ಕ್ಷೌರಿಕನು ವರನ ಉಗುರು, ಗಡ್ಡಗಳಿಗೆ ತನ್ನ ಕತ್ತಿಯಿಂದ ಸಾಂಕೇತಿಕವಾಗಿ ಸ್ಪರ್ಶಿಸುತ್ತಾನೆ. ಹಿಂದೆ ಕ್ಷೌರಿಕನು ಉಗುರುಗಳನ್ನು ತೆಗೆಯುತ್ತಿದ್ದನು. ವರನ ನಂತರ ವಧುವಿಗೂ ತನ್ನ ಕತ್ತಿಯಿಂದ ಉಗುರುಗಳನ್ನು ಸ್ಪರ್ಶಿಸುತ್ತಾನೆ. ಇಲ್ಲಿಗೆ ಉಗುರು ಶಾಸ್ತ್ರ ಮುಗಿಯುತ್ತದೆ.

### ೪ : ೬ : ೬ ನೀರೆರೆಯುವ ಶಾಸ್ತ್ರ

ವಧುವರರನ್ನು ಚಪ್ಪರದ ಕೆಳಗಿರುವ ಹಸೆಮಣೆಗಳ ಮೇಲೆ ಎದುರು ಬದುರಾಗಿ ಕೂರಿಸುತ್ತಾರೆ. ಕಾಯಿಸಿದ ಐದು ತಂಬಿಗೆ ನೀರನ್ನು ವರನು ವಧುವಿಗೆ ಎರೆಯುತ್ತಾನೆ. ನಂತರ ವಧುವು ವರನಿಗೆ ಐದು ತಂಬಿಗೆ ನೀರನ್ನು ಎರೆಯುತ್ತಾಳೆ. ನಂತರ ವರನ ಸೋದರಮಾವ, ವಧುವಿನ ಸೋದರ ಮಾವಂದಿರು ಅಲ್ಲದೇ ಕೆಲವು ಮುತ್ತೈದೆಯರು, ಹಿರಿಯರು ನೀರೆರೆಯುತ್ತಾರೆ. ಕ್ಷೌರಿಕನು ಮಡಿಬಟ್ಟೆಯನ್ನು ನೀಡುತ್ತಾನೆ. ನಂತರ ವಧುವರರಿಬ್ಬರೂ ಒಳ ನಡೆಯುತ್ತಾರೆ. ಈ ಶಾಸ್ತ್ರಗಳು ಮುಗಿಯುವಷ್ಟರಲ್ಲಿ ಬೆಳಗಾಗಿರುತ್ತದೆ.

ವಿವಾಹದ ಎರಡನೆಯ ದಿವಸದ ಮೊದಲ ಕೆಲಸವೆಂದರೆ ಚಪ್ಪರದಲ್ಲಿ ಮೇಲ್‌ಕಟ್ಟನ್ನು ಕಟ್ಟುವುದು. ಇದನ್ನು ಕ್ಷೌರಿಕನಿಂದ ಕಟ್ಟಿಸುವ ವಿಶಿಷ್ಟ ಪದ್ಧತಿ ಒಡಿಗ ಸಮುದಾಯದಲ್ಲಿದೆ. ಚಪ್ಪರದ ಒಂದು ಕಂಬಕ್ಕೆ ಪೂಜೆಯನ್ನು ಸಲ್ಲಿಸಿ, ಧಾರೆ ನಡೆಯುವ ಸ್ಥಳದಲ್ಲಿ ಬಿಳಿ ಮತ್ತು ಕೆಂಪು ವಸ್ತ್ರಗಳನ್ನು ಚಪ್ಪರದ ಮೇಲ್ಭಾಗದಲ್ಲಿ ಕಟ್ಟುತ್ತಾನೆ. ಇದನ್ನೇ 'ಮೇಲ್ಕಟ್ಟು' ಎಂದು ಕರೆಯಲಾಗುತ್ತದೆ. ಹಾಗೂ ಧಾರೆಯ ಕಂಬಕ್ಕೆ ಒಂದು ಕನ್ನಡಿಯನ್ನು ಕಟ್ಟುತ್ತಾನೆ. ಮೇಲ್ಕಟ್ಟನ್ನು ಕಟ್ಟಿದ ಕ್ಷೌರಿಕನಿಗೆ ಅಕ್ಕಿ, ಬೆಲ್ಲ, ಎಲೆ, ಅಡಿಕೆಯನ್ನು ವಧುವಿನ ಕಡೆಯವರು ನೀಡುತ್ತಾರೆ.

### ೪ : ೬ : ೭ ಹರಿಣೆ ತರುವ ಶಾಸ್ತ್ರ

ವಧುವಿನ ಮನೆಯ ದೇವರ ಕೋಣೆಯಲ್ಲಿ, ಐದು ಗಿಂಡಿಗಳು, ಅರಿಶಿನ, ಕುಂಕುಮ, ಹೂವು, ಕಾಯಿ ಇತರೆ ಪೂಜಾ ಸಾಮಾಗ್ರಿಗಳೊಂದಿಗೆ, ಒಂದು ಕುಡುಗೋಲನ್ನು ತಟ್ಟೆಯಲ್ಲಿ ಇಟ್ಟುಕೊಂಡು ತೆಂಗಿನ, ಹೊಂಬಾಳೆಯನ್ನು ತೆಗೆದುಕೊಳ್ಳುತ್ತಾರೆ. ಸಮುದಾಯದ ಐವರು ಬಾಲಕಿಯರು, ಮುತ್ತೈದೆಯರು, ಹಿರಿಯರು, ವಧುವಿನ ಸೋದರಮಾವ ಮುಂತಾದವರು ಮಂಗಳವಾದ್ಯಗಳೊಂದಿಗೆ 'ಹರಿಣೆ' ತರಲು ಹೊರಡುವರು. ಹೊಳೆಯ ದಂಡೆಯಲ್ಲಿ ಸ್ವಲ್ಪ ಸ್ಥಳವನ್ನು ಸ್ವಚ್ಛಗೊಳಿಸಿ ಪಕ್ಕದಲ್ಲಿ ಕುಡುಗೋಲನ್ನಿಟ್ಟು, ಕಳಸಗಳೊಂದಿಗೆ ಪೂಜಿಸುತ್ತಾರೆ. ನಾಲ್ಕು ಚಿಕ್ಕ ಕಳಸ ಹಾಗೂ ಒಂದು ದೊಡ್ಡ ಕಳಸಗಳಿಗೆ ಹೊಂಬಾಳೆ ಇಟ್ಟು ಅರಿಶಿನ, ಕುಂಕುಮ, ಹಚ್ಚುವರು. ಕಳಸಗಳಿಗೆ ಆರತಿ ಮಾಡಿ ಐದು ಗಿಂಡಿಗಳಲ್ಲಿ ಹೊಳೆಯ ನೀರನ್ನು ತುಂಬಿಕೊಂಡು ತಲೆಯ ಮೇಲೆ ಹೊತ್ತುಕೊಂಡು ಮಂಗಳವಾದ್ಯಗಳಿಂದ ವಧುವಿನ ಮನೆಗೆ ಬರುತ್ತಾರೆ. ಇದನ್ನು 'ದೇವರು ತರುವ ಕಾರ್ಯ' ಎಂದು ಒಡಿಗರು ಕರೆಯುವರು.

### ೪ : ೬ : ೮ ಅಸೆ ಜಗಳಿ ಶಾಸ್ತ್ರ

ಹೊಳೆಗೆ ಹೋಗಿ ಹರಿಣೆ ತರುವಷ್ಟರಲ್ಲಿ ಇತ್ತ ಕಡೆ ಹಿರಿಯರೆಲ್ಲ ಸೇರಿ ಮನೆಯ ಚಪ್ಪರದ ನಡುವೆ ಒಂದು ಧಾರೆಕಂಬಕ್ಕೆ ಚಪ್ಪಟೆಯಾಕಾರದ ಕಟ್ಟೆಯನ್ನು ಕಟ್ಟುವರು. ಅದನ್ನೇ 'ಅಸೆ ಜಗಳಿ' ಅಥವಾ 'ಬೇಡರ ಕಣ್ಣಪ್ಪನ ಪೂಜೆ' ಎಂದು ಕರೆಯುತ್ತಾರೆ.

ಒಡಿಗ ಸಮುದಾಯದ ಹಿರಿಯರೆಲ್ಲರೂ ಸೇರಿ ಬೇಡರ ಕಣ್ಣಪ್ಪನ ಪೂಜೆಯನ್ನು ಶ್ರದ್ಧೆಯಿಂದ ಕಟ್ಟುನಿಟ್ಟಾಗಿ ಮಾಡುತ್ತಾರೆ. ಸುತ್ತಲೂ ಚಾಪೆಯನ್ನು ಹಾಕಿರುವರು, ಒಂದೊಂದು ಮನೆತನದವರು ಒಂದೊಂದು ಚಾಪೆಯ ಮೇಲೆ

ಕುಳಿತುಕೊಳ್ಳುತ್ತಾರೆ. ಬೇಡರ ಕಣ್ಣಪ್ಪನ ಪೂಜೆಯು ಆರಂಭವಾದಾಗ ಯಾರೂ ಮಾತನಾಡುವಂತಿಲ್ಲ, ಓಡಾಡುವಂತಿಲ್ಲ. ಎಲ್ಲರೂ ತಮ್ಮ ಅಂಗಿಗಳನ್ನು ಬಿಚ್ಚಿ ತಲೆಗೆ ಪೇಟವನ್ನು ಕಟ್ಟಿಕೊಂಡು ಅಲ್ಲದೇ ಬಾಯಿಗೆ ಬಟ್ಟೆಯನ್ನು ಕಟ್ಟಿಕೊಂಡು ಕುಳಿತಿರುತ್ತಾರೆ. ಬೇಡರ ಕಣ್ಣಪ್ಪನ ಒಂದು ಭಾವಚಿತ್ರವನ್ನು ಅಸೆಜಗಳಿಯ ಮೇಲಿಟ್ಟು ಪೂಜೆಯನ್ನು ಮಾಡುವರು. ಅಸೆಜಗಳಿಯ ಮೇಲೆ ಸಾರಿಸಿ, ರಂಗೋಲಿಯನ್ನು ಹಾಕಿರುತ್ತಾರೆ. ಕುಂಕುಮ, ವಿಭೂತಿ, ಅರಿಶಿನಗಳಿಂದ ಸಿಂಗರಿಸಿರುವರು. ಬೇಡರ ಕಣ್ಣಪ್ಪನಿಗೆ ಪ್ರಸಾದವನ್ನಾಗಿ ಹಣ್ಣು ಕಾಯಿಯ ಜೊತೆಗೆ 'ಬೂದುಗುಂಬಳ ಪ್ರಸಾದ'ವನ್ನು ನೈವೇದ್ಯ ಮಾಡುತ್ತಾರೆ. ಬೂದುಗುಂಬಳ ಪ್ರಸಾದವನ್ನು ಬೆಲ್ಲ, ಬಾಳೆಕಾಯಿ, ಜೀರಿಗೆಪುಡಿ, ತುಪ್ಪ, ಈರುಳ್ಳಿ, ಬೆಳ್ಳುಳ್ಳಿ, ತೆಂಗಿನಕಾಯಿ, ಲವಂಗ, ಏಲಕ್ಕಿ, ಚಕ್ಕೆ ಮತ್ತು ಬೂದುಗುಂಬಳಕಾಯಿಯನ್ನು ಸೇರಿಸಿ ತಯಾರಿಸುವರು. ಈ ನೈವೇದ್ಯದೊಂದಿಗೆ ಪೂಜೆಯಾದ ಮೇಲೆ ದೇವರಿಗೆ ವೀಳ್ಯವನ್ನು ತೆಗೆಯುವ ರೂಢಿಯು ಈ ಸಮುದಾಯದಲ್ಲಿದೆ. ಇಪ್ಪತ್ತು ಎಲೆ ಹಾಗೂ ಹತ್ತು ಅಡಿಕೆಗಳನ್ನು ದೇವರಿಗೆ 'ಮೀಸಲು' ಎಂದು ತೆಗೆದಿಡುತ್ತಾರೆ. ಇದಾದ ನಂತರ ಸಮುದಾಯದ ಐದು ಮಂದಿ ಹಿರಿಯರು ಕೈ ತೊಳೆದುಕೊಂಡು ಉಳಿದೆಲ್ಲಾ ಮನೆತನಗಳಿಗೆ ವೀಳ್ಯವನ್ನು ಹಂಚುವರು. ಈ ಸಮುದಾಯದ 'ಮಾಸಲು' ಎಂಬ ಪಂಗಡದ ಮನೆತನದವರಿಗೆ ಮೊದಲು ವೀಳ್ಯ ಹಂಚಲಾಗುತ್ತದೆ. ಎರಡನೇಯದಾಗಿ 'ಒಳಸಾಲು ಮನೆತನ', ಮೂರನೆಯದಾಗಿ 'ದೇವರಗುಡ್ಡ', ನಾಲ್ಕನೆಯದಾಗಿ ದೇವರಹಳ್ಳಿ ಮನೆತನ, ಐದನೆಯದಾಗಿ 'ಬೆಳಗೂಳು' ಕಡೆಯದಾಗಿ ಭೂದಾಡಿ ಮನೆತನದ ಹಿರಿಯರಿಗೆ ಇಪ್ಪತ್ತು ಎಲೆಗಳನ್ನು ನೀಡುವರು. ವೀಳ್ಯವನ್ನು ಹಂಚಿದ ಮೇಲೆ ಸಮುದಾಯದ ಬಂಧುವರ್ಗದವರಿಗೆ ಪ್ರಸಾದವನ್ನು ನೀಡುತ್ತಾರೆ.

### ೪ : ೬ : ೮ : ೧ ನಿಷೇಧಗಳು

'ಅಸೆಜಗಳಿ' ಶಾಸ್ತ್ರದಲ್ಲಿ ಕೆಲವು ನಿಷೇಧಗಳನ್ನು ಈ ಒಡಿಗ ಸಮುದಾಯವು ರೂಢಿಯಲ್ಲಿಟ್ಟುಕೊಂಡಿದೆ.

* ಅಸೆಜಗಳಿ ಪೂಜೆಯ ಸಂದರ್ಭದಲ್ಲಿ ಹೆಣ್ಣುಮಕ್ಕಳಿಗೆ ಪ್ರವೇಶವಿಲ್ಲ ಮತ್ತು ಯಾರೂ ಓಡಾಡುವಂತಿಲ್ಲ. ಒಂದು ಕಡೆ ದೂರದಲ್ಲಿರುತ್ತಾರೆ.
* ಒಡಿಗ ಸಮುದಾಯದ ಮನೆತನದ ಒಂದು ಪಂಗಡವಾದ 'ಕಡಬೂರು' ಮನೆತನದವರಿಗೆ ಅಸೆಜಗಳಿ ಪೂಜೆಯ ವೀಳ್ಯವನ್ನು ಹಂಚುವುದಿಲ್ಲ. ಮಿಕ್ಕಂತೆ ಮಾಸಾಲು, ಒಳಸಾಲು, ದೇವರಗುಡ್ಡ, ದೇವರಹಳ್ಳಿ, ಬೆಳಗೂಳು ಭೂದಾಡಿ ಮನೆತನದವರಿಗೆ ಮಾತ್ರ ವೀಳ್ಯ ಕೊಡುತ್ತಾರೆ. ಆದರೆ ಕಡಬೂರು ಮನೆತನದವರು ಈ ಪೂಜೆಗೆ ಬರಬಹುದಾಗಿದೆ.
* ಕಡಬೂರು ಮನೆತನದವರು ಒಡಿಗ ಸಮುದಾಯಕ್ಕೆ ಹೊಸದಾಗಿ ಸೇರಿದ್ದರಿಂದ ಈ ನಿಷೇಧ ಅವರಿಗಿದೆ. ಅಸೆ ಜಗಳಿಶಾಸ್ತ್ರದಲ್ಲಿ ಮುಖ್ಯವಾಗಿ ಬೇಡರಕಣ್ಣಪ್ಪನ ಪೂಜೆಯಿದೆ. ಇದರಿಂದಾಗಿ ಈ ಒಡಿಗ ಸಮುದಾಯಕ್ಕೂ ಚಿತ್ರದುರ್ಗದ ಬೇಡರಿಗೂ ಸಂಬಂಧವಿದೆಯೆಂಬುದನ್ನು ಗುರುತಿಸಲು ಅವಕಾಶವಿದೆ. ಬೇಡರೂ ಕಣ್ಣಪ್ಪನನ್ನು ಪೂಜಿಸುತ್ತಾರೆ. ಅಸೆ ಜಗಳಿ ಎಂಬುದು ಬಹುಶಃ ಜಗುಲಿ= ಕಟ್ಟೆ>ಜಗಳಿ ಕಟ್ಟೆಯನ್ನು ಕಟ್ಟಿ ಅಸೆಯನ್ನು ಹಾಕಿ

ಸಿಂಗರಿಸಿ ಬೇಡರ ಕಣ್ಣಪ್ಪನ ಭಾವಚಿತ್ರಕ್ಕೆ ಪೂಜೆ ಮಾಡುವುದರಿಂದ ಇದಕ್ಕೆ 'ಅಸೆ ಜಗಳಿಶಾಸ್ತ್ರ' ಎಂದು ಕರೆಯುವ ಪದ್ಧತಿ ಬಂದಿರಬಹುದು. ಇಂದು ಜಗುಲಿಯ ಮೇಲೆ ಬೇಡರ ಕಣ್ಣಪ್ಪನ ಭಾವಚಿತ್ರ ಇಡುವುದು ನಿಂತುಹೋಗಿದೆ. ಸಾಂಕೇತಿಕವಾಗಿ ಕಟ್ಟೆಗೆ ಪೂಜೆಯನ್ನು ಸಲ್ಲಿಸುತ್ತಾರೆ.

**೪ : ೬ : ೯ ಮದುಮಗನ ಶೃಂಗಾರ**

ಅಸೆಜಗಳಿಶಾಸ್ತ್ರದ ತರುವಾಯ ಮದುಮಗನನ್ನು ಸಿಂಗರಿಸಲಾಗುತ್ತದೆ. ಇವನಿಗೆ ಹದಿನಾರು ಮೊಳದ ಬಿಳಿ ಪಂಚೆಯಿಂದ ಕಚ್ಚೆಯನ್ನು ಕಟ್ಟಿ, ಬಿಳಿ ಅಂಗಿಯನ್ನು ತೊಡಿಸುತ್ತಾರೆ. ಸಡುವಿಗೆ ಪಟ್ಟಿಯೊಂದನ್ನು ಕಟ್ಟಿ ಅದಕ್ಕೆ ಬೆಳ್ಳಿಯ ಸಣ್ಣ ಕತ್ತಿಯನ್ನು ಇಟ್ಟು, ಹಣೆಗೆ ವಿಭೂತಿ ಮತ್ತು ಕುಂಕಮವನ್ನಿಟ್ಟು ಬಾಸಿಂಗ ಕಟ್ಟುವರು. ತಲೆಗೆ ಕೆಂಪು ಬಣ್ಣದ ಪೇಟವನ್ನು ಇಡುತ್ತಾರೆ. ಪೇಟದ ಸುತ್ತಲೂ ವಿವಿಧ ಬಗೆಯ ಹೂಗಳಿಂದ ಸಿಂಗರಿಸುವರು. ಬಲಗೈಗೆ ಕಂಕಣದ ದಾರವನ್ನು ಕಟ್ಟುತ್ತಾರೆ. ಅಲ್ಲದೇ ಸಮುದಾಯದ ಕುಲಗುರುಗಳು ನೀಡಿದ 'ಮುದ್ರೆ ಉಂಗುರು'ವನ್ನು ಬೆರಳಿಗೆ ಹಾಕುತ್ತಾರೆ ಹಾಗೂ ಗುರುಗಳು ನೀಡಿದ 'ಕೊಂಡ ಕೋಲು'ನ್ನು ಮದುಮಗನು ಹಿಡಿದುಕೊಂಡಿರುತ್ತಾನೆ. ಈ ಸಿಂಗರಿಸುವ ಕಾರ್ಯವನ್ನು ವರನ ಸೋದರಮಾವ ಮತ್ತು ಸ್ನೇಹಿತರು ಮಾಡುತ್ತಾರೆ.

**೪ : ೬ : ೧೦ ಮದುಮಗಳ ಶೃಂಗಾರ**

ಒಡಿಗರು ಮದುಮಗಳ ಶೃಂಗಾರಕ್ಕೆ ಹೆಚ್ಚು ಮಹತ್ವ ನೀಡುತ್ತಾರೆ. ಇವಳಿಗೆ ಬಿಳಿಯ ಧಾರೆ ಸೀರೆಯನ್ನುಡಿಸಿ, ಹಣೆಗೆ ವಿಭೂತಿ, ಕುಂಕುಮವನ್ನಿಟ್ಟು ಬಾಸಿಂಗವನ್ನು ಕಟ್ಟುವರು. ಬಾಸಿಂಗದ ಸುತ್ತಲೂ ವಿವಿಧ ರೀತಿಯ ಹೂವಿನ ಅಲಂಕಾರವಿರುತ್ತದೆ. ವಧುವಿನ ಸೊಂಟಕ್ಕೆ 'ಡಾಬು', ಕೈ ಬೆರಳಿಗೆ ಮುದ್ರೆಯುಂಗುರು, ಎರಡು ಮುಂಗೈಗಳಿಗೆ ಹಸಿರು ಬಳೆಯನ್ನು ಹಾಕುತ್ತಾರೆ. ಅಲ್ಲದೇ ಮೂಗು, ಕಿವಿಗಳಿಗೆ ಚಿನ್ನಾಭರಣಗಳಿರುತ್ತವೆ. ವಧುವಿಗೂ ಕುಲಗುರುಗಳು ನೀಡಿದ 'ಕೊಂಡಕೋಲು' ನೀಡುತ್ತಾರೆ. ಇವೆಲ್ಲವುಗಳನ್ನು ನೀಡುವುದರಿಂದ ವಧುವಿಗೆ ದುಷ್ಟಶಕ್ತಿಗಳು ತಗುಲುವುದಿಲ್ಲ ಎಂಬ ನಂಬಿಕೆ ಇವರಲ್ಲಿದೆ.

ವರ ಮತ್ತು ವಧುಗಳಿಬ್ಬರಿಗೂ ನೀಡುವ 'ಕೊಂಡಕೋಲ'ನ್ನು ಅದೇ ಸಮುದಾಯದ 'ಕೊಂಡಕೋಲು ದಾಸರು' ಎಂಬ ಪಂಗಡದವರ ಮನೆಯಲ್ಲಿ ಇಟ್ಟಿರುತ್ತಾರೆ. ಒಡಿಗರ ಯಾವುದೇ ಶುಭಕಾರ್ಯದಲ್ಲಿ ಈ ಕೋಲುಗಳನ್ನು ತಂದುಕೊಡುವರು. ಈ ಕೋಲನ್ನು ತಂದಂತಹ ದಾಸರಿಗೆ ಮದುವೆಯ ಮನೆಯವರು ಕಾಣಿಕೆಯನ್ನು ನೀಡುತ್ತಾರೆ.

**೪ : ೬ : ೧೧ ಧಾರೆಶಾಸ್ತ್ರ**

ವಧುವನ್ನು ವರನಿಗೆ ಒಪ್ಪಿಸುವ ವಿಶಿಷ್ಟ ಸಂಪ್ರದಾಯವನ್ನು ಒಡಿಗರು 'ಧಾರೆಶಾಸ್ತ್ರ' ಎಂದು ಕರೆಯುವರು. ತಾಳಿಯನ್ನು ಕಟ್ಟುವ ಮುನ್ನ ವಧುವಿನ ತಂದೆ, ತಾಯಿ, ಬಂಧುಗಳು ಧಾರೆಯೆರೆಯುತ್ತಾರೆ. ಶೃಂಗಾರಗೊಂಡ ವಧು, ವರರಿಬ್ಬರನ್ನು 'ಧಾರೆ ಚಪ್ಪರ'ಕ್ಕೆ ಕರೆತರುವರು. ಅಲ್ಲಿರುವ ಬೇಡರ ಕಣ್ಣಪ್ಪನಿಗೆ ಇಬ್ಬರು ಪೂಜೆಯನ್ನು ಸಲ್ಲಿಸುತ್ತಾರೆ. ಚಪ್ಪರದ ಕಂಬಕ್ಕೆ ಕಟ್ಟಿದ ಕನ್ನಡಿಯಲ್ಲಿ ವರನ ಮುಖವನ್ನು ವಧುವಿಗೆ, ವಧುವಿನ ಮುಖವನ್ನು ವರನಿಗೆ ತೋರಿಸುವರು.

ನಂತರ ಈ ಸಮುದಾಯದ ಕುಲುಗುರುಗಳು ಅಪ್ಪಣೆ ಪಡೆದು ವರನ ಕೈಕೆಳಗೆ, ವಧುವಿನ ಎರಡು ಕೈಗಳನ್ನು ಇಡಿಸಿ, ಇಬ್ಬರ ಕೈಯಲ್ಲಿ ಎಲೆ, ಅಡಿಕೆ, ಹೂ, ಹಣ್ಣು ಕೊಡುತ್ತಾರೆ. ಮೊದಲು ವರನ ತಂದೆ, ತಾಯಿ ಹಾಗೂ ಬಂಧುವರ್ಗದ ಹಿರಿಯರು ಧಾರೆಯೆರೆದ ನಂತರ ವಧುವಿನ ತಂದೆ, ತಾಯಿ, ಸೋದರಮಾವ, ಕೆಲವು ಹಿರಿಯರು ವರನಿಗೆ ವಧುವನ್ನು ಧಾರೆಯೆರೆದು ಕೊಡುವರು. ಧಾರೆಯೆರೆಯುವ ಸಂದರ್ಭದಲ್ಲಿ ವಧುವರರ ಕೈಕೆಳಗಡೆ ಒಂದು 'ಕೊಳಗ'ವನ್ನಿಟ್ಟಿರುತ್ತಾರೆ. ಧಾರೆಯೆರೆಯುವ ಸಮಯದಲ್ಲಿ ಹಾಕಿದ ಹಾಲು ಈ ಕೊಳಗದಲ್ಲಿ ಬೀಳುತ್ತದೆ. ಈ ಕೊಳಗದ ಪಕ್ಕದಲ್ಲಿ ಮತ್ತೊಂದು ಕೊಳಗವಿರುತ್ತದೆ. ಇದರಲ್ಲಿ ಎರಡು ಗಿಂಡಿ ಹಾಲು-ನೀರು ಸೇರಿಸಿ ಹಾಕಿರುತ್ತಾರೆ. ಈ ಹಾಲು-ನೀರುಗಳು ಮುಂದೆ ಸಂಸಾರದಲ್ಲಿ ಬರುವಂತಹ ಕಷ್ಟ-ಸುಖಗಳೆಂದು ಎರಡನ್ನು ಸಮಾನವಾಗಿ ಸ್ವೀಕರಿಸಬೇಕೆಂದು ತಿಳಿಸುತ್ತವೆಂಬುದು ಈ ಸಮುದಾಯದ ನಂಬಿಕೆ. ಇದರಿಂದಾಗಿ ಈ ಸಾಂಕೇತಿಕವನ್ನು ಬಳಸುತ್ತಾರೆ.

**೪ : ೬ : ೧೨ ತಾಳಿಶಾಸ್ತ್ರ**

ತಾಳಿಶಾಸ್ತ್ರ ಮದುವೆಯ ಅತ್ಯಂತ ಮುಖ್ಯ ಘಟ್ಟ. ಧಾರೆಯೆರೆಯುವ ಕಾರ್ಯದ ನಂತರ ವಧುವರರನ್ನು ಎದುರು ಬದುರಾಗಿ ಚಪ್ಪರದಲ್ಲಿ ನಿಲ್ಲಿಸುತ್ತಾರೆ. ಬಂಧುವರ್ಗದವರೆಲ್ಲರೂ ಸಮುದಾಯದ ಹಿರಿಯರು ಇರುವರು. ಕುಲಗುರುಗಳು ಸಮುದಾಯದ ಹಿರಿಯರಿಗೆ ತಾಳಿಯನ್ನು ಕೊಡುತ್ತಾನೆ. ಆ ತಾಳಿಯನ್ನು ಗುರು ಹಿರಿಯರು, ಮುತ್ತೈದೆಯರು ಮುಟ್ಟುವ ಮೂಲಕ ಸಮ್ಮತಿ ಸೂಚಿಸುತ್ತಾರೆ. ನಂತರ ಕುಲದೈವವನ್ನು ನೆನೆಯುತ್ತಾ ''ತಾಳಿ ಕಟ್ಟಲು ಅಪ್ಪಣೇನಾ'' ಎಂದು ಕೇಳುವರು. ಆಗ ಗುರುಗಳು ಮತ್ತು ಹಿರಿಯರು ಅಪ್ಪಣೆಯನ್ನು ಸೂಚಿಸುತ್ತಾರೆ. ಹಿರಿಯರ ಅಪ್ಪಣೆಯಂತೆ ವರನ ಕೈಗೆ ತಾಳಿ ನೀಡುತ್ತಾರೆ. ಕುಲಗುರುವಿನ ಮಂತ್ರದೊಂದಿಗೆ ವಧುವಿನ ಕೊರಳಿಗೆ ತಾಳಿಯನ್ನು ಕಟ್ಟುತ್ತಾನೆ.

ಒಡಿಗರು ತಾಳಿಯನ್ನು ರಾತ್ರಿಯ ಸಮಯದಲ್ಲಿ ಕಟ್ಟುತ್ತಾರೆ. ಇನ್ನೂ ಕೆಲವರು ನೀರೆರೆಯುವ ಶಾಸ್ತ್ರದ ದಿನವೇ ರಾತ್ರಿಯ ಸಮಯದಲ್ಲಿ ಕಟ್ಟುವರು. ಇದು ಅವರವರ ಆರ್ಥಿಕ ಸ್ಥಿತಿಯನ್ನು ಅವಲಂಬಿಸಿ ನಡೆಯುತ್ತದೆ.

ತಾಳಿ ಶಾಸ್ತ್ರವಾದ ದಿನ ವಧುವರರು ವಧುವಿನ ಮನೆಯಲ್ಲಿಯೇ ಇರಬೇಕು. ನಂತರದ ದಿನ ಮಧ್ಯಾಹ್ನದ ಸಮಯದಲ್ಲಿ ವರನ ಮನೆಗೆ ಹೊರಡಲು ಸಿದ್ಧರಾಗುತ್ತಾರೆ. ವರನ ಮನೆಗೆ ಬೀಗರು ಊಟಕ್ಕೆ ಹೋಗುವಾಗ ವಧುವಿನ ಮನೆಯ ಚಪ್ಪರದ ಒಂದು ಕಂಬವನ್ನು ಕಿತ್ತು ಹಾಕುವರು. ತಮ್ಮ ಮನೆಯ ಒಬ್ಬ ಹೆಣ್ಣನ್ನು ಕಳುಹಿಸಿಕೊಟ್ಟೆವು ಎಂಬ ಅರ್ಥದಲ್ಲಿ ಈ ಕಂಬವನ್ನು ಕಿತ್ತುಹಾಕುತ್ತಾರೆ. ಅಲ್ಲದೇ ಅಸೆಜಗಳಿ ಶಾಸ್ತ್ರದ ''ಮೇಟಿಕಂಬ''ವನ್ನು ಮದುವೆಯಾದ ಒಂದು ವರ್ಷದವರಿಗೆ ಕೀಳದಂತೆ ನೋಡಿಕೊಳ್ಳ ಬೇಕಾಗುತ್ತದೆ. ಚಪ್ಪರದಲ್ಲಿ ಕಟ್ಟಿದ ''ಮೇಲ್‌ಕಟ್ಟನ್ನು'' ವರನ ಕಡೆಯವರು ಒಂದು ಕ್ಷೌರಿಕನಿಗೆ ಅಪ್ಪಣೆ ನೀಡಿ ಬಿಚ್ಚಿಸುವರು. ಮೇಲ್‌ಕಟ್ಟನ್ನು ಬಿಚ್ಚಿದ ಅವನಿಗೆ ಅಕ್ಕಿ, ಬೆಲ್ಲ, ಬೇಳೆಯು ಕಾಣಿಕೆಯಾಗಿ ನೀಡುತ್ತಾರೆ.

**೪ : ೬ : ೧೩ ಬೀಗರ ಊಟ**

ಮದುವೆಯ ಕಾರ್ಯಕ್ರಮಗಳೆಲ್ಲ ಮುಗಿದ ಮೇಲೆ ವಧುವು ಸಂಸಾರಕ್ಕೆಂದು ಮೊದಲ ಬಾರಿಗೆ ವರನ ಮನೆಗ

ಶಾಸ್ತ್ರೋಕ್ತವಾಗಿ ಬರುವರು. ವಧುವಿನ ಜೊತೆಯಲ್ಲಿ ಅವಳ ಕೆಲವು ಬಂಧುಗಳು ಬರುತ್ತಾರೆ. ಆರಂಭದಲ್ಲಿ ವರನ ಮನೆಗೆ ಬರುವಾಗ ವಧುವು ಒಂದು ಕೊಡ ತೆಗೆದುಕೊಂಡು ಮುತ್ತೈದೆಯರೊಡನೆ ಹೊಳೆಗೆ ಹೋಗುತ್ತಾಳೆ. ಗಂಗೆಯನ್ನು ಪೂಜಿಸಿ, ಕೊಡದಲ್ಲಿ ನೀರು ತುಂಬಿಕೊಂಡು ವರನ ಮನೆಯನ್ನು ಪ್ರವೇಶಿಸಿ, ಆ ಕೊಡವನ್ನು ದೇವರ ಮನೆಯಲ್ಲಿಟ್ಟು ಪೂಜಿಸುತ್ತಾಳೆ. ನಂತರ ಆಕಳದ ಹಾಲನ್ನು ಕರೆದು ಪಾಯಸವನ್ನು ತಯಾರಿಸಿ ಮನೆಮಂದಿಗೆಲ್ಲಾ ಊಟವನ್ನು ಬಡಿಸುತ್ತಾಳೆ. ಕೆಲವರು ಮಾಂಸಾಹಾರವನ್ನು ಮಾಡಿಸುತ್ತಾರೆ. ನಂತರ ಕಂಕಣವನ್ನು ಬಿಚ್ಚಿಸುವರು. ವಧು ವರರನ್ನು ಸಾಯಂಕಾಲ ಮನೆ ತುಂಬಿಸುವಾಗ ಅಕ್ಕ, ತಂಗಿ, ಮಾವಂದಿರು ಇವರನ್ನು ಬಾಗಿಲಲ್ಲಿ ತಡೆಹಿಡಿದು ಕೆಲವು ಹಾಸ್ಯದ ನುಡಿಗಳನ್ನು ಆಡುತ್ತಾರೆ. ಇವರು ಕೇಳಿದ ಬೇಡಿಕೆಗಳಿಗೆ ವಧುವರರು ಒಪ್ಪಿಕೊಳ್ಳಬೇಕು. ಇಲ್ಲವಾದರೆ ದಾರಿ ಬಿಡುವುದಿಲ್ಲ. ಅಲ್ಲದೇ ವಧುವರರನ್ನು ನಿಮಗೆ ಗಂಡುಮಗುವಾದರೆ ಅತ್ತೆ ಮನೆಗೆ ಕೊಡಬೇಕು, ಹೆಣ್ಣಾದರೆ ನಮ್ಮ ಮಗನಿಗೆ ಕೊಡಬೇಕೆಂಬ ಷರತ್ತು ಹಾಕುವರು. ವಧುವರರು ಒಪ್ಪಿಗೆ ನೀಡಿದಾಗ ಒಳಗೆ ಬಿಡುತ್ತಾರೆ.

**೪ : ೬ : ೧೪ ನಿಷೇಕ ಕಾರ್ಯ**

ಮದುವೆಯಾದ ವಧು-ವರರನ್ನು ಮೊದಲ ಬಾರಿಗೆ ದೈಹಿಕವಾಗಿ ಸೇರಿಸುವ ಕಾರ್ಯಕ್ಕೆ ನಿಷೇಕವೆಂದು ಕರೆಯುತ್ತಾರೆ. ಮದುವೆಯಾದ ದಿವಸವೇ ಈ ಕಾರ್ಯ ಮಾಡುವ ರೂಢಿಯಿದೆ. ಈ ಹಿಂದೆ ಬಾಲ್ಯವಿವಾಹಗಳಿದ್ದುದರಿಂದ, ಹೆಣ್ಣು ಋತುಮತಿಯಾದ ಮೂರು ತಿಂಗಳಿಗೆ ಗಂಡನ ಮನೆಗೆ ಕರೆತಂದು ಈ ಕಾರ್ಯ ನೆರವೇರಿಸುತ್ತಿದ್ದರು.

**೪ : ೭ ವಿವಾಹ ಪದ್ಧತಿಗಳು**

ಬುಡಕಟ್ಟು ಸಮುದಾಯಗಳು ತಮ್ಮದೇ ಆದ ರೀತಿಯಲ್ಲಿ ಅನೇಕ ಆಚರಣೆಗಳನ್ನು ರೂಢಿಸಿಕೊಂಡಿವೆ. ಈ ಆಚರಣೆಗಳು ಯಥೇಚ್ಛವಾಗಿರುವುದಿಲ್ಲ. ಒಂದೊಂದು ಆಚರಣೆ, ನಂಬಿಕೆ, ಪದ್ಧತಿಗಳಿಗೆ ಹಲವಾರು ಮಿತಿಗಳನ್ನು ಒಡ್ಡಿಕೊಂಡಿವೆ. ಒಂದು ಆಚರಣೆಗೆ ಸಂವಿಧಾನವೆಂಬಂತೆ ಕೆಲವು ಬದ್ಧತೆಗಳೂ ಇವೆ. ಇದು ಅನ್ಯ ಸಮುದಾಯ ಗಳಲ್ಲಿಯೂ ಸಾಮಾನ್ಯವಾಗಿ ಇದ್ದೇ ಇದೆ. ಒಡಿಗ ಸಮುದಾಯವೂ ಇಂತಹ ಅನೇಕ ಆಚರಣೆಗಳಿಗೆ, ಪದ್ಧತಿಗಳಿಗೆ ಕೆಲವಾರು ನಿಯಮಗಳನ್ನು ರೂಢಿಸಿಕೊಂಡು ಬಂದಿದೆ. ಮುಖ್ಯವಾಗಿ ಒಡಿಗರ ವಿವಾಹ ಪದ್ಧತಿಯಲ್ಲಿ ಕೆಲವು ಪ್ರಕಾರಗಳಿವೆ. ಅವುಗಳನ್ನು ಈ ಕೆಳಗಿನಂತೆ ವಿವರಿಸಬಹುದು.

**೪ : ೭ : ೧ ಬಹುಪತ್ನಿತ್ವ**

ವಿವಾಹಕ್ಕೆ ಸಂಬಂಧಿಸಿದಂತೆ ಈ ಸಮುದಾಯದಲ್ಲಿ ಕಟ್ಟುನಿಟ್ಟಿನ ಕ್ರಮಗಳಿವೆ. ಬಹುಪತ್ನಿತ್ವ ಒಡಿಗರಲ್ಲಿ ಇಲ್ಲ. ಒಬ್ಬ ಪುರುಷ ಒಬ್ಬಳನ್ನೇ ಮದುವೆಯಾಗಬೇಕು. ತನ್ನ ಹೆಂಡತಿಗೆ ಮಕ್ಕಳಾಗದಿದ್ದ ಪಕ್ಷದಲ್ಲಿ, ಹೆಂಡತಿಯ ಒಪ್ಪಿಗೆಯ ಮೇಲೆ ಮತ್ತೊಂದು ಹೆಣ್ಣನ್ನು ಮದುವೆಯಾಗಲು ಅವಕಾಶವಿದೆ. ವಂಶವನ್ನು ವೃದ್ಧಿಗೊಳಿಸಲು ಮಕ್ಕಳು ಬೇಕು. ಮಕ್ಕಳಾಗದಿದ್ದರೆ ಅವರಿಗೆ ಮೋಕ್ಷವಿಲ್ಲವೆಂಬ ಕಾರಣದಿಂದ ಮರುಮದುವೆಗೆ ಅವಕಾಶವಿದೆ. ಈ ಕಾರಣಗಳಿಲ್ಲದೇ ಮರುಮದುವೆಯಾದರೆ ಅವರಿಗೆ ಈ ಸಮುದಾಯದಲ್ಲಿ ದಂಡ, ಶಿಕ್ಷೆಯನ್ನು ನೀಡುವ ವ್ಯವಸ್ಥೆ ಇದೆ.

**೪ : ೭ : ೨ ವಿಧವಾ ವಿವಾಹ**

ಒಡಿಗ ಸಮುದಾಯದಲ್ಲಿ ವಿಧವೆಯು ಮದುವೆಯಾಗಲು ಅವಕಾಶವಿಲ್ಲ. ಇದರ ಬದಲಾಗಿ ಕೂಡುವಳಿ ಪದ್ಧತಿಯಿದೆ.

**೪ : ೭ : ೩ ವಿಧುರ ವಿವಾಹ**

ವಿಧುರ ವಿವಾಹ ಈ ಸಮುದಾಯದಲ್ಲಿದೆ. ತನ್ನ ಹೆಂಡತಿಯ ಮರಣದಿಂದಾಗಿ ಅವನು ಒಂಟಿಯಾಗಿದ್ದ ಪಕ್ಷದಲ್ಲಿ, ಹೆಂಡತಿಯ ತಂಗಿಯನ್ನೇ ಇಲ್ಲವೇ ಬೇರೆಯ ಹೆಣ್ಣನ್ನು ಶಾಸ್ತ್ರೋಕ್ತವಾಗಿಯೇ ಮದುವೆಯಾಗಬಹುದು.

**೪ : ೭ : ೪ ಕೂಡುವಳಿ/ಕೂಡಾವಳಿ**

ಒಡಿಗರಲ್ಲಿ ಕೂಡುವಳಿ ಪದ್ಧತಿಯಿದೆ. ಗಂಡನನ್ನು ಕಳೆದುಕೊಂಡ ಸ್ತ್ರೀಯು ತನ್ನದೇ ಸಮುದಾಯದ ಹೆಂಡತಿಯನ್ನು ಕಳೆದುಕೊಂಡ ಪುರುಷನೊಂದಿಗೆ ಕೂಡುವಳಿಯನ್ನು ಮಾಡಿಕೊಳ್ಳಬಹುದು. ಸಮುದಾಯದ ಹಿರಿಯರು ಇಬ್ಬರ ಒಪ್ಪಿಗೆಯನ್ನು ಕೇಳಿ, ತಮ್ಮ ಸಮ್ಮುಖದಲ್ಲಿ ಮದುವೆ ಮಾಡಿಸುತ್ತಾರೆ. ಕೂಡುವಳಿ ಹೆಣ್ಣಿಗೆ ಗಂಡು ಬೆಂಡಿನಿಂದ ಮಾಡಿದಂತಹ ಮಣಿ ಆಕಾರದ ಗುಂಡನ್ನು ತಾಳಿಯಾಗಿ ಕಟ್ಟುತ್ತಾನೆ. ಅಲ್ಲದೇ ಹೆಣ್ಣು ಆಭರಣದ ಬದಲಾಗಿ ಬೆಂಡಿನ ಓಲೆಗಳನ್ನು ಹಾಕಿಕೊಳ್ಳುವ ಪದ್ಧತಿ ಇದೆ.

**೪ : ೭ : ೫ ಅಂತರ್ಜಾತಿ ವಿವಾಹ**

ಒಡಿಗರಲ್ಲಿ ಅಂತರ್ಜಾತಿ ವಿವಾಹಕ್ಕೆ ಅವಕಾಶವಿಲ್ಲ. ಅಂತರ್ಜಾತಿಯಲ್ಲಿ ವಿವಾಹವಾದವರಿಗೆ ಸಮುದಾಯದಿಂದ ಕುಲಭ್ರಷ್ಟನೆಂದು ಹೊರಹಾಕಲಾಗುತ್ತದೆ. ಆಧುನಿಕವಾಗಿ ಅಂತರ್ಜಾತಿ ವಿವಾಹಗಳು ನಡೆಯುತ್ತಿವೆ. ಒಡಿಗರಲ್ಲಿ ಕೇವಲ ಒಂದು ಅಂತರ್ಜಾತಿ ವಿವಾಹವಾದ ಬಗೆಗೆ ಮಾಹಿತಿಯಿಂದ ತಿಳಿದುಬಂದಿದೆ. ಇವನಿಗೆ ಕುಲಬಹಿಷ್ಕಾರವನ್ನು ಸಮುದಾಯ ನೀಡಿದೆ. ಅಲ್ಲದೇ ಹಟ್ಟಿಯಿಂದ ಹೊರಹಾಕಲಾಗಿದೆ.

**೪ : ೭ : ೬ ವಿವಾಹ ವಿಚ್ಛೇದನ**

ಬುಡಕಟ್ಟು ಸಮುದಾಯಗಳು ಮದುವೆಯನ್ನು ಪವಿತ್ರ ಕಾರ್ಯವೆಂದು ನಂಬುತ್ತವೆ. ಆದ್ದರಿಂದ ವಿಚ್ಛೇದನಕ್ಕೆ ಅವಕಾಶವಿರುವುದಿಲ್ಲ. ಗಂಡ-ಹೆಂಡತಿಯ ನಡುವೆ ಯಾವುದೇ ವೈಮನಸ್ಸು ಏರ್ಪಟ್ಟರೂ ಸಮುದಾಯದ ಹಿರಿಯರೊಂದಿಗೆ ಬಗೆಹರಿಸಲಾಗುತ್ತದೆ. ಇಬ್ಬರಲ್ಲಿ ಯಾರು ತಪ್ಪು ಮಾಡಿದರೂ ಅವರಿಗೆ ದಂಡ ವಿಧಿಸಿ, ಶಿಕ್ಷೆಯನ್ನು ನೀಡುತ್ತಾರೆ.

**೪ : ೮ ಶವಸಂಸ್ಕಾರ**

ಬುಡಕಟ್ಟು ಸಮುದಾಯಗಳು ಸಾವನ್ನು ಜೀವನ ಅಂತ್ಯವೆಂದು ತಿಳಿದಿದ್ದಾರೆ. ಅಲ್ಲದೇ ಈ ಜೀವನ ನಶ್ವರ, ಪಾಪಕಾರ್ಯಾದಿಗಳನ್ನು ಮಾಡಿದಲ್ಲಿ, ಅನ್ಯಾಯವನ್ನು ಮಾಡಿದಲ್ಲಿ ಅವನಿಗೆ ಕೆಟ್ಟ ಸಾವು ಪ್ರಾಪ್ತವಾಗುತ್ತದೆ ಎಂದು

ನಂಬಿದ್ದಾರೆ. ಮನುಷ್ಯ ಜೀವಿಸಿದ ಕೆಲವು ಕಾಲ ದೇವರು, ಧರ್ಮವನ್ನು ನಂಬಿ ಒಳ್ಳೆಯವನಾಗಿ ಬಾಳಬೇಕೆಂಬುದು ಇವರ ಸಿದ್ಧಾಂತ. ಹುಟ್ಟಿದ ಪ್ರತಿಯೊಬ್ಬನಿಗೂ ಮರಣ ಇದ್ದೇ ಇದೆ. ಅಲ್ಲದೇ ಮರಣಿಸಿದ ಜೀವಿಗೆ ಜನ್ಮ ಇದ್ದೇ ಇದೆ ಎಂದು ನಂಬಿರುವುದರಿಂದ ಒಡಿಗರಲ್ಲಿ ಪುನರ್‌ಜನ್ಮದ ನಂಬಿಕೆಯಿದೆ.

''ಮನುಷ್ಯನಲ್ಲಿನ ಚೈತನ್ಯ ಬೇರ್ಪಡುವುದರ ಕಾರಣವೇ ಮರಣಯೆಂಬುದನ್ನು ಎಸ್ಕಿಮೋ, ನಾರ್ಥ ಅಮೇರಿಕನ್ನರು, ತೋಡರು, ಟ್ರೋಬ್ರಿಯಾಂಡ್ ದ್ವೀಪ ನಿವಾಸಿಗಳು ನಂಬಿದ್ದಾರೆ. ಮನುಷ್ಯನ ಬದುಕಿಗೆ ಕಾರಣವಾಗಿರುವ ಚೈತನ್ಯ ಅವನ ಶರೀರದಿಂದ ಫಲಾಯನವಾಗದಿರಲಿ ಎಂದು ಸೈಬೀರಿಯಾ, ಆಸ್ಟ್ರೇಲಿಯಾದ ಜನರು ಔಷಧಿಯನ್ನು ಕೊಡುತ್ತಿದ್ದರಂತೆ''.[೬] ಇದೊಂದು ನಂಬಿಕೆ ಇರಬಹುದು. ಸಾವು ನಿಖರವಾದ ಮೇಲೆ ಜೀವ ನಿರ್ಜೀವವಾಗಿ ಚೈತನ್ಯರಹಿತವಾಗುತ್ತದೆ.

ಬುಡಕಟ್ಟು ಸಮುದಾಯಗಳು ತಮ್ಮ ಜೀವಿತಾವಧಿಯಲ್ಲಿ ಅನೇಕ ಆಚರಣೆಗಳನ್ನು ರೂಢಿಸಿಕೊಂಡಿವೆ. ಹಬ್ಬ, ಜಾತ್ರೆ, ಉತ್ಸವ ಮುಂತಾದ ಕಾರ್ಯಕ್ರಮಗಳಲ್ಲದೇ, ವೈಯಕ್ತಿಕ ಬದುಕಿನ ಜನನ, ಬಾಲ್ಯ, ಯೌವನ, ಮದುವೆ, ಸಾವುಗಳಿಗೂ ತನ್ನದೇ ಆದಂತಹ ಆಚರಣೆಗಳಿವೆ. ಹಲವಾರು ಬುಡಕಟ್ಟುಗಳಲ್ಲಿ ಈ ಆಚರಣೆಗಳು ಭಿನ್ನವಾಗಿವೆ.

ಒಡಿಗ ಬುಡಕಟ್ಟು ಸಮುದಾಯವೂ ಮನುಷ್ಯನ ಸಾವನ್ನು ಅನಿಶ್ಚಿತವೆಂದು ಅಲ್ಲದೇ, ಮನುಷ್ಯನ ನಡವಳಿಕೆಯ ಆಧಾರದ ಮೇಲೆ ಸ್ವರ್ಗ-ನರಕವಿದೆ ಎಂದು ನಂಬುತ್ತದೆ. ಮನುಷ್ಯರ ಸಾವು ಸಹಜವಾಗಿರಲಿ, ಅಸಹಜವಾಗಿರಲಿ ಅವರ ಸಾವಿಗೆ ಕೆಲವು ಆಚರಣೆಗಳನ್ನು ಈ ಸಮುದಾಯ ಮಾಡುತ್ತದೆ. ಸ್ತ್ರೀಯರು, ಗರ್ಭಿಣಿಯರು, ಮಕ್ಕಳು, ವೃದ್ಧರು ಯಾರೇ ಮರಣ ಹೊಂದಿದರೂ ಕೆಲವು ಭಿನ್ನವಾದ ಶವಸಂಸ್ಕಾರ ಕ್ರಿಯೆಗಳನ್ನು ಮಾಡುತ್ತಾರೆ.

**೪ : ೮ : ೧ ಸಾವಿನ ಆಚರಣೆ**

ಒಡಿಗ ಸಮುದಾಯವು ಜನನಕ್ಕೆ ಕೊಟ್ಟಷ್ಟೇ ಮಹತ್ವವನ್ನು ಸಾವಿಗೂ ನೀಡುವರು. ವ್ಯಕ್ತಿಯು ವೃದ್ಧಾಪ್ಯ, ದೈಹಿಕ ರೋಗಗಳಿಗೆ, ಅನಾರೋಗ್ಯಗಳಿಗೆ ಬಲಿಯಾಗಿ ತೀರಿಕೊಂಡರೆ ಅವರನ್ನು ಮನೆಯ ಹೊರಗಿನ ಜಗುಲಿಯ ಮೇಲೆ ಮಲಗಿಸುತ್ತಾರೆ. ವೃದ್ಧರಿಗೆ ಸಾವಿಗಿಂತ ಮುನ್ನ ಬೇಡಿದ ಪದಾರ್ಥವನ್ನು ಮಾಡಿ ಕೊಡುವರು. ಬಂಧು ಬಳಗವೆಲ್ಲ ಸಾಯುವ ಪೂರ್ವದಲ್ಲಿ ವ್ಯಕ್ತಿಯನ್ನು ನೋಡಿ ಹೋಗುತ್ತಾರೆ. ಸತ್ತ ವ್ಯಕ್ತಿಗಳ ಕಾಲಿನ ಎರಡು ಹೆಬ್ಬೆರಳನ್ನು ದಾರದಿಂದ ಕಟ್ಟುವರು. ಅಲ್ಲದೇ ಶವದ ಮೇಲೆ ಬಿಳಿ ಬಟ್ಟೆಯನ್ನು ಹೊದಿಸುತ್ತಾರೆ. ಶವದ ಕಾಲು ಮತ್ತು ತಲೆಯ ಭಾಗದಲ್ಲಿ ಊದುಬತ್ತಿಯನ್ನು ಹಚ್ಚುವರು.

ಸತ್ತ ವ್ಯಕ್ತಿಯ ಮನೆಯ ಮುಂದಿನ ಅಂಗಳದಲ್ಲಿ ಕಟ್ಟಿಗೆಯೊಂದಿಗೆ ಬೆಂಕಿ ಹಾಕಿ ಅದರ ಮೇಲೆ ಹೊಸ ಗಡಿಗೆಯನ್ನಿಟ್ಟು, ಮೂರು ಬೊಗಸೆ ಅಕ್ಕಿಯನ್ನು ಹಾಕಿ ಅನ್ನ ಮಾಡುತ್ತಾರೆ. ಅದೇ ಅಂಗಳದಲ್ಲಿ ಕಾಡಿನಿಂದ ತಂದ ಬೊಂಬುಗಳನ್ನು ಕಡಿದು ಆರು ಅಡಿ ಉದ್ದ, ಮೂರು ಅಡಿ ಅಗಲವಾಗಿ ಚಟ್ಟವನ್ನು ಕಟ್ಟುವರು. ಚಟ್ಟದ ಮೇಲೆ ಭತ್ತದ ಹುಲ್ಲು, ಬಿಳಿಬಟ್ಟೆಯನ್ನು ಹಾಕುತ್ತಾರೆ. ಸತ್ತ ಒಡಿಗರನ್ನು ಹೂಳುವ ಮತ್ತು ಸುಡುವ ಪದ್ಧತಿಯಿದೆ. ಇವರ

ಶವವನ್ನು ಹೂಳಲು ಎರವರು ಕುಣಿಯನ್ನು ತೋಡುವರು. ಶವವನ್ನು ಸುಟ್ಟು ಸಂಸ್ಕಾರ ಮಾಡಿದರೆ ಸ್ವರ್ಗ ಸಿಗುತ್ತದೆಂಬ ನಂಬಿಕೆ ಇವರಲ್ಲಿದೆ. ಅಲ್ಲದೇ ಸಾಯುವ ವ್ಯಕ್ತಿಯ ಅಪೇಕ್ಷೆಯಂತೆ ಸುಡುವ ಇಲ್ಲವೇ ಹೂಳುವ ಪದ್ಧತಿಯಿದೆ. ಇಂದು ಒಡಿಗರ ಶವಗಳನ್ನು ಹೂಳುವುದೇ ಹೆಚ್ಚಾಗಿದೆ. ಒಡಿಗರ ಸಾವಿನ ಸುದ್ದಿಯನ್ನು ಬಂಧುವರ್ಗದವರೇ ಮುಟ್ಟಿಸುತ್ತಾರೆ.

### ೪ : ೮ : ೨ ಶವದ ಪೂರ್ವಸಿದ್ಧತೆ

ಒಡಿಗರ ವ್ಯಕ್ತಿಗಳು ಸತ್ತಾಗ ಆ ಶವವನ್ನು ಜಗುಲಿಯಿಂದ ಹೊರತಂದು ಇಬ್ಬರು ವ್ಯಕ್ತಿಗಳು ಹಿಡಿದುಕೊಂಡು ಕುಳಿತುಕೊಳ್ಳುತ್ತಾರೆ. ಕ್ಷೌರಿಕನು ಶವದ ಗಡ್ಡವನ್ನು ಬೋಳಿಸುತ್ತಾನೆ. ಅಲ್ಲದೇ ಶವದ ಕೈ, ಕಾಲಿನ ಉಗುರುಗಳನ್ನು ಕತ್ತರಿಸುತ್ತಾನೆ. ನಂತರ ಹೊಸ ಗಡಿಗೆಯಲ್ಲಿ ನೀರನ್ನು ಕಾಯಿಸಿ ಸತ್ತ ವ್ಯಕ್ತಿಯ ಸೋದರ ಮಾವಂದಿರು ಶವಕ್ಕೆ ಸ್ನಾನ ಮಾಡಿಸುತ್ತಾರೆ. ನಂತರ ಜಗುಲಿಯ ಮೇಲೆ ಮಲಗಿಸಿ, ಹೊಸ ಬಟ್ಟೆಯನ್ನು ತೊಡಿಸುವರು. ತಲೆಗೆ ಎಣ್ಣೆ, ಹಣೆಗೆ ವಿಭೂತಿ, ಕುಂಕುಮ ಹಚ್ಚುತ್ತಾರೆ. ಅಲ್ಲದೇ ಮದುವೆಯಲ್ಲಿ ಸಿಂಗರಿಸಿದಂತೆ, ತಲೆಗೆ ಕೆಂಪು ಪೇಟ ಇಡುವರು. ಸತ್ತವ್ಯಕ್ತಿಯ ಹೆಂಡತಿಯನ್ನು ಶವದ ಪಕ್ಕದಲ್ಲಿ ಕೂರಿಸುತ್ತಾರೆ. ಸೋದರ ಮಾವಂದಿರು ತಂದ ಬಟ್ಟೆಯನ್ನು ಹೆಣದ ಮೇಲೆ ಮೊದಲು ಹಾಕಿ ನಂತರ ಬಂಧುವರ್ಗದ ಬಟ್ಟೆಯನ್ನು ಹಾಕುತ್ತಾರೆ.

ಒಡಿಗರ ಮಹಿಳೆಯರು ಸತ್ತರೆ ಶವಸ್ನಾನ ಮಾಡಿಸಿ ಜಗುಲಿಯ ಮೇಲೆ ಮಲಗಿಸಿ ಹೊಸ ಬಟ್ಟೆಯುಡಿಸಿ, ಕುಂಕುಮ, ವಿಭೂತಿ ಹಣೆಗಿಟ್ಟು, ಸಿಂಗರಿಸುತ್ತಾರೆ. ಶವದ ಉಗುರುಗಳನ್ನು ಕ್ಷೌರಿಕನೇ ತೆಗೆಯುತ್ತಾನೆ. ತವರು ಮನೆಯವರು ತಂದ ಹೊಸ ಬಟ್ಟೆಯನ್ನು ಮೊದಲು ಶವದ ಮೇಲೆ ಹಾಕುತ್ತಾರೆ. ನಂತರ ಸೋದರಮಾವ, ಬಂಧುಗಳು ತಂದು ಬಟ್ಟೆಯನ್ನು ಹಾಕುವರು. ಕೈಗಳಿಗೆ ತವರು ಮನೆಯವರು ತಂದಂತಹ ಹಸಿರುಬಳೆಯನ್ನು ತೊಡಿಸುತ್ತಾರೆ. ಶವದ ಪಕ್ಕದಲ್ಲಿ ಗಂಡನನ್ನು ಕೂರಿಸುವರು.

### ೪ : ೮ : ೩ ಗರ್ಭಿಣಿಯರ ಸಾವು/ಗರ್ಭಿಣಿಯ ಸಾವಿನ ಆಚರಣೆ

ಒಡಿಗರಲ್ಲಿ ಗರ್ಭಿಣಿಯು ಸತ್ತರೆ ವಿಶಿಷ್ಟವಾದ ಆಚರಣೆಯನ್ನು ಮಾಡಲಾಗುತ್ತದೆ. ಶವವನ್ನು ಜಗುಲಿಯ ಮೇಲೆ ಇರಿಸುತ್ತಾರೆ. ಶವಸ್ನಾನ ಮಾಡಿಸಿ ಅಲಂಕರಿಸುತ್ತಾರೆ. ಮುಖ್ಯವಾಗಿ ಶವದ ಪಕ್ಕದಲ್ಲಿ ''ಬಾಳೆಯ ದಿಂಡನ್ನು'' ನೆಟ್ಟು ಅದಕ್ಕೆ ಪೂಜೆ ಮಾಡುವರು. ಶವವನ್ನು ಮಸಣಕ್ಕೆ ಒಯ್ಯುವಾಗ ಆ ಬಾಳೆಯ ದಿಂಡನ್ನು ಗರ್ಭಿಣಿ ಸ್ತ್ರೀಯ ಸೋದರ ಮಾವನು ಶವದ ಮುಂದೆ ಹೋಗುತ್ತಾ ದಿಂಡನ್ನು ಕತ್ತರಿಸುತ್ತಾ ಮುಂದೆ ನಡೆಯುತ್ತಾನೆ. ಶವ ಸಂಸ್ಕಾರವಾದ ಮೇಲೆ, ಸಮಾಧಿಯ ಮೇಲೆ ಒಂದು ಕೋಳಿಯನ್ನು ಹಿಡಿದು ಆ ಕಡೆಯಿಂದ ಈ ಕಡೆಗೆ ಮೂರು ಬಾರಿ ಎಸೆಯುತ್ತಾರೆ. ಈ ಕೋಳಿಯನ್ನು ಕುಳಿಯನ್ನು ತೋಡಿದ ಎರವರಿಗೆ ನೀಡುವರು. ಈ ಕೋಳಿಯನ್ನು ಎಸೆಯುವುದರಿಂದ ಗರ್ಭಿಣಿ ಸ್ತ್ರೀಯು ಮಗುವಿನ ಮೇಲಿನ ಪ್ರೀತಿಯಿಂದ ಯಾರಿಗೂ ತೊಂದರೆ ಕೊಡದೆ ತನ್ನ ಆಸೆ, ಆಕಾಂಕ್ಷೆಗಳನ್ನು ಬೇರೆಯವರ ಮೇಲೆ ತೋರಿಸದೇ, ಆ ಜೀವಂತ ಕೋಳಿಯ ತಲೆಯ ಮುಖಾಂತರ ಮನಸ್ಸನ್ನು ಹರಿಸುತ್ತಾಳೆ ಎಂದು ಒಡಿಗರು ನಂಬುತ್ತಾರೆ.

### ೪ : ೮ : ೪ ಮಕ್ಕಳ ಸಾವು/ಮಕ್ಕಳ ಸಾವಿನ ಆಚರಣೆ

ಒಡಿಗರಲ್ಲಿ ಮಕ್ಕಳು ಸತ್ತರೆ, ಅವರಿಗೆ ಸ್ನಾನ ಮಾಡಿಸಿ, ವಿಭೂತಿ, ಕುಂಕುಮವನ್ನು ಹಚ್ಚುತ್ತಾರೆ. ಮಗುವಿಗೆ ಕಿವಿ ಚುಚ್ಚದಿದ್ದಲ್ಲಿ, ಶವಕ್ಕೆ ಕಾರೆ ಮುಳ್ಳಿನಿಂದ ಕಿವಿಯನ್ನು ಚುಚ್ಚುವರು. ಸಾಮಾನ್ಯವಾಗಿ ಮಕ್ಕಳ ಸಾವಿಗೆ ಚಟ್ಟವನ್ನು ಕಟ್ಟುವುದಿಲ್ಲ. ಮಗುವಿನ ಸೋದರಮಾವ ಇಲ್ಲವೇ ಸಮುದಾಯದ ಹಿರಿಯರು ಶವವನ್ನು ಕಂಬಳಿಯಲ್ಲಿ ಸುತ್ತಿಕೊಂಡು, ಎತ್ತಿಕೊಂಡು ಮಸಣಕ್ಕೆ ಹೋಗಿ ಹೂಳುತ್ತಾರೆ. ಸಮಾಧಿಯ ಮೇಲೆ ಅಂತ್ಯ ಸಂಸ್ಕಾರವಾದ ಮೇಲೆ ಪೂಜೆ ಸಲ್ಲಿಸಿ ಹಾಲು-ತುಪ್ಪವನ್ನು ಹಾಕಿ ಬರುವರು. ಮಕ್ಕಳ ವಿಧಿ ಕ್ರಿಯೆಯನ್ನು (ಉತ್ತರ ಕ್ರಿಯೆ) ಮೂರು ದಿನಕ್ಕೆ ಇಲ್ಲವೇ ಸಾವಿನ ದಿನವೇ ಮಾಡುತ್ತಾರೆ.

### ೪ : ೮ : ೫ ಶವಯಾತ್ರೆ

ಸತ್ತ ವ್ಯಕ್ತಿಯನ್ನು ದರ್ಶಿಸಲು ಬಂಧುವರ್ಗದವರೆಲ್ಲಾ ಸೇರುತ್ತಾರೆ. ಅವರು ತಂದಂತಹ ಹೊಸ ಬಟ್ಟೆಯನ್ನು ಶವದ ಮೇಲೆ ಹಾಕುವರು. ಎಲ್ಲರೂ ಜೋರಾಗಿ ಅಳುತ್ತಾರೆ. ಹೆಣದ ಕಾಲಿಗೆ ನಮಸ್ಕರಿಸುತ್ತಾ ಅಡ್ಡ ಬೀಳುವರು. ಕಟ್ಟಿಗೆಯಿಂದ ಹೊಸ ಗಡಿಗೆಯಲ್ಲಿ ಬೇಯಿಸಿದ ಅನ್ನವನ್ನು ಬಟ್ಟೆಯಲ್ಲಿ ಇಲ್ಲವೇ ಬಾಳೆಯ ಎಲೆಯಲ್ಲಿ ಕಟ್ಟುತ್ತಾರೆ. ಮಣ್ಣಿನ ಕುಡಿಕೆಯಲ್ಲಿ ನೀರನ್ನು ತೆಗೆದುಕೊಂಡು ಶವದ ಪಕ್ಕದಲ್ಲಿಡುವರು. ಸತ್ತ ವ್ಯಕ್ತಿಯ ಹಿರಿಯ ಮಗ ಇಲ್ಲವೇ ಮೊಮ್ಮಗನ ತಲೆಯ ಕೂದಲನ್ನು ಕೊಂಚ ಕತ್ತರಿಸಿ ಕ್ಷೌರಿಕನು ಶವದ ಬಲ ಮಂಡಿಯ ಪಕ್ಕದಲ್ಲಿಡುತ್ತಾನೆ. ನಂತರ ನಾಲ್ಕು ಮಂದಿ ಶವವನ್ನು ಹೊತ್ತುಕೊಳ್ಳುತ್ತಾರೆ. ಸೋದರ ಮಾವ ಮೊದಲು ಚಟ್ಟವನ್ನು ಎತ್ತುತ್ತಾನೆ. ಸತ್ತ ವ್ಯಕ್ತಿಯ ಹಿರಿಯ ಮಗ ಶವದ ಮುಂದೆ ಒಂದು ನೀರಿನ ಕೊಡವನ್ನು ಹೊತ್ತುಕೊಂಡಿರುತ್ತಾನೆ. ಮೂರು ದಾರಿ ಕೂಡುವಲ್ಲಿ ಶವವನ್ನು ಇಳಿಸಿ ಮುಂದೆ ಹೊತ್ತುಕೊಂಡವರು ಹಿಂದಕ್ಕೆ, ಹಿಂದೆ ಹೊತ್ತುಕೊಂಡವರು ಮುಂದಕ್ಕೆ ಬದಲಾಗುವರು. ಸುಡುಗಾಡು ಹತ್ತಿರ ಕುಣಿಯ ಸಮೀಪ ಶವವನ್ನು ಇಳಿಸುತ್ತಾರೆ.

### ೪ : ೮ : ೬ ಶವದ ಅಂತಿಮ ಪೂಜೆ

ಮಸಣದಲ್ಲಿ ಸಿದ್ಧಗೊಳಿಸಿರುವ ಕುಣಿಯ ಬಲಭಾಗದಲ್ಲಿ ಶವವನ್ನಿಟ್ಟು ಕುಂಕುಮ, ಅರಿಶಿನ, ಹಣ್ಣು, ಕಾಯಿ, ಹೂಗಳಿಂದ ಪೂಜೆಯನ್ನು ಮಾಡುತ್ತಾರೆ. ಎಲ್ಲ ಬಂಧುವರ್ಗ ಪೂಜೆ ಮಾಡುವರು. ಕೊನೆಯ ಬಾರಿಗೆ ಶವದ ಮುಖವನ್ನು ಎಲ್ಲರಿಗೂ ತೋರಿಸಲಾಗುತ್ತದೆ. ನಂತರ ಶವದ ಮುಖವನ್ನು ಮುಚ್ಚುತ್ತಾರೆ. ಶವದ ಮೇಲೆ ಮೂರು ಬಟ್ಟೆಗಳನ್ನು ಮಾತ್ರ ಬಿಟ್ಟು (ಸೋದರಮಾವ, ತವರುಮನೆ, ಮಕ್ಕಳು ತಂದ ಬಟ್ಟೆಯ ಹೊರತಾಗಿ) ಉಳಿದೆಲ್ಲಾ ಬಟ್ಟೆಗಳನ್ನು ಕುಣಿಯನ್ನು ತೋಡಿದ ಎರವ ಸಮುದಾಯಕ್ಕೆ ನೀಡಲಾಗುತ್ತದೆ. ಅಲ್ಲದೆ ಸತ್ತ ವ್ಯಕ್ತಿಯ ಮಗ ಇಲ್ಲವೇ ಮೊಮ್ಮಗ ತನ್ನ ಕೈಯಿಂದ ಐದು ಬಾರಿ ಭತ್ತವನ್ನು ಅಳೆದು ಎರವರಿಗೆ ನೀಡುತ್ತಾನೆ. ಒಡಿಗರು ಗುಳಿ ತೆಗೆಯುವವರನ್ನು 'ಮಣೇಗಾರ'ರೆಂದು ಕರೆಯುತ್ತಾರೆ.

ಗಂಡ ಸತ್ತಾಗ, ಮುತ್ತೈದೆತನದ ಕಡೆಯ ದಿನವೆಂದು ಅವರಿಗೆ ಕುಂಕುಮವನ್ನಿಟ್ಟು, ಹಸಿರು ಇಲ್ಲವೇ ಕೆಂಪು ಬಳೆಯನ್ನು ತೊಡಿಸಿ, ಹೊಸ ಬಣ್ಣದ ಸೀರೆ, ಕುಪ್ಪಸ ತೊಡಿಸಿ, ಹೂ ಮುಡಿಸಿ ಸಿಂಗರಿಸುತ್ತಾರೆ. ಒಂದು ತೆಂಗಿನಕಾಯಿಯನ್ನು ಒಡೆದು ಶವದ ತೊಡೆಯ ಅಕ್ಕಪಕ್ಕದಲ್ಲಿಡುವರು. ಕುಣಿಯ ಹತ್ತಿರ ಅಂತಿಮ ಪೂಜೆಯಾದ ಅವಳ ಬಳೆಯನ್ನು ಗಂಡನ ಶವದ ಪಕ್ಕದಲ್ಲಿ ಬಲಭಾಗಕ್ಕೆ ಒಡೆದು ಹಾಕುವರು. ತಲೆಗೆ ಮುಡಿಸಿದ ಹೂವನ್ನು ತೆಗೆಯುತ್ತಾರೆ. ಹಣೆಯ ಕುಂಕುಮವನ್ನು ಅಳಿಸುತ್ತಾರೆ. ಬಳೆಯನ್ನು ಸಮುದಾಯದ ವಿಧವೆಯವರು ಒಡೆಯುವರು.

ಹೆಂಗಸಿನ ಶವದ ಅಂತಿಮ ಪೂಜೆಯಾದ ಬಳಿಕ, ಎಲ್ಲರಿಗೂ ಕೊನೆಯದರ್ಶನ ಮಾಡಿಸಿ ಮುಖವನ್ನು ಮುಚ್ಚುತ್ತಾರೆ. ಶವದ ಮೂಗಿನ ಹತ್ತಿರ ಸ್ವಲ್ಪ ಬಟ್ಟೆಯನ್ನು ಕತ್ತರಿಸಿ, ಅಲ್ಲಿ ಹಸುವಿನ ತುಪ್ಪವನ್ನು ಸವರುತ್ತಾರೆ. ಶವವನ್ನು ಎತ್ತಿಕೊಂಡು ಕುಣಿಯನ್ನು ಮೂರುಬಾರಿ ಪ್ರದಕ್ಷಿಣೆ ಹಾಕುವರು. ಕುಣಿಯಲ್ಲಿಡುವಾಗ ಎರಡು ಮೂರು ಬಾರಿ ಮೇಲಕ್ಕೆ, ಕುಣಿಯ ಭಾಗಕ್ಕೆ ಎತ್ತಿ ಇಳಿಸುವುದು ಮಾಡುವರು. ಮೂರನೇ ಬಾರಿಗೆ ಕುಣಿಯಲ್ಲಿಡುತ್ತಾರೆ. ಬಂದಂತಹ ಬಂಧುವರ್ಗದವರು ಶವದ ಮೇಲೆ ಅಕ್ಕಿಯ ಕಾಳನ್ನು ಹಾಕುತ್ತಾರೆ. ಎಲ್ಲರೂ ಮೂರು ಬೊಗಸೆ ಮಣ್ಣನ್ನು ಶವದ ಮೇಲೆ ಹಾಕುವರು. ನಂತರ ಎರವರು ಕುಣಿಯನ್ನು ಸಂಪೂರ್ಣ ಮುಚ್ಚಿ ಸಮಾಧಿ ಮಾಡುತ್ತಾರೆ.

ಶವದ ತಲೆಯನ್ನು ಉತ್ತರ ಭಾಗಕ್ಕೆ, ದಕ್ಷಿಣ ಭಾಗಕ್ಕೆ ಕಾಲುಗಳಿರುವಂತೆ ಕುಣಿಯಲ್ಲಿಡುತ್ತಾರೆ. ಸತ್ತ ವ್ಯಕ್ತಿಯ ಹಿರಿಯ ಮಗ ಬಿಂದಿಗೆಯನ್ನು ಹೊತ್ತು ಸಮಾಧಿಯ ಸುತ್ತ ಮೂರು ಬಾರಿ ತಿರುಗುತ್ತಾನೆ. ಮೂರನೇ ಬಾರಿಗೆ ಗಡಿಗೆಯನ್ನು ಹಿಂದಕ್ಕೆ ಬಿಡುತ್ತಾನೆ. ಸಮಾಧಿಯ ಮೇಲೆ ಹೂವನ್ನಿಟ್ಟು, ಊದುಬತ್ತಿ ಹಚ್ಚಿ ನಮಸ್ಕರಿಸುತ್ತಾನೆ. ಕುಣಿಯ ಮೇಲೆ ಕಲ್ಲು-ಮುಳ್ಳುಗಳನ್ನು ಇಡುವರು. ಒಡಿಗರು ಅರಣ್ಯದಲ್ಲಿ ವಾಸಿಸುವುದರಿಂದ. ಕಾಡುಮೃಗಗಳು ಶವಗಳನ್ನು ಎತ್ತಿಕೊಂಡು ತಿನ್ನದಿರಲಿ ಎಂಬ ಕಾರಣಕ್ಕಾಗಿ ಮುಳ್ಳುಗಳನ್ನು ಸಮಾಧಿಯ ಮೇಲೆ ಇಡುತ್ತಾರೆ.

ಶವಸಂಸ್ಕಾರವಾದ ನಂತರ ಸ್ಮಶಾನದಿಂದ ಬಂದಂತಹ ವ್ಯಕ್ತಿಗಳಾರು ನೇರವಾಗಿ ಮನೆಯನ್ನು ಪ್ರವೇಶಿಸುವುದಿಲ್ಲ. ಹಾಗೆಯೇ ಊರಿಗೆ ಪ್ರವೇಶಿಸಿದರೆ ಅಮಂಗಳವಾಗುತ್ತದೆಂದು ಈ ಸಮುದಾಯ ನಂಬುತ್ತದೆ. ಸ್ಮಶಾನದಿಂದ ಬಂದವರು ಊರ ಹೊರಗಿರುವ ಕೆರೆ, ಹಳ್ಳ, ಹೊಳೆಗಳಲ್ಲಿ, ಮೈ, ಕೈ ತೊಳೆದುಕೊಂಡು ಸತ್ತ ವ್ಯಕ್ತಿಯ ಮನೆಗೆ ಬರುತ್ತಾರೆ. ಆ ಮನೆಯಲ್ಲಿ ಒಂದು ಮೊರದ ಮೇಲೆ ಮುಡಿಸಿಟ್ಟ ದೀಪವನ್ನು ನೋಡಿ ತಮ್ಮ ಮನೆಗಳಿಗೆ ತೆರಳುವರು. ಅಲ್ಲದೇ ಸತ್ತಮನೆಯವರು ನೀಡಿದ ಎಲೆ-ಅಡಿಕೆಯನ್ನು ಜಗಿದು ಉಗಿಯುತ್ತಾರೆ. ಶವವನ್ನು ಹೊತ್ತುಕೊಂಡವರು ಸ್ನಾನವನ್ನು ಮಾಡಿ, ಮಡಿಯನ್ನು ಉಡುವರು.

ಶವಸಂಸ್ಕಾರವನ್ನು ಮುಗಿಸಿಕೊಂಡು ಬಂದ ಮೇಲೆ ಸತ್ತ ವ್ಯಕ್ತಿಯ ಮನೆಯವರು ಮೂರು ಕಲ್ಲುಗಳನ್ನಿಟ್ಟು ಒಲೆಯನ್ನು ಹಚ್ಚುವರು. ಈ ಒಲೆಯ ಮೇಲೆ ಅವರೇಕಾಳು, ಹುಣಸೇಹಣ್ಣಿನಿಂದ ಸಾಂಬಾರನ್ನು ತಯಾರಿಸುತ್ತಾರೆ ಜೊತೆಗೆ ಅನ್ನ ಅಣಿಗೊಳಿಸಿ ಶವಸಂಸ್ಕಾರಕ್ಕೆ ಬಂದಂತಹ ಬಂಧುಬಳಗದವರಿಗೆ ಊಟ ನೀಡುವರು. ಈ ಊಟಕ್ಕೆ ''ಉಳಿ ಅನ್ನ ನೀಡುವುದು'' ಎಂದು ಕರೆಯುತ್ತಾರೆ. ಈ ಉಳಿ ಅನ್ನ ಹಾಕುವ ಪದ್ಧತಿ ಬರಲು ಕಾರಣವನ್ನು ಒಡಿಗರು

ಹೀಗೆ ವಿವರಿಸುವರು. ಹಿಂದೆ ಕಾಡುವಾಸಿಗಳಾಗಿದ್ದಾಗ ತಮ್ಮ ನೆಲೆಗಳಿಗೆ ಹಿಂದಿರುಗಲು ರಾತ್ರಿ ಸಮಯದಲ್ಲಿ ಕಾಡು ಪ್ರಾಣಿಗಳ ಭಯವಿತ್ತು. ಇದರಿಂದಾಗಿ ಇಲ್ಲೇ ಉಳಿಯುವವರಿಗೆ ಈ ಊಟ ನೀಡುವ ಪದ್ಧತಿ ರೂಢಿಗೆ ಬಂದಿತು.

ಮಕ್ಕಳ ಅಂತ್ಯ ಸಂಸ್ಕಾರ ಮಾಡಿದ ಮೇಲೆ ಒಂದೇ ದಿನ ಎಲ್ಲಾ ಬಗೆಯ ಕಾರ್ಯವನ್ನು ಮುಗಿಸುತ್ತಾರೆ. ಸಂಸ್ಕಾರವಾದ ದಿನ ಸಂಜೆಯ ವೇಳೆಯಲ್ಲಿ ಕೋಳಿ ಹಾಗೂ ಮೀನಿನ ಸಾಂಬಾರು, ಅನ್ನ, ಇಲ್ಲವೇ ಮುದ್ದೆಯನ್ನು ಮಾಡಿ ಬಂದಿರುವ ಬಂಧುಗಳಿಗೆ ಊಟವನ್ನು ನೀಡುವರು.

ಮೂರನೇ ದಿನದ ಕಾರ್ಯವನ್ನು ಮಾಡುವಾಗ ಒಡಿಗರಲ್ಲಿ ಕೇವಲ ಅಣ್ಣ ತಮ್ಮಂದಿರು ಮಾತ್ರ ಸೇರುತ್ತಾರೆ. ಅಣ್ಣ-ತಮ್ಮಂದಿರೆಲ್ಲರು ಸಮಾನವಾಗಿ ದವಸ ಧಾನ್ಯವನ್ನು ಹಾಕಿ ಅಡುಗೆ ಮಾಡುವರು. ಸತ್ತ ವ್ಯಕ್ತಿಯ ಹಿರಿಯ ಮಗನಿಗೆ ಅಂದು ಕ್ಷೌರಿಕನು ತಲೆಯ ಕೂದಲನ್ನು ಬೋಳಿಸುತ್ತಾನೆ. ಕ್ಷೌರಿಕನಿಗೆ ಅಕ್ಕಿ, ಬೆಲ್ಲ, ಬೇಳೆಯನ್ನು ನೀಡುವರು. ಮಾಡಿದ ಅನ್ನ, ಪಲ್ಯ ಮುಂತಾದ ಅಡುಗೆಯನ್ನು ಮಸಣಕ್ಕೆ ಒಯ್ಯುತ್ತಾರೆ. ಹಿರಿಯ ಮಗ ಸಮಾಧಿಯ ಹತ್ತಿರ ನಿಂತು ಪೂಜೆಯನ್ನು ಮಾಡಿ ಅಡುಗೆಯನ್ನು ಅಲ್ಲಿಡುತ್ತಾನೆ. ನಂತರ ಹಿಂದಿರುಗುತ್ತಾರೆ.

ಹದಿನಾರನೆಯ ದಿನ ದೊಡ್ಡ ಕಾರ್ಯ ನಡೆಯುತ್ತದೆ. ಅಂದು ಸಮುದಾಯದ ಎಲ್ಲ ಬಂಧುವರ್ಗದವರೂ ಸೇರುತ್ತಾರೆ. ಅಂದು ಮನೆಯನ್ನೆಲ್ಲಾ ಸಾರಿಸಿ, ಮನೆಯ ಸುತ್ತಲೂ ಗೋಮೂತ್ರವನ್ನು ಸಿಂಪಡಿಸುವರು. ಅಲ್ಲದೇ ವ್ಯಕ್ತಿ ಸತ್ತ ಸ್ಥಳವನ್ನು ಮತ್ತು ಜಗುಲಿಯನ್ನು ಗೋಮೂತ್ರದಿಂದ ಶುದ್ಧೀಕರಿಸುತ್ತಾರೆ. ಬಾಗಿಲಿಗೆ ಹಸಿರು ತೋರಣವನ್ನು ಕಟ್ಟುವರು. ಈ ದಿನದ ವೆಚ್ಚವನ್ನು ಅಣ್ಣತಮ್ಮಂದಿರೆಲ್ಲರೂ ಭರಿಸಬೇಕೆಂಬ ನಿಯಮವಿದೆ. ಹದಿನಾರನೆಯ ದಿನದ ಕಾರ್ಯಕ್ಕೆ ಕುಲಪುರೋಹಿತನು ಬರುತ್ತಾನೆ. ಶವವನ್ನು ಹೊತ್ತ ನಾಲ್ಕು ಜನರನ್ನು ಕೂರಿಸಿ ಸ್ನಾನ ಮಾಡಿಸುತ್ತಾರೆ. ಅವರಿಗೆ ಮಡಿ ಬಟ್ಟೆಯನ್ನುಡಿಸಿ ಕುಲಪುರೋಹಿತನು ನಾಮವನ್ನು ಹಚ್ಚುತ್ತಾನೆ.

ಮುತ್ತೈದೆಯರೆಲ್ಲರೂ ಸೇರಿ ಹೊಳೆಗೆ ಹೋಗಿ ಗಂಗೆಯನ್ನು ತಂದು ದೇವರ ಕೋಣೆಯಲ್ಲಿಟ್ಟು ಪೂಜೆ ಮಾಡುವರು. ಅಲ್ಲದೇ ಅಂದು ಮಾಡಿದ ಅಡುಗೆಯನ್ನು ಸತ್ತ ವ್ಯಕ್ತಿಯ ಹೆಸರನ್ನೇಳಿ ಎಡೆ ಮಾಡುತ್ತಾರೆ. ಹೂ, ಹಣ್ಣು, ಕಾಯಿಗಳಿಂದ ಪೂಜಿಸುವರು. ಕುಲಗುರುಗಳು ಸಮುದಾಯದ ಇಬ್ಬರು ಹಿರಿಯರನ್ನು ಕರೆದುಕೊಂಡು ಹೋಗಿ ಹೊಳೆಯ ಹತ್ತಿರದಲ್ಲಿ ಅಡುಗೆಯನ್ನು ಅಂದರೆ ಬೆಲ್ಲ, ಬಾಳೆಹಣ್ಣು, ಅಕ್ಕಿಯಿಂದ ತಯಾರಿಸಿದ ಪ್ರಸಾದ ಮಾಡಿಕೊಂಡು ಬರುತ್ತಾರೆ. ಇದಕ್ಕೆ ''ಬೆಲ್ಲದ ಅನ್ನ''ವೆಂದು ಒಡಿಗರು ಕರೆಯುವರು. ಈ ಬೆಲ್ಲದ ಅನ್ನವನ್ನು ತಂದು ಪೂಜಾ ಸ್ಥಳದಲ್ಲಿಡುತ್ತಾರೆ. ಎಲ್ಲ ಸಂಬಂಧಿಕರು ದೀಪ-ಧೂಪವನ್ನು ಹಾಕಿ ಕಣ್ಣೀರಿಡುವರು. ಹದಿನಾರನೆಯ ದಿನದ ಕಾರ್ಯದಂದು ಸಮಾಧಿಗೆ ಹೋಗದೇ ಮನೆಯಲ್ಲಿಯೇ ಪೂಜೆಯನ್ನು ಮಾಡುತ್ತಾರೆ.

ಹಿಂದೆ ಹದಿನಾರನೆಯ ದಿನದ ಕಾರ್ಯದಂದು ಕುರಿ, ಮೇಕೆಯ ಮಾಂಸವನ್ನು ಮಾಡುತ್ತಿದ್ದರು. ಇಂದು ಕೇವಲ ಸಸ್ಯಾಹಾರವನ್ನು ಮಾತ್ರ ಮಾಡುವರು. ಅಲ್ಲದೇ ಅವರವರ ಆರ್ಥಿಕ ಸ್ಥಿತಿಗೆ ಅನುಗುಣವಾಗಿ ಈ ಊಟದ ವ್ಯವಸ್ಥೆಯು ಇರುತ್ತದೆ. ಈ ಹದಿನಾರನೆಯ ದಿನದಲ್ಲಿ ಮನೆಯ ಸೂತಕವನ್ನು ನಿವಾರಿಸಿಕೊಳ್ಳುತ್ತಾರೆ. ನಂತರ ಇತರರೊಂದಿಗೆ ಸಂಬಂಧವು ಯಥಾಪ್ರಕಾರ ನಡೆಯುತ್ತದೆ.

## ೪ : ೯ ವಿಧಿ, ನಿಷೇಧಗಳು

### ೪ : ೯ : ೧ ಪ್ರವೇಶ

ಯಾವುದೇ ಸಮುದಾಯಗಳಿಗೆ ಜೀವನ ವ್ಯವಸ್ಥೆಯಲ್ಲಿ ಕೆಲವು ಸಂವಿಧಾನವೆಂಬಂತೆ ನಿಯಮಗಳಿರುತ್ತವೆ. ಈ ನಿಯಮಗಳಿಗೆ ಬದ್ಧರಾಗಿಯೇ ಸಾಮಾಜಿಕ ವ್ಯವಸ್ಥೆಯಲ್ಲಿ ಬದುಕುತ್ತಾರೆ. ಆ ನಿಯಮಗಳು, ಆಚರಣೆಗಳಲ್ಲಿ ಕೆಲವು ಮಾಡಬಾರದೆಂಬ ಮಿತಿಗಳೂ ಇರುತ್ತವೆ. ಈ ಮಾಡಬಾರದು ಎಂಬ ಮಿತಿಗಳೇ ನಿಷೇಧಗಳು. ಇವು ಒಂದು ಪರಂಪರೆಯಂತೆ ಅನೂಚಾನವಾಗಿ ಬೆಳೆದು ಬಂದಿರುತ್ತವೆ. ಒಂದು ಕಾಲದಲ್ಲಿ ಆಯಾ ಸಾಮಾಜಿಕ ವ್ಯವಸ್ಥೆ, ಕಾಲಕ್ಕೆ ಅನುಗುಣವಾಗಿ, ಭೌಗೋಳಿಕ ಸ್ಥಿತಿಗನುಗುಣವಾಗಿ ರೂಪಿಸಲ್ಪಟ್ಟ ಈ ನಿಷೇಧಗಳು ಮತ್ತೊಂದು ಕಾಲಕ್ಕೆ ಅನ್ವಯಿಸಲಾರವಾದರೂ, ಕೆಲವೊಂದು ಅನ್ವಯಿಸುತ್ತವೆ. ಕೆಲವು ಅನಗತ್ಯವೆಂದು ತೋರಿದರೂ, ನಂಬಿಕೆಯೆಂಬಂತೆ ಸಾಂಪ್ರದಾಯಿಕವಾಗಿ ಕಾಪಾಡಿಕೊಂಡು ಬರುವಲ್ಲಿಯೇ ಸಂಸ್ಕೃತಿಯ ಮೂಲರೂಪಿಕೆಗಳು ಉಳಿದು ಬಂದಿರುವುದನ್ನು ಗುರುತಿಸಬಹುದಾಗಿದೆ. ವಿಧಿ ನಿಷೇಧಗಳು ಒಂದೊಮ್ಮೆ ಕೆಡುಕನ್ನುಂಟು ಮಾಡುವ ಸಂಗತಿಗಳಿಂದ ದೂರಮಾಡುವ ವೈಚಾರಿಕ ಅಂಶಗಳಾಗಿಯೂ ಇರುತ್ತವೆ. ಮೂಢನಂಬಿಕೆಗಳಾಗಿ ನಿಷೇಧಗಳಿರುವುದೂ ಇದೆ. ಇಂತಹ ಮೂಢನಂಬಿಕೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಅಲೆನ್ ಡಂಡಸ್ ಹೀಗೆ ಹೇಳುತ್ತಾನೆ."Supes tintius are traditional gapxssions of one or more condition and or more results with some of the conditions sights and other causes"[೭]

ವಿಧಿಗಳು ಸಮುದಾಯ ಜೀವನದ ಒಂದು ಅಂಗವಾಗಿರುತ್ತವೆ. ಜಗತ್ತಿನಾದ್ಯಂತ ವಿಧಿ ನಿಷೇಧಗಳು ಭಿನ್ನ ನೆಲೆಯಲ್ಲಿ ಎಡೆಪಡೆದಿರುತ್ತವೆ. ಭಾರತದಂತಹ ಸಂಪ್ರದಾಯನಿಷ್ಠ ಸಮಾಜದಲ್ಲಿ ಬದುಕುವ ಬುಡಕಟ್ಟು ಸಮಾಜದಲ್ಲಿ ಈ ಬಗೆಯ ವಿಧಿ ನಿಷೇಧಗಳು ಅತ್ಯಂತ ಮಹತ್ವವನ್ನು ಹೊಂದಿರುತ್ತವೆ. ಇದು ಆಯಾ ಬುಡಕಟ್ಟು ಸಮಾಜದ ಭೌಗೋಳಿಕ, ಸಾಂಸ್ಕೃತಿಕ ಅಂಶಗಳನ್ನವಲಂಬಿಸಿ ಪ್ರಮಾಣದಲ್ಲಿ ಹೆಚ್ಚು ಕಡಿಮೆಯಾಗಿರುತ್ತದೆ.

''ಮನುಷ್ಯನಿಗೆ ಸಹಜವೂ, ಸ್ವಾಭಾವಿಕವೂ, ಹಿಂದಿನಿಂದಲೂ ಬಳುವಳಿಯಾಗಿ ಬಂದುದೂ ವಿಧಿ ನಿಷೇಧಗಳು, ಆಚರಣೆಗಳು, ಈ ವಿಧಿ ವಿಧಾನಗಳಿಗೆ ಪ್ರಾರ್ಥನೆ ಅಥವಾ ಜಾನಪದ ಮನಸ್ಸು ಬದ್ಧವಾಗಿರುತ್ತದೆ''[೮] ಈ ಬದ್ಧತೆಯಲ್ಲಿಯೇ 'ಒಡಿಗ' ಬುಡಕಟ್ಟು ಸಮುದಾಯವೂ ಬದುಕುತ್ತಾ ಬಂದಿರುವುದನ್ನು ಕಾಣಬಹುದು. ಒಡಿಗ ಸಮುದಾಯವು ಮೂಲತಃ ಕಾಡುವಾಸಿಗಳಾಗಿರುವುದರಿಂದ ಅಲ್ಲಿನ ದಟ್ಟವಾದ ಗಿಡಮರಗಳ, ಭಯಾನಕ ವಾತಾವರಣದಿಂದಾಗಿ ಅನೇಕ ದೈವ-ದೆವ್ವಗಳ ಕಲ್ಪನೆಯು ಸಹಜವಾಗಿಯೇ ಮೂಡಿಬಂದಿದೆ. ಆ ಮೂಲಕ ತತ್ಸಂಬಂಧಿಯಾದ ಅನೇಕ ಆಚರಣೆಗಳು ಹುಟ್ಟಿಕೊಂಡು ಬಂದಿವೆ. ಈ ಆಚರಣೆಗಳಿಗೆ ತನ್ನದೇ ಆದಂತಹ ಮಿತಿಗಳು ಇರುವುದನ್ನು ಈ ಅಧ್ಯಾಯದಲ್ಲಿ ವಿವರಿಸಲಾಗುತ್ತದೆ.

### ೪ : ೯ : ೨ ಪ್ರಯಾಣ ಸಂಬಂಧಿ ವಿಧಿ ನಿಷೇಧಗಳು

ಈ ಸಮುದಾಯವು ಪ್ರಯಾಣದ ಸಂದರ್ಭದಲ್ಲಿ ಕೆಲವು ವಿಧಿ ನಿಷೇಧಗಳನ್ನು ಒಡ್ಡಿಕೊಂಡಿದೆ. ಎಲ್ಲಿಗಾದರೂ ಪ್ರಯಾಣ ಬೆಳೆಸುವಾಗ ಮನೆಯಲ್ಲಿ ಯಾರಾದರೂ ಎಲ್ಲಿಗೆ ಎಂದು ಕೇಳಿದರೆ ಹೋಗುವ ಪ್ರಯಾಣ ಸರಿ ಹೋಗುವುದಿಲ್ಲ. ಅಲ್ಲದೇ ಹೋದ ಕೆಲಸ ಆಗುವುದಿಲ್ಲ.

* ಪ್ರಯಾಣದ ಸಂದರ್ಭದಲ್ಲಿ ಒಂಟಿ ಬ್ರಾಹ್ಮಣ ಎದುರಿಗೆ ಬಂದರೆ ಅಶುಭ.
* ಬೆಕ್ಕು ಮತ್ತು ಹಾವು ಅಡ್ಡ ಬಂದರೆ ಅಶುಭ.
* ವಿಧವೆಯರು ಎದುರಿಗೆ ಬಂದರೆ ಅಶುಭ.
* ಹಲ್ಲಿಯು ಮೂರು ಬಾರಿ ಎಡಭಾಗದಲ್ಲಿ ನುಡಿದರೆ ಅಶುಭ.
* ಹದ್ದು ತಲೆಯ ಮೇಲೆ ಹಾರಿಹೋದರೆ ಅಶುಭ.

ಪ್ರಯಾಣವು ಅಮಂಗಳವಾಗುತ್ತದೆ, ಅಶುಭವಾಗುತ್ತದೆ. ಹೋದ ಕೆಲಸಕಾರ್ಯಗಳು ಸುಸೂತ್ರವಾಗಿ ನಡೆಯುವುದಿಲ್ಲವೆಂದು ಒಡಿಗರು ನಂಬುತ್ತಾರೆ. ಅಲ್ಲದೇ ಇಂಥವುಗಳನ್ನು ನೋಡಿಕೊಂಡು ಅವರು ಮುಂದೆ ಸಾಗಲು ಪ್ರಯತ್ನಿಸುತ್ತಾರೆ. ಅಲ್ಲದೇ ಪ್ರಯಾಣದ ಸಂದರ್ಭದಲ್ಲಿ-

* ಮುತ್ತೈದೆಯರು ಎದುರಿಗೆ ಬಂದರೆ ಶುಭ.
* ಹಜಾಮ ಪೆಟ್ಟಿಗೆ ಸಮೇತ ಎದುರಿಗೆ ಬಂದರೆ ಶುಭ.
* ಸಂಪತ್ತು ಎದುರಿಗೆ ಬಂದರೆ ಶುಭ.
* ವೇಶ್ಯೆಯು ಎದುರಿಗೆ ಬಂದರೆ ಶುಭ

ಶುಭವಾಗುತ್ತದೆ, ಮಂಗಲವಾಗುತ್ತದೆಂದು ನಂಬುತ್ತಾರೆ.

### ೪ : ೯ : ೩ ಅಡುಗೆ, ಊಟಕ್ಕೆ ಸಂಬಂಧಿಸಿದ ವಿಧಿ ನಿಷೇಧಗಳು

ಒಡಿಗ ಸಮುದಾಯವು ತಮ್ಮ ಆಹಾರವನ್ನು ತಯಾರಿಸುವ ಒಲೆಯಿಂದ ಹಿಡಿದು ಆಹಾರ ತಯಾರಿಸುವವರೆಗೂ ಅನೇಕ ನಂಬಿಕೆಗಳನ್ನು ಹೊಂದಿದೆ. ಈ ಸಮುದಾಯವು ಒಲೆಯನ್ನು ದೇವರ ಸಮಾನವೆಂದು ತಿಳಿಯುತ್ತದೆ. ಸೌದೆಯನ್ನು ಉಪಯೋಗಿಸಿ ಉರಿಸುವುದರಿಂದ ಪ್ರಕೃತಿಯ ದೇವರುಗಳಲ್ಲಿ ಒಲೆಯೂ ಕೂಡ ಒಂದು ಎಂದು ಭಾವಿಸಿದ್ದಾರೆ.

ದಿನಂಪ್ರತಿ ಅಡುಗೆಯನ್ನು ಮಾಡುವಾಗ ಒಲೆಯನ್ನು ಬಳಿದು, ಸೆಗಣಿಯಿಂದ ಸಾರಿಸುತ್ತಾರೆ. ಮಣ್ಣಿನಿಂದ ನಿರ್ಮಿಸಿದ ಒಲೆಯಲ್ಲಿ ಕಟ್ಟಿಗೆಯನ್ನಿಟ್ಟು ಉರಿಸುವುದು ಮತ್ತು ದೊಡ್ಡ ಪಾತ್ರೆಯಿಂದ ಅಡುಗೆ ಮಾಡುವ ಸಂದರ್ಭದಲ್ಲಿ ಸಣ್ಣ ಪ್ರಮಾಣದಲ್ಲಿ ದುರಸ್ತಿಯಾಗುವುದುಂಟು. ಆದಕಾರಣ ಮುಂಜಾನೆ ಒಲೆ ಹಚ್ಚುವ ಮುನ್ನ ಕಸಬಳಿದು ಸೆಗಣಿಯಿಂದ

ಸಾರಿಸುವುದರಿಂದ ನಿತ್ಯವೂ ಬಳಸುವ ಒಲೆಯ ಬಗ್ಗೆ ಕಾಳಜಿವಹಿಸುತ್ತಾರೆ. ಈ ಹಿನ್ನೆಲೆಯಲ್ಲಿ ಮೇಲಿನ ವಿಧಿ ಆಚರಣೆಯು ಬಂದಿರುವ ಸಾಧ್ಯತೆ ಇದೆ. ನಂತರ ಒಲೆಗೆ ಪೂಜೆಯನ್ನು ಸಲ್ಲಿಸಿ, ಅಡುಗೆಗೆ ಸಿದ್ಧಗೊಳಿಸುತ್ತಾರೆ. ಪ್ರಕೃತಿಯಲ್ಲಿ ದೊರೆಯುವ ಎಲ್ಲ ರೀತಿಯ ನಿರ್ಜೀವ ವಸ್ತುವನ್ನು ದೈವೀಭಾವನೆಯಿಂದ ಕಾಣುವರು. ಅದರಂತೆ ಒಲೆಯನ್ನೂ ಕಾಣುತ್ತಾರೆ. ಇವರು ಒಲೆಯನ್ನು ಉರಿಸಲು ಸೌದೆಯನ್ನು ಬಳಸುವರು. ಅರಣ್ಯವಾಸಿಗಳಾಗಿದ್ದರಿಂದ ಈ ಸಮುದಾಯಕ್ಕೆ ಸೌದೆಯ ಕೊರತೆಯಿರುವುದಿಲ್ಲ. ಆದರೆ ಅರಣ್ಯದಲ್ಲಿ ದೊರೆಯುವ ಯಥೇಚ್ಚವಾದ ಮರಗಳನ್ನೆಲ್ಲಾ ಇವರು ಉರಿಸುವುದಿಲ್ಲ. ಕೆಲವು ಮರಗಳನ್ನು ಮಾತ್ರ ಉರುವಲಿಗೆ ಉಪಯೋಗಿಸುತ್ತಾರೆ. ಪ್ರಕೃತಿಯನ್ನು ಪೂಜಿಸುವುದರಿಂದ, ಇವರು ಕೆಲವು ಗಿಡ-ಮರಗಳನ್ನು ಪೂಜ್ಯ ಭಾವನೆಯಿಂದ ಕಾಣುವರು. ಇದಕ್ಕೆ ಕೆಲವು ನಿಷೇಧಗಳನ್ನು ಒಡಿಗರು ಇಟ್ಟುಕೊಂಡಿದ್ದಾರೆ.

* ಅರಳಿ ಮರವನ್ನು ಸೌದೆಯನ್ನಾಗಿ ಉಪಯೋಗಿಸಬಾರದು. ಇದರಲ್ಲಿ ದೇವರು ವಾಸಿಸುತ್ತಾನೆ. ಅದು ಪೂಜಾರ್ಹವಾದುದು. ಕೇವಲ ಬುಡಕಟ್ಟು ಸಮುದಾಯ ಮಾತ್ರವಲ್ಲ, ನಾಗರಿಕ ಸಮಾಜದಲ್ಲಿಯೂ ಕೂಡ ಈ ಮರವನ್ನು ಪೂಜ್ಯಭಾವನೆಯಿಂದ ನೋಡುವರು. ಪ್ರಕೃತಿಯಲ್ಲಿ ಹತ್ತು ಹಲವಾರು ಗಿಡಮರಗಳು ಪೂಜಾರ್ಹವಾಗಿವೆ. ಅದರಲ್ಲಿ ಅರಳಿ ಮರವು ಒಂದು. ಇದು ಇಂಗಾಲದ ಡೈ ಆಕ್ಸೈಡನ್ನು ತೆಗೆದುಕೊಂಡು ಮಾನವನಿಗೆ ಪ್ರಮುಖವಾದ ಆಮ್ಲಜನಕವನ್ನು ಹೆಚ್ಚಿನ ಪ್ರಮಾಣದಲ್ಲಿ ಬಿಡುಗಡೆ ಮಾಡುವ ಅರಳಿಮರವು ಪ್ರಾಚೀನ ಕಾಲದಿಂದಲೂ ಮಾನ್ಯತೆ ಪಡೆದುಕೊಂಡಿದೆ. ಅದು ಇಂದು ಪೂಜಿಸುವ ಮೂಲಕ ಅದರ ರಕ್ಷಣೆ ಪಡೆದುಕೊಂಡಿದೆ.

* ಬೇವಿನ ಮರವನ್ನು ಸೌದೆಗಾಗಿ ಬಳಸುವಂತಿಲ್ಲ. ಈ ಮರದಲ್ಲಿ ಶಕ್ತಿದೇವತೆಯು ವಾಸಮಾಡುತ್ತಾಳೆ. ಬೇವಿನ ಮರವು ವೈದ್ಯಕೀಯ ಗುಣವನ್ನು ಹೊಂದಿದೆ. ಬೇಸಿಗೆಯಲ್ಲಿ ತಂಪನ್ನು ನೀಡುವುದೇ ಅಲ್ಲದೇ, ಅದರ ಎಲೆ, ಕಾಂಡ, ಅಂಟು, ಹಣ್ಣು, ತೊಗಟೆ ಹೀಗೆ ಪ್ರತಿಯೊಂದು ಭಾಗವು ಬಹು ಉಪಯುಕ್ತವಾಗಿದೆ. ಆದ್ದರಿಂದ ಬೇವಿನಮರವನ್ನು ನಾಶಮಾಡದಿರಲಿ ಎಂಬ ಕಾರಣಕ್ಕೆ ಆ ಮರದಲ್ಲಿ ಶಕ್ತಿ ದೇವತೆಯನ್ನು ಇರಿಸಿ ಪೂಜೆಗೆ ಒಳಪಡಿಸಿ ಅದರ ರಕ್ಷಣೆಯನ್ನು ಮಾಡುವ ಉದ್ದೇಶದಿಂದ ಈ ಮೇಲಿನ ನಿಷೇಧ ಹುಟ್ಟಿಕೊಂಡಿದೆ. ಜನಪದರ ಜ್ಞಾನವನ್ನು ಮೆಚ್ಚಬಹುದಾಗಿದೆ.

* ತಾಳೆಮರ, ಕಕ್ಕೆಮರವನ್ನು ಸೌದೆಗಾಗಿ ಬಳಸುವುದಿಲ್ಲ. ಕಕ್ಕೆಮರದಲ್ಲಿ ಮಸನಿ, ಚಾಮುಂಡಿ ದೇವತೆಯರು ವಾಸಿಸುತ್ತಾರೆಂದು ಒಡಿಗರು ನಂಬುತ್ತಾರೆ. ಅಂತೆಯೇ ತಾಳೆಮರದಲ್ಲಿ ಶನಿದೇವರು ವಾಸಿಸುತ್ತಾನೆ. ಈ ಮರವನ್ನು ಒಲೆಗಾಗಿ ಉಪಯೋಗಿಸಿದರೆ ಶನಿಯು ಕಾಡಿಸುತ್ತಾನೆ ಮತ್ತು ತಾಳೆಮರ ಮತ್ತು ಕಕ್ಕೆಮರ ಔಷಧೀಯ ಗುಣಗಳನ್ನು ಹೊಂದಿರುವುದರಿಂದ ಇವು ನಶಿಸಿ ಹೋಗದಂತೆ ಉಳಿಸುವ ಪ್ರಯತ್ನದಿಂದ ಅವುಗಳಲ್ಲಿ ಪೂಜ್ಯಭಾವನೆ ಮೂಡಿಸಿದ್ದಾರೆ.

* ನೇರಳೆ ಮರವನ್ನು ಒಲೆಗೆಂದು ಬಳಸುವುದಿಲ್ಲ. ನೇರಳೆ ಸೊಪ್ಪು ಒಡಿಗರ ಅತ್ಯಂತ ಮುಖ್ಯವಾದ ಸೊಪ್ಪು. ಇವರ ಹುಟ್ಟು, ಬಾಲ್ಯ, ಯೌವನ, ಮದುವೆ, ಸಾವು ಮುಂತಾದ ಕಾರ್ಯಾಚರಣೆಗಳಲ್ಲಿ ಈ ಮರದ ಕಾರ್ಯ ಮಹತ್ವದ್ದಾಗಿದೆ. ಅಲ್ಲದೇ ನೇರಳೆಮರದಲ್ಲಿ ಈ ಸಮುದಾಯದ ದೇವತೆಗಳು ವಾಸಿಸುತ್ತವೆಂದು ನಂಬಿದ್ದಾರೆ. ನೇರಳೆ ಸೊಪ್ಪು,

ಶುಭಸಂದರ್ಭದಲ್ಲಿ ಬಳಕೆಯಾಗುವುದರಿಂದ ಅದನ್ನು ಉರಿಸಬಾರದು ಎಂಬ ನಂಬಿಕೆಯಿಂದ ಈ ನಿಷೇಧ ಹುಟ್ಟಿಕೊಂಡಿದೆ.

* ಕೃಷಿ ಸಾಧನಗಳಾದ ನೇಗಿಲು, ಕುಂಟೆ ಇತ್ಯಾದಿಗಳಿಗೆ ಬಳಸುವ ಮರವನ್ನು ಇವರು ಸಾಮಾನ್ಯವಾಗಿ ಒಲೆಯನ್ನು ಉರಿಸಲು ಉಪಯೋಗಿಸಲಾರರು. ಕೃಷಿಯಿಂದ ಇವರಿಗೆ ಅನ್ನವು ದೊರೆಯುತ್ತದಾದ್ದರಿಂದ ಈ ಕಟ್ಟಿಗೆಯನ್ನು ಬಳಸುವುದಿಲ್ಲ. ತಮ್ಮ ಬದುಕಿನ ಜೊತೆ ಜೊತೆಗೆ ಕೃಷಿ ಸಾಮಗ್ರಿಗಳ ಜೀವಂತಿಕೆಯನ್ನು ಪಡೆದುಕೊಳ್ಳುವ ಕಾರಣ ಅವುಗಳನ್ನು ಉಪಯೋಗಿಸುವುದಕ್ಕೆ ಮನಸ್ಸು ಒಪ್ಪುವುದಿಲ್ಲ.

* ಅಡುಗೆಗೆ ಸಂಬಂಧಿಸಿದಂತೆ ಈ ಸಮುದಾಯವು ಮೂರು, ಏಳು ರೊಟ್ಟಿಗಳನ್ನು ತಯಾರಿಸುವುದಿಲ್ಲ. ಈ ಬೆಸ ಸಂಖ್ಯೆಗಳು ಅಶುಭವೆಂದು ತಿಳಿದಿದ್ದಾರೆ. ಇವರು ಮೂರು ಮಂದಿ ಕೂಡಿ ಮಾಡಿದ ಕೆಲಸ ಹಾಳು ಎನ್ನುವರು ಮತ್ತು ಮಾಲೆ, ಮದ್ದಿಗೆಂದು ಮೂರು ದಾರಿ ಕೂಡುವಲ್ಲಿ ಅನ್ನವನ್ನು ತೆಗೆದುಹಾಕುತ್ತಾರೆ. ಇದಕ್ಕೆ ಕಾರಣ ಈ ಸಮುದಾಯದವರಲ್ಲಿ ಮೂರು, ಏಳು ಸಂಖ್ಯೆಯ ಬಗ್ಗೆ ಇರುವ ಮಾನಸಿಕ ಧೋರಣೆ ಕಾರಣವೇ ಹೊರತು ಬೇರೆ ಏನೂ ಅಲ್ಲ. ದಿನಂಪ್ರತಿ ಅಡುಗೆಯ ಸಂದರ್ಭದಲ್ಲಿ ಕೋಳಿ ಮತ್ತು ಮೀನು ಈ ಎರಡರ ಮಾಂಸವನ್ನು ತಯಾರಿಸುವುದಿಲ್ಲ. ಮಕ್ಕಳಿರುವ ಒಡಿಗರ ಮನೆಯಲ್ಲಿ ಇದು ಕಟ್ಟುನಿಟ್ಟಾಗಿ ನಿಷೇಧಿಸಲ್ಪಟ್ಟಿದೆ. ಏಕೆಂದರೆ ಒಡಿಗರ ಮನೆಗಳಲ್ಲಿ ಮಕ್ಕಳ್ಯಾರಾದರೂ ಮರಣ ಹೊಂದಿದರೆ, ಮರಣದ ದಿವಸದ ಕಾರ್ಯದಲ್ಲಿ ಕೋಳಿ ಹಾಗೂ ಮೀನಿನ ಮಾಂಸದ ಊಟ ಬಡಿಸುತ್ತಾರೆ. ಇದರಿಂದ ಇದು ಕೆಟ್ಟದೆಂದು ತಿಳಿದಿದ್ದಾರೆ. ಒಂದು ವೇಳೆ ಇದನ್ನು ಮೀರಿ ಮಾಡಿದರೆ ಮಕ್ಕಳಿಗೆ ಸಾವು ಬರುತ್ತದೆ. ಇಲ್ಲವೇ ತೊಂದರೆಯಾಗುತ್ತದೆಯೆಂದು ಈ ಸಮುದಾಯ ನಂಬುತ್ತದೆ.

* ಹಂದಿಮಾಂಸದ ಊಟ ಈ ಸಮುದಾಯದಲ್ಲಿ ನಿಷೇಧಿಸಲ್ಪಟ್ಟಿದೆ. ಆದರೂ ಕೆಲವರು ಮನೆಯ ಹೊರಭಾಗದಲ್ಲಿ ಮಾಡಿಕೊಂಡು ತಿನ್ನುತ್ತಾರೆ.

ಹಂದಿಮಾಂಸವನ್ನು ಸಾಮಾನ್ಯ ಮಾಂಸದಂತೆ ಅಡುಗೆ ಮಾಡಲು ಬರುವುದಿಲ್ಲ. ಆದಕಾರಣ ಸಾಮೂಹಿಕವಾಗಿ ಹಂದಿಮಾಂಸದ ಅಡುಗೆ ಮಾಡುವುದು ಹೆಚ್ಚು ಸೂಕ್ತವೆಂದು ಕಂಡುಕೊಂಡಿರುವ ಹಿನ್ನೆಲೆಯಲ್ಲಿ ಈ ನಿಷೇಧ ರೂಢಿಯಲ್ಲಿ ಬಂದಿರುವ ಸಾಧ್ಯತೆ ಇದೆ. ಮನೆಯಲ್ಲಿ ಒಂದೇ ಮರಳಿನಲ್ಲಿ ಬೇಯಿಸಲು ಬರುವುದಿಲ್ಲ. ಕಾರಣ ಹೊರಾಂಗಣದಲ್ಲಿ ಅಡುಗೆಮಾಡುವುದರಿಂದ ಹೆಚ್ಚು ಬೇಯಿಸುವುದು ಸಾಧ್ಯವಿದೆ. ಅರಣ್ಯದಲ್ಲಿ ಚಾಮುಂಡಿ, ಮರಳು ಪರೆ ದೇವಿಯರು ವಾಸಿಸಿದ್ದರಿಂದ ಅಲ್ಲಿಯೇ ಹಂದಿಮಾಂಸ ಮಾಡಿಕೊಂಡು ತಿನ್ನುವರು. ಕಾರಣ ಮನೆಯಲ್ಲಿ ಹಂದಿ ಮಾಂಸ ಮಾಡದೇ ಹೊರಾವರಣದಲ್ಲಿ ಮಾಡುತ್ತಾರೆ.

* ಸಮುದಾಯದವರು ಗುಡಿಸಲುಗಳಲ್ಲಿ ವಾಸಿಸುವುದು ಮತ್ತು ಅರಣ್ಯ ಪ್ರದೇಶದಲ್ಲಿ ವಾಸಿಸುತ್ತಿರುವುದರಿಂದ ರಾತ್ರಿ ವೇಳೆ ಕ್ರಿಮಿ ಕೀಟಗಳು ಹಾರಾಡುತ್ತಿರುತ್ತವೆ ಮತ್ತು ಮನೆಗಳಲ್ಲಿ ಹಲ್ಲಿಯಂತಹ ವಿಷಜಂತುಗಳು ಓಡಾಡುತ್ತಿರುತ್ತವೆ. ಇಂತಹ ಜೀವ ಜಂತುಗಳು ತಟ್ಟೆಗೆ ಬೀಳುವುದರಿಂದ ಇಂತಹ ನಿಷೇಧಗಳನ್ನು ರೂಢಿಸಿಕೊಂಡಿರುವಂತೆ ತೋರುತ್ತದೆ.

* ಅಮವಾಸ್ಯೆ ಹಾಗೂ ಹುಣ್ಣಿಮೆ ದಿನಗಳು ಅಪಾಯಕರವೆಂದು ಬುಡಕಟ್ಟು ಸಮುದಾಯವಲ್ಲದೆ ನಾಗರಿಕ ಸಮಾಜದಲ್ಲಿಯೂ ಈ ನಂಬಿಕೆ ಇರುವುದನ್ನು ಕಾಣುತ್ತೇವೆ. ಅಮವಾಸ್ಯೆಯ ದಿನದಂದು ದುಷ್ಟ ಶಕ್ತಿಗಳು ಸಂಚರಿಸಲು ಪ್ರಶಸ್ತ ದಿನ ಹಾಗೂ ಅವುಗಳಿಗೆ ಮಾಂಸಹಾರವು ಬಹಳ ಪ್ರಿಯವಾದ್ದರಿಂದ. ಅಮವಾಸ್ಯೆ, ಹುಣ್ಣಿಮೆಯ ದಿನದಂದು ಮಾಂಸಾಹಾರವನ್ನು ಸೇವಿಸಿ ಹೊರಗಡೆ ರಾತ್ರಿಯ ವೇಳೆಯಲ್ಲಿ ಓಡಾಡಲು ಹೋಗಬಾರದು. ಹೋದರೆ ಭೂತ ಪಿಶಾಚಿಗಳು, ದೇಹದಲ್ಲಿ ಪ್ರವೇಶಿಸಿ ಕೆಡಕುಂಟುಮಾಡುತ್ತವೆಂದು ಇಂತಹ ನಿಷೇಧಗಳನ್ನು ರೂಢಿಸಿಕೊಂಡಿದ್ದಾರೆ.

* ದೀಪ ಆರಿದಾಗ ಊಟವನ್ನು ಮಾಡಬಾರದು. ಬೇರೆಯವರ ಎದುರಿಗೆ ಊಟವನ್ನು ಮಾಡಬಾರದು. ಬಹುಶಃ ದೀಪ ಆರಿದಾಗ ಊಟ ಮಾಡಿದರೆ ಏನಾದರೂ ಕ್ರಿಮಿಗಳು ಬೀಳಬಹುದೆಂಬ ದೃಷ್ಟಿಯಿರಬಹುದು.

**೪ : ೯ : ೪ ಬೇಟೆಗೆ ಸಂಬಂಧಿಸಿದ ವಿಧಿ ನಿಷೇಧಗಳು**

ಬುಡಕಟ್ಟು ಸಮುದಾಯಗಳು ಬೇಟೆಯನ್ನು ತಮ್ಮ ಮುಖ್ಯ ಕಸುಬನ್ನಾಗಿ ಮಾಡಿಕೊಂಡಿವೆ. ಮೂಲತಃ ಕಾಡುವಾಸಿಗಳಾದ ಇವರಿಗೆ ಮುಖ್ಯ ಆಹಾರ ಬೇಟೆ. ಪ್ರಾಣಿ, ಪಕ್ಷಿಗಳನ್ನು ಬೇಟೆಯಾಡುವಾಗಲೂ ಕೆಲವು ನಿಬಂಧನೆಗಳು ಇವರಲ್ಲಿವೆ. ಒಡಿಗರು ಕೂಡ ಅರಣ್ಯವಾಸಿಗಳಾಗಿದ್ದರಿಂದಾಗಿ ಬೇಟೆಗೆ ಸಂಬಂಧಿಸಿದಂತೆ ಇವರಲ್ಲಿಯೂ ಅನೇಕ ನಂಬಿಕೆ, ನಿಷೇಧಗಳಿರುವುದನ್ನು ಗುರುತಿಸಬಹುದು.

* ಬೇಟೆಗೆ ಹೋಗುವಾಗ ವಿಧವೆ, ಹಾವು, ಮೊಲಗಳು ಎದುರಾಗಬಾರದು.
* ಬೇಟೆಗೆ ಹೋಗುವಾಗ ನರಿಯು ಕಂಡರೆ ಶುಭವಾಗುತ್ತದೆ.
* ಕರಡಿ, ಕಾಡೆಮ್ಮೆ, ನರಿಗಳ ಬೇಟೆಯನ್ನು ನಿಷೇಧಿಸಲಾಗಿದೆ.
* ಹಾವು ಬಲದಿಂದ ಎಡಕ್ಕೆ ಬಂದರೆ ಬೇಟೆಗೆ ಹೋಗುವುದನ್ನು ನಿಲ್ಲಿಸುತ್ತಾರೆ. ಒಂದು ವೇಳೆ ಹೋದರೆ ಬೇಟೆ ದೊರೆಯುವುದಿಲ್ಲ. ಏನಾದರೂ ಕೇಡು ಆಗುತ್ತದೆ.
* ಪೂರ್ಣಿಮೆಯ ದಿನದಂದು ಬೆಳಗಿನ ಜಾವ ಬೇಟೆಗೆ ಹೋದರೆ ಶುಭ.

* ಬೇಟೆಗೆ ಹೋಗುವಾಗ ವಿಧವೆ, ಹಾವು, ಮೊಲಗಳು ಎದುರಾದರೆ ಯಾವ ಪ್ರಾಣಿಗಳ ಬೇಟೆಯು ಸಿಗುವುದಿಲ್ಲ. ವಿಧವೆಯರು ಅಮಂಗಲವೆಂದು ಹಿಂದೂ ಸಂಪ್ರದಾಯದಲ್ಲಿ ಭಾವಿಸಿದೆ. ಅವರು ಯಾವುದೇ ಶುಭಕಾರ್ಯಗಳಿಗೂ ಹೋಗುವಾಗ ಎದುರಾದರೆ ಆ ಕಾರ್ಯಗಳಿಗೆ ಹೋಗುವುದಿಲ್ಲ. ಇದು ಜನಪದರ ನಂಬಿಕೆಯು ಹೌದು. ಹಾಗೆಯೇ ಹಾವು ರಾಹುವಿನ ಸಂಕೇತವಾದ್ದರಿಂದ ಹೋದ ಕೆಲಸ ಆಗುವುದಿಲ್ಲ. ಮೊಲವು ಸಮುದಾಯದಲ್ಲಿ ಅಶುಭಸೂಚಕ ವಾಗಿರುವುದರಿಂದ ಅದು ಎದುರಿಗೆ ಬಂದರೆ ಬೇಟೆ ಸಿಗುವುದಿಲ್ಲ ಎಂಬ ನಂಬಿಕೆಯನ್ನು ಹೊಂದಿದ್ದಾರೆ.

* ಬೇಟೆಗೆ ಹೋಗುವಾಗ ನರಿಯು ಕಂಡರೆ ಶುಭವಾಗುತ್ತದೆ. ಅಂದು ಒಳ್ಳೆಯ ಬೇಟೆಯು ಸಿಗುತ್ತದೆ ಎಂಬ ನಂಬಿಕೆಯಿದೆ. ನರಿಯು ಚತುರತೆಯುಳ್ಳ ಪ್ರಾಣಿ ಭಾವನೆಯಿಂದ ಸಮುದಾಯದವರು ಶುಭವಾಗುತ್ತದೆ ಎಂಬ ನಂಬಿಕೆಯನ್ನು ಹೊಂದಿದ್ದಾರೆ.

* ಕರಡಿ, ಕಾಡೆಮ್ಮೆ, ನರಿಗಳ ಬೇಟೆಯು ಸಮುದಾಯದಲ್ಲಿ ನಿಷೇಧಿಸಲಾಗಿದೆ. ಕಾರಣ ಈ ಪ್ರಾಣಿಗಳ ಮಾಂಸವು ನಿಷಿದ್ಧ ಹಾಗೂ ಈ ಪ್ರಾಣಿಗಳು ಕ್ರೂರ ಪ್ರಾಣಿಗಳಾಗಿರುವುದರಿಂದ ಬೇಟೆಯು ಹೆಚ್ಚು ಅಪಾಯಕಾರಿ ಆದ್ದರಿಂದ ಇವುಗಳ ಬೇಟೆಯು ನಿಷಿದ್ಧವಾಗಿರಬಹುದು.

* ಪೂರ್ಣಿಮೆಯ ದಿನದಂದು ಬೆಳಗಿನ ಜಾವ ಬೇಟೆಗೆ ಹೋದರೆ ಬೇಟೆಯು ಬೇಗ ದೊರೆಯುತ್ತದೆ. ಬೆಳಗಿನ ವೇಳೆ ಜಿಂಕೆ, ಸಾರಂಗ, ಕಡವೆ ಈ ಪ್ರಾಣಿಗಳು ಇಬ್ಬನಿಯ ಗರಿಕೆ ಹುಲ್ಲನ್ನು ತಿನ್ನಲು ಹಿಂಡು ಹಿಂಡಾಗಿ ಬರುತ್ತವೆ. ಬೆಳಂದಿಗಳ ಬೆಳಕಿನಲ್ಲಿ ಅವು ಸುಲಭವಾಗಿ ತಪ್ಪಿಸಿಕೊಂಡು ಹೋಗಲು ಸಾಧ್ಯವಿಲ್ಲ. ಆ ಸಮಯದಲ್ಲಿ ಸುಲಭವಾಗಿ ಬೇಟೆಯಾಡಬಹುದು. ಆದ್ದರಿಂದಲೇ ಹುಣ್ಣಿಮೆಯ ಬೆಳಗಿನ ಜಾವ ಒಳ್ಳೆಯ ದಿನವೆಂಬ ನಂಬಿಕೆ ಇದೆ.

**೪ : ೯ : ೫ ವ್ಯವಸಾಯಕ್ಕೆ ಸಂಬಂಧಿಸಿದ ವಿಧಿ ನಿಷೇಧಗಳು**

ಬೇಟೆಯ ಹಂತದಿಂದ ಕ್ರಮೇಣ ವ್ಯವಸಾಯದ ಹಂತಕ್ಕೆ ಬಂದಂತಹ ಬುಟಕಟ್ಟುಗಳು ದಿನನಿತ್ಯ ವ್ಯವಸಾಯವನ್ನು ಮಾಡುವಲ್ಲಿ ಕೆಲವಾರು ವಿಧಿ ನಿಷೇಧಗಳನ್ನು ರೂಪಿಸಿಕೊಂಡಿವೆ. ಕೃಷಿಗೆ ಸಂಬಂಧಿಸಿದ ಬಿತ್ತನೆ, ರಂಟೆ, ಕುಂಟೆ, ಎತ್ತುಗಳು, ಕಾಲಮಾನಗಳು ಮುಂತಾದ ಸಂಗತಿಗಳಲ್ಲಿ ಅನೇಕ ನಂಬಿಕೆಗಳನ್ನು ರೂಪಿಸಿಕೊಂಡಿವೆ. ಕೃಷಿಯನ್ನು ನಂಬಿ ಜೀವಿಸುವುದರಿಂದ ಕೃಷಿ ಸಲಕರಣೆಗಳು, ಎತ್ತುಗಳನ್ನು ತುಂಬಾ ಗೌರವಿಸುತ್ತಾರೆ. ಕೃಷಿಯನ್ನು ಯೋಗ್ಯ ಮಳೆಯಾದಾಗ ಒಳ್ಳೆಯ ದಿನಮಾನಗಳಲ್ಲಿ ಮಾಡುತ್ತಾರೆ. ಸಲಕರಣೆಗಳನ್ನು ಶುಚಿಗೊಳಿಸಿಕೊಂಡು ಅವುಗಳಿಗೆ ಪೂಜೆ ಮಾಡುತ್ತಾರೆ. ಧನಕ್ಕಿಂತಲೂ ಧಾನ್ಯ ಶ್ರೇಷ್ಠವೆಂದು ಈ ಸಮುದಾಯ ನಂಬಿದೆ. ಈ ಕಾರಣವಾಗಿ ಕೆಲವಾರು ನಿಷೇಧಗಳು ತಮ್ಮ ಕೃಷಿಯಲ್ಲಿ ಅಳವಡಿಸಿಕೊಂಡಿದ್ದಾರೆ.

* ಅಮವಾಸ್ಯೆ, ಹುಣ್ಣಿಮೆ, ಶುಕ್ರವಾರ, ಮಂಗಳವಾರದ ದಿವಸಗಳಲ್ಲಿ ಬೇರೆ ಯಾರಿಗೂ ಧಾನ್ಯಗಳನ್ನು ನೀಡುವುದಿಲ್ಲ. ಇವುಗಳನ್ನು ನೀಡಿದರೆ ಲಕ್ಷ್ಮಿಯು ಮನೆಬಿಟ್ಟು ತೆಗೆದುಕೊಂಡವರ ಮನೆಯನ್ನು ಸೇರುತ್ತಾಳೆ. ಅಲ್ಲದೇ ಆ ದಿನಗಳಿಂದ ಧಾನ್ಯವನ್ನು ಸಂಗ್ರಹಿಸಿದ ಹಗೇವು, ವಾಡೇ, ಗುಮ್ಮಿ, ಕಣಜಗಳನ್ನು ತೆಗೆಯುವುದಿಲ್ಲ. ತೆಗೆದರೆ ಧಾನ್ಯಗಳಲ್ಲಿ ಅಡಗಿರುವ ಲಕ್ಷ್ಮಿಯು ಹೊರಹೋಗುತ್ತಾಳೆಂದು ನಂಬುತ್ತಾರೆ.

* ವ್ಯವಸಾಯದಲ್ಲಿ ಒಡಿಗರಿಗೆ ಕೆಲವು ದಿನಗಳು ಅತ್ಯಂತ ಮಹತ್ವವಾಗಿವೆ. ಅಂತೆಯೇ ದನಗಳನ್ನು ಗೌರವ ಭಾವನೆಯಿಂದ ಕಾಣುತ್ತಾರೆ.

* ಅಮವಾಸ್ಯೆ, ಹುಣ್ಣಿಮೆ, ಮಂಗಳವಾರ, ಶುಕ್ರವಾರದಂತಹ ದಿನಗಳಂದು ಹಣ ದವಸ ಧಾನ್ಯಗಳನ್ನು ಕೊಡುವುದರಿಂದ ಅವು ನಮ್ಮನ್ನು ಕೈ ಬಿಟ್ಟು ಹೋಗುತ್ತವೆ. ಇವು ಮನೆಯ ಧಾನ್ಯಲಕ್ಷ್ಮಿ. ಜೀವನದ ಆಧಾರವಾದ ಧಾನ್ಯಗಳು ಎಂದು ಹೊರಗೆ ಕೊಡಲು ನಿರಾಕರಿಸುತ್ತಾರೆ. ಅಮವಾಸ್ಯೆ, ಹುಣ್ಣಿಮೆ, ದಿನಗಳಂದು ಹಗೇವು, ಕಣಜಗಳಿಂದ ದವಸಧಾನ್ಯಗಳನ್ನು ಹೊರ ತೆಗೆಯುವುದಿಲ್ಲ. ಆ ದಿನಗಳ ಬಗೆಗೆ ಅವರಲ್ಲಿರುವ ಧೋರಣೆಯಿಂದ ಇಂತಹ ನಂಬಿಕೆಗಳು ರೂಢಿಯಲ್ಲಿವೆ.

* ವ್ಯವಸಾಯವು ಇಂದು ಒಡಿಗ ಸಮುದಾಯದವರ ಮುಖ್ಯ ಕಸಬು. ಅವರು ವ್ಯವಸಾಯವನ್ನು ಕೈಗೊಳ್ಳುವ ಮುನ್ನ ಉಳುಮೆ ಮಾಡುವಾಗ ಬಿತ್ತನೆ ಮಾಡುವಾಗ ಒಳ್ಳೆಯ ದಿನ, ಗಳಿಗೆಯನ್ನು ನೋಡುತ್ತಾರೆ. ಇದರಿಂದ ಒಳ್ಳೆಯ ಬೆಳೆಯು ಸಿಗುತ್ತದೆ ಎಂಬ ನಂಬಿಕೆ ಮತ್ತು ದನಗಳ ಬಗ್ಗೆ ಭಕ್ತಿ, ಗೌರವವಿದೆ. ಅವು ಇವರೊಂದಿಗೆ ಜೀವನಾಧಾರವಾದ ದವಸಧಾನ್ಯಗಳನ್ನು ಬೆಳೆಯಲು ಸಹಕಾರಿಯಾಗಿದೆ. ಆದ್ದರಿಂದ ಅವುಗಳ ಮೇಲೆ ಗೌರವ ರೂಢಿಸಿಕೊಂಡಿದ್ದಾರೆ.

* ದನಗಳಿಗೆ ಬೆನ್ನಿನ ಹಿಂಭಾಗ, ತೊಡೆಗಳ ಹತ್ತಿರ ಸುಳಿಯಿದ್ದರೆ ಅದು ಒಳ್ಳೆಯದಲ್ಲ ಎಂಬ ನಂಬಿಕೆ ಇದೆ. ಇವು ನಿಶ್ಯಕ್ತವಾಗಿರಬಹುದು ಇಲ್ಲ ಕಾಯಿಲೆಯ ದಿನಗಳಾಗಿರುತ್ತವೆ. ಆದ್ದರಿಂದ ತುಂಬ ತೊಂದರೆ ಎಂದು ಸುಳಿಯಿದ್ದ ದನಗಳನ್ನು ಕಟ್ಟಿಕೊಂಡರೆ ಒಡೆಯನಿಗೆ ಬೇಡಿ ಬರುತ್ತದೆ ಎಂಬ ನಂಬಿಕೆಗಳಿವೆ.

* ಸೋಮವಾರ ಬಸವಣ್ಣನಿಗೆ ಮಹತ್ವವಾದ್ದರಿಂದ ಸೋಮವಾರ ಹೇರು ಕಟ್ಟಬಾರದು ಎಂಬ ನಂಬಿಕೆ ರೂಢಿಸಿಕೊಂಡಿದ್ದಾರೆ. ವಾರದಲ್ಲಿಒಮ್ಮೆಯಾದರೂ ತಮಗೂ ತಮ್ಮ ಪ್ರಾಣಿಗಳಿಗೂ ವಿಶ್ರಾಂತಿ ಪಡೆಯುವ ಉದ್ದೇಶವಿರಬಹುದು.

**೪ : ೯ : ೫ ಮಾಟ-ಮಂತ್ರಕ್ಕೆ ಸಂಬಂಧಿಸಿದ ವಿಧಿ ನಿಷೇಧಗಳು**

''ಪ್ರಕೃತಿಯನ್ನು ಭೂತ ಪ್ರೇತಾದಿಗಳನ್ನು ರಹಸ್ಯ ರೀತಿಯಲ್ಲಿ ಅಧೀನದಲ್ಲಿಟ್ಟುಕೊಂಡು ಘಟನೆಗಳ ಗತಿಯನ್ನು ಮಾರ್ಪಡಿಸಲಾಗುವುದೆಂಬ ವಿದ್ಯೆಯನ್ನು ಸಾಮಾನ್ಯವಾಗಿ ಮಾಟ-ಮಂತ್ರವಿದ್ಯೆಯೆಂದು ಕರೆಯಲಾಗುತ್ತದೆ. ಅನೈಸರ್ಗಿಕವಾದ ಅಥವಾ ಅಮಾನುಷವಾದ ವಿಧಾನದಲ್ಲಿ ನೈಸರ್ಗಿಕ ವ್ಯಾಪಾರಗಳನ್ನು ನಿಯಂತ್ರಿಸುವ ಕ್ರಿಯೆಯೇ ಮಾಟವೆಂದು ಹೇಳಲಾಗುತ್ತದೆ''.[೯] ಕಾಡುವಾಸಿಗಳಾದ ಬುಡಕಟ್ಟು ಜನರಿಗೆ ಅಲ್ಲಿ ವಾಸಿಸುವಾಗ ರಾತ್ರಿಯ ವೇಳೆಯಲ್ಲಿ ನಾನಾ ಬಗೆಯ ವಿಸ್ಮಯಗಳು ತಲೆದೋರುತ್ತಿದ್ದವು. ಅರಣ್ಯಗಳಲ್ಲಿನ ದಟ್ಟವಾದ ಪೊದೆಗಳು, ಗಿಡಮರಗಳು ಒಂದೊಮ್ಮೆ ಕಾಡ್ಗಿಚ್ಚಿನಿಂದ ಉರಿಯುತ್ತಿದ್ದವು. ಕಾಡುಮೃಗಗಳು ರಾತ್ರಿಯ ಸಮಯದಲ್ಲಿ ನಾನಾ ಬಗೆಯ ಕೂಗುಗಳನ್ನು ಹಾಕುತ್ತಿದ್ದವು. ಇಂತಹ ಹಲವಾರು ವಿಸ್ಮಯಗಳಿಗೆ ಭಯಗೊಂಡ ಕಾಡುವಾಸಿಗಳು, ಭಯದ ನೆಲೆಯಲ್ಲಿ ಭಕ್ತಿಗೆ ಮೊರೆಹೋದರು. ಜೊತೆಗೆ ಕ್ಷುದ್ರ ದೈವಗಳ ಉಪಟಳವೇ ಈ ವಿಸ್ಮಯಗಳಿಗೆ ಕಾರಣವೆಂಬ ದೃಷ್ಟಿಯಿಂದ ಬಹುಶಃ ಈ ಬಗೆಯ ಮಾಟ ಮಂತ್ರಗಳು ತಲೆದೋರಿದವು. ತಮ್ಮ ಜೀವನದಲ್ಲಿ ಘಟಿಸುವ ನಾನಾ ರೀತಿಯ ಅಸಹಜ ವರ್ತನೆಗಳು, ಅಲ್ಲದೇ ಪ್ರಕೃತಿಯ ಕೆಲವು ಅಸಹಜ ವೈಪರಿತ್ಯಗಳಿಗೆ ಮಾಟ ಮಂತ್ರವೇ ಕಾರಣ ಎಂಬ ಅರಿವಿನಿಂದ ಇದಕ್ಕೆ ಮೊರೆಹೋಗಿರಬೇಕು. ಮಾಟ ಮಂತ್ರವನ್ನು ಮಾಡಿಸುವುದರಿಂದ ಕೆಲವು ಆಪತ್ತುಗಳು ಕಳೆಯುತ್ತವೆ. ಅಲ್ಲದೇ ಮಾಟ ಮಾಡಿಸುವುದರಿಂದ ಮತ್ತೊಬ್ಬ ವ್ಯಕ್ತಿಯನ್ನು ಹತೋಟಿಯಲ್ಲಿಟ್ಟುಕೊಳ್ಳಬಹುದೆಂಬ ನಂಬಿಕೆಗಳು ಬುಡಕಟ್ಟು ಸಮುದಾಯಗಳಲ್ಲಿದೆ.

ಒಡಿಗ ಸಮುದಾಯದಲ್ಲಿ ಮಾಟ ಮಂತ್ರ ಹೆಚ್ಚಾಗಿ ಕಂಡು ಬರುವುದಿಲ್ಲ. ಆದರೆ ಬೇರೆ ಸಮುದಾಯದವರು ಈ ಬಗೆಯ ಮಾಟ ಮಂತ್ರಗಳನ್ನು ಮಾಡಿಸಿದರೆ, ಅದನ್ನು ನಂಬುವರು. ಕುಲದೈವಕ್ಕೆ ಶರಣಾಗಿ ಆ ಬಗೆಯ ಪೀಡೆಗಳನ್ನು ತೊಲಗಿಸಬೇಕೆಂದು ಬೇಡುತ್ತಾರೆ.

ತಮ್ಮ ಮಕ್ಕಳಿಗೆ ಭಯ ಭೀತಿ ಬಂದರೆ ಯಂತ್ರ ಮಂತ್ರಗಳನ್ನು ಹಾಕಿಸುವರು. ಅಲ್ಲದೇ ಯಂತ್ರ ಮಂತ್ರವನ್ನು ಬೆಳಗಿನ ಸಮಯದಲ್ಲಿ ಹಾಕಿಸಿದರೆ ಫಲಿಸಲಾರದು ಎಂದು ನಂಬುತ್ತಾರೆ.

ಒಡಿಗರಿಗೆ ದೆವ್ವ ಭೂತಾದಿಗಳ ಬಗೆಗೆ ಅಷ್ಟಾಗಿ ನಂಬಿಕೆಯಿಲ್ಲ. ಬದಲಾಗಿ ಈ ರೀತಿಯ ಪೀಡೆಗಳಿದ್ದರೆ ಮಲ್ಲೇಶ್ವರ ಸ್ವಾಮಿಯ ಮೊರೆಹೋಗಿ 'ದೇವರ ಗದ್ದಿಗೆ'' ಯನ್ನು ಹಾಕಿಸಿ, ಪೂಜೆಮಾಡಿ ತೊಲಗಿಸಿಕೊಳ್ಳುತ್ತಾರೆ. ಆಗ ಈ ದೇವರು ಪಿಶಾಚಿ, ದೆವ್ವ ವ್ಯಕ್ತಿಗೆ ಹಿಡಿದ ಕಾರಣವನ್ನು ಹೇಳುತ್ತದೆ.

**೪ : ೯ : ೭ ಹಬ್ಬ ಆಚರಣೆಗೆ ಸಂಬಂಧಿಸಿದ ವಿಧಿ ನಿಷೇಧಗಳು**

ಒಡಿಗ ಸಮುದಾಯವು ಕೆಲವಾರು ಹಬ್ಬಗಳನ್ನು ಆಚರಿಸಿಕೊಂಡು ಬರುತ್ತಿದೆ. ಈ ಹಬ್ಬಗಳನ್ನು ಇವರು ಅತ್ಯಂತ ಸಂಭ್ರಮದಿಂದ ಆಚರಿಸುತ್ತಾರೆ. ಹಬ್ಬಗಳಲ್ಲಿ ತಮ್ಮ ಕುಲದೈವವನ್ನು ವಿಶೇಷವಾಗಿ ನೆನೆಯುತ್ತಾರೆ. ಸಾಮೂಹಿಕವಾಗಿ ಇವರು ಹಬ್ಬಗಳನ್ನು ಆಚರಿಸುವರು. ದೀಪಾವಳಿ ಹಬ್ಬ ಇವರಿಗೆ ಅತ್ಯಂತ ಪ್ರಮುಖವಾದುದು. ದೀಪಾವಳಿಯ ದಿನ ಬೆಳಗಿನ ಜಾವಕ್ಕೆ ಕಾಡಿಗೆ ಹೋಗಿ ಕಳ್ಳಿ ಗಿಡಕ್ಕೆ ಪೂಜೆಯನ್ನು ಮಾಡಿ, ಅದನ್ನು ಕೊಂಚ ಕತ್ತರಿಸಿಕೊಂಡು ಬಂದು ತಮ್ಮ ಮನೆಯ ತಲೆಬಾಗಿಲಿಗೆ ಕಟ್ಟುವರು. ಈ ಕಳ್ಳಿಯನ್ನು ಕಟ್ಟುವುದು ದೀಪಾವಳಿಯ ವಿಶೇಷತೆಯಾಗಿರುತ್ತದೆ. ಇದನ್ನು ಕಟ್ಟುವುದರಿಂದ ದುಷ್ಟಶಕ್ತಿಗಳು ಮನೆಯೊಳಗೆ ಪ್ರವೇಶಿಸಲಾರವೆಂದು ಈ ಸಮುದಾಯವು ನಂಬುತ್ತದೆ.

ದೀಪಾವಳಿಯ ಮೊದಲಿನ ದಿನದಂದು ಕೊಂಗಮರ್ರಿಟ್ಟು ಅಥವಾ ಅಕ್ಕಿಯ ಮುದ್ದೆಯನ್ನು ಮಾಡುವರು. ಈ ಆಹಾರವೇ ಹಬ್ಬದ ಊಟ. ದೀಪಾವಳಿಯ ಕೊನೆಯ ದಿನದಂದು ಮಾಂಸಾಹಾರ ಮಾಡುತ್ತಾರೆ. ಅದರಂತೆ ಕಡೇ ಬೀಸುವ ಹಬ್ಬಕ್ಕೂ ಒಡಿಗರು ಮಾಂಸಾಹಾರವನ್ನೇ ಮಾಡುತ್ತಾರೆ. ಬೀಸು ಹಬ್ಬದ ನಂತರ ಏಳು ದಿನಗಳಲ್ಲಿ ಕಡೇಬೀಸು ಇರುತ್ತದೆ. ಹಟ್ಟಿಯಲ್ಲಿ ಯಾವುದೇ ರೀತಿಯ ತೊಂದರೆಯಾಗಬಾರದೆಂಬ ದೃಷ್ಟಿಯಿಂದ ಹಾಗೂ ತಮ್ಮ ಮಕ್ಕಳಿಗೆ ಯಾವುದೇ ಪೀಡೆಯಾಗಲಿ, ರೋಗರುಜಿನಗಳಾಗಲೀ ಬರಬಾರದೆಂಬ ದೃಷ್ಟಿಯಿಂದ, ಕಾಡುಪ್ರಾಣಿಗಳ ಹಾವಳಿಯಾಗಬಾರದೆಂಬ ಕಾರಣದಿಂದ ಅಂದು ಮಾರಿದೈವದ ಪೂಜೆಯನ್ನು ಮಾಡುತ್ತಾರೆ. ದೇವಿ ಪೂಜೆಯು ಈ ಸಮುದಾಯಕ್ಕೆ ಅತ್ಯಂತ ಮುಖ್ಯವಾದುದು. ಪೂಜೆಯನ್ನು ಮಾಡಿ, ಬಲಿಯನ್ನು ಕೊಡದಿದ್ದರೆ, ತಮ್ಮ ಹಟ್ಟಿಗಳ ಮೇಲೆ ತನ್ನ ಉರಿಗಣ್ಣನ್ನು ತೆರೆದು ಜನರನ್ನು ಬಲಿತೆಗೆದುಕೊಳ್ಳುತ್ತಾಳೆ. ಎಂಬುದಾಗಿ ಈ ಸಮುದಾಯ ನಂಬುತ್ತದೆ.

ಕುಂಭಮಾಸದಲ್ಲಿ ಈ ಸಮುದಾಯದವರೆಲ್ಲರೂ ಕೂಡಿಕೊಂಡು ಚಾಮುಂಡಿಯ ಜಾತ್ರೆಯನ್ನು ಮಾಡುತ್ತಾರೆ. ಆಗ ತಮ್ಮ ತಮ್ಮ ಹರಕೆಯನ್ನು ತೀರಿಸಿಕೊಂಡು, ಒಟ್ಟಾಗಿ ಅಡುಗೆಯನ್ನು ಮಾಡಿ, ಕೂಡುಭೋಜನ ಮಾಡುವರು. ಎರವರಿಗೆ, ಮಲೆಕುರುಬರಿಗೆ ಊಟ ಹಾಕುತ್ತಾರೆ.

**೪ : ೯ : ೮ ಆಟಕ್ಕೆ ಸಂಬಂಧಿಸಿದ ವಿಧಿ ನಿಷೇಧಗಳು**

ಮನೋರಂಜನೆಗಾಗಿ ಒಡಿಗರು ಹಲವಾರು ಆಟಗಳನ್ನು ಆಡುತ್ತಾರೆ. ಗಂಡಸರಿಗೆ ಮತ್ತು ಹೆಂಗಸರಿಗೆ ಪ್ರತ್ಯೇಕವಾದಂತಹ ಆಟಗಳಿವೆ. ಅಲ್ಲದೇ ಈ ಆಟಗಳನ್ನು ಆಡಲು ಕೆಲವಾರು ಬದ್ಧತೆಗಳನ್ನು ಈ ಸಮುದಾಯ ಕಟ್ಟಿಕೊಂಡಿದೆ.

* ಸಂಜೆಯ ವೇಳೆಯಲ್ಲಿ ಹೆಂಗಸರು ಕುಂಟುವ ಆಟವನ್ನಾಡಬಾರದು.

* ಮದುವೆಯ ಸಮಾರಂಭಗಳಲ್ಲಿ ಮಾತ್ರ ಕೋಲಾಟ ಹಾಗೂ ತೆಂಗಿನ ಕಾಯಿಯನ್ನು ಕದಿಯುವ ಆಟ ಆಡಬೇಕು.

* ಹೆಂಗಸರು ಮಕ್ಕಳು ಸಂಜೆಯ ವೇಳೆಯಲ್ಲಿ ಕುಂಟಾಟ ಆಟವನ್ನಾಡುತ್ತಾ ಮನೆಯ ಕೆಲಸಗಳು ಸಾಗುವುದಿಲ್ಲ. ಹೊಲದಲ್ಲಿ ದುಡಿದ ಬಂದ ಗಂಡಸರಿಗೆ ಕೈಕಾಲುಗಳಿಗೆ ನೀರು ನೀಡುವುದು ಮುಖ್ಯ. ಇಲ್ಲದಿದ್ದರೆ ಅವರು ಸಿಟ್ಟಾಗಿ ಜಗಳವಾಗುತ್ತವೆ ಮತ್ತು ಮಕ್ಕಳು ಕತ್ತಲಲ್ಲಿ ಬಿದ್ದಾಗ ಗಾಯಗಳಾಗುತ್ತವೆ ಎಂದು ಈ ನಂಬಿಕೆಗಳು ರೂಢಿಯಲ್ಲಿವೆ.

* ಕೋಲಾಟ ಮತ್ತು ತೆಂಗಿನಕಾಯಿಯನ್ನು ಕಸಿಯುವ ಆಟವನ್ನು ಮದುವೆ ಸಮಯದಲ್ಲಿ ಆಡಬೇಕು ಎಂಬ ನಂಬಿಕೆ ಇರುವುದು. ದಿನಂಪ್ರತಿ ಈ ಆಟಗಳನ್ನು ಆಡುತ್ತಾ ಇದ್ದರೆ ಕೆಲಸ ಕಾರ್ಯಗಳು ನಡೆಯುವುದಿಲ್ಲ ಎಂಬುದರಿಂದ ನಿಷೇಧವಿರುವುದು ಗಮನಾರ್ಹ.

### ೪ : ೯ : ೯ ವೈದ್ಯಕ್ಕೆ ಸಂಬಂಧಿಸಿದ ವಿಧಿ ನಿಷೇಧಗಳು

ಬುಡಕಟ್ಟು ಸಮುದಾಯಗಳು ಅರಣ್ಯವಾಸಿಗಳಾಗಿದ್ದಾರೆ. ಇವರು ತಮ್ಮ ದೈಹಿಕ ತೊಂದರೆಗಳಿಗೆ ಹಲವಾರು ವನಮೂಲಿಕೆಗಳನ್ನು ಔಷಧಿಯನ್ನಾಗಿ ಕಂಡುಕೊಂಡಿದ್ದಾರೆ. ಇದನ್ನು ಹಿಂದಿನ ಅಧ್ಯಾಯಗಳಲ್ಲಿ ವಿವರಿಸಲಾಗಿದೆ. ಇಲ್ಲಿ ಕೇವಲ ಔಷಧೋಪಚಾರದ ಕೆಲವು ನಿಷೇಧಗಳನ್ನು ಮಾತ್ರ ನೋಡಲಾಗಿದೆ.

* ಔಷಧಿಯನ್ನು (ಗಿಡಮೂಲಿಕೆಗೆ ಸಂಬಂಧಿಸಿ) ಬೆಳಗಿನ ಜಾವ ಮತ್ತು ಸಂಜೆಯ ಸಮಯದಲ್ಲಿ ಮಾತ್ರ ತೆಗೆದುಕೊಳ್ಳಬೇಕು. ಮಿಕ್ಕಂತೆ ಬೇರೆ ಸಮಯದಲ್ಲಿ ತೆಗೆದುಕೊಳ್ಳಬಾರದು.

* ಗಿಡಮೂಲಿಕೆಗಳನ್ನು ಬೆಳಗಿನ ಜಾವದಲ್ಲಿಯೇ ತರಬೇಕು. ಇಲ್ಲವಾದರೆ ಅದು ಕೆಲಸಮಾಡುವುದಿಲ್ಲ.

* ಗಿಡಮೂಲಿಕೆಗಳ ಹೆಸರು ಹೇಳಿದರೆ ಆ ಔಷಧಿಯಿಂದ ಕಾಯಿಲೆ ಗುಣ ಹೊಂದುವುದಿಲ್ಲ.

* ಔಷಧಿಗಳನ್ನು ತೆಗೆದುಕೊಳ್ಳುವಾಗ ಬೆಳಗ್ಗೆ ಅಥವಾ ಸಂಜೆ ಮಾತ್ರ ತೆಗೆದುಕೊಳ್ಳಬೇಕು. ಇಲ್ಲವಾದರೆ ಕಾಯಿಲೆಗಳು ಗುಣವಾಗುವುದಿಲ್ಲವೆಂದು ಹೇಳುತ್ತಾರೆ. ಔಷಧಿಗಳನ್ನು ಬೆಳಗ್ಗೆ ಅಥವಾ ಸಂಜೆ ತೆಗೆದುಕೊಳ್ಳುವುದು ಆರೋಗ್ಯದ ದೃಷ್ಟಿಯಿಂದ ಒಳ್ಳೆಯದು. ಸಂಜೆ ತೆಗೆದುಕೊಂಡರೆ ವಿಶ್ರಾಂತಿ ಪಡೆಯಬಹುದು. ಇದರಿಂದ ಕಾಯಿಲೆ ಬೇಗ ಗುಣವಾಗುತ್ತದೆ.

* ಗಿಡಮೂಲಿಕೆಗಳನ್ನು ಬೆಳಗಿನ ಜಾವದಲ್ಲಿಯೇ ತರಬೇಕು. ಇಲ್ಲವಾದರೆ ಅದು ಕೆಲಸಮಾಡುವುದಿಲ್ಲ. ಬೆಳಗಿನ ಸಮಯದಲ್ಲಿ ಕಾಡುಪ್ರಾಣಿಗಳ ಭಯವಿರುವುದಿಲ್ಲ ಮತ್ತು ವೈಜ್ಞಾನಿಕವಾಗಿಯು ಬೆಳಗಿನ ವೇಳೆ ಗಿಡಮೂಲಿಕೆ ತಂದು ಔಷಧಿ ನೀಡುವುದರಿಂದ ಮತ್ತು ಔಷಧಿ ತೆಗೆದುಕೊಳ್ಳುವುದರಿಂದ ಕಾಯಿಲೆ ಬೇಗ ಗುಣವಾಗುತ್ತವೆ. ಆದ್ದರಿಂದ ಈ ನಂಬಿಕೆ ನಿಷೇಧಗಳು ರೂಢಿಯಲ್ಲಿವೆ ಮತ್ತು ಗಿಡಮೂಲಿಕೆಗಳ ಹೆಸರು ಹೇಳುವುದರಿಂದ ಕಾಯಿಲೆ ಗುಣವಾಗುವುದಿಲ್ಲ

ವೆನ್ನುತ್ತಾರೆ. ಗಿಡಮೂಲಿಕೆಗಳ ಹೆಸರು ಹೇಳಿದರೆ ಎಲ್ಲರೂ ತೆಗೆದುಕೊಳ್ಳುತ್ತಾರೆ ಎಂಬ ಪಕ್ಷಪಾತ ಧೋರಣೆ ಯಿರಬಹುದು.

**೪ : ೯ : ೧೦ ವಸತಿಗೆ ಸಂಬಂಧಿಸಿದ ವಿಧಿ ನಿಷೇಧಗಳು**

ಬುಡಕಟ್ಟು ಸಮುದಾಯಗಳು ವಸತಿ ಮಾಡುವುದು ಕಾಡು ಮತ್ತು ನಾಡುಗಳಲ್ಲಿ ಅವರು ಎಲ್ಲಿಯೇ ವಾಸಿಸಲಿ ತಮ್ಮ ನೆಲೆಯನ್ನು ಕೆಲವು ಶಾಸ್ತ್ರೋಕ್ತ ನಿಯಮಗಳಿಂದ ನಿರ್ಮಿಸುತ್ತಾರೆ. ಅದು ಗುಡಿಸಲೇ ಆಗಿರಲಿ, ಮನೆಯೇ ಆಗಿರಲಿ, ಆ ನೆಲೆಯ ವಾಸ್ತು, ದಿಕ್ಕು, ಬಾಗಿಲು, ಕಿಟಕಿ, ಒಲೆ ಯಾವ ಕಡೆ ಇರಬೇಕೆಂದು ಬದ್ಧತೆಗಳನ್ನು ಈ ಸಮುದಾಯಗಳು ರೂಢಿಸಿಕೊಂಡಿವೆ. ಸಾಮಾನ್ಯವಾಗಿ ಬುಡಕಟ್ಟು ಸಮುದಾಯಗಳ ಮನೆಗಳಿಗೆ ಬಾಗಿಲು ಚಿಕ್ಕದಾಗಿರುತ್ತವೆ. ಮನುಷ್ಯನು ಬಗ್ಗಿಕೊಂಡೇ ಆಲಯವನ್ನು ಪ್ರವೇಶಿಸಬೇಕೆಂಬ ನಿಯಮವನ್ನು ರೂಪಿಸಿಕೊಂಡಿದ್ದಾರೆ. ಆ ಮೂಲಕ ಮನುಷ್ಯನ ಅಹಂಮಿಕೆಗಳು ತಗ್ಗಿ-ಬಗ್ಗಿ ನಡೆಯುವಂತೆ ಪ್ರೇರೇಪಿಸುವ ನೆಲೆಯು ಇದಾಗಿರುತ್ತದೆ.

ಒಡಿಗರ ವಸತಿಯ ವ್ಯವಸ್ಥೆ ಮುಖ್ಯವಾಗಿ ಕಾಡು ಮತ್ತು ಊರುಗಳ ಅಂತರದಲ್ಲಿ ಇರುವುದು ಕಂಡು ಬರುತ್ತದೆ. ಇವರ ನೆಲೆಗಳು ವೃತ್ತಾಕಾರದ ವಾಸ್ತು ಶೈಲಿಯಲ್ಲಿರುತ್ತವೆ. ಅಲ್ಲದೇ ಭತ್ತದ ಹುಲ್ಲು ಮತ್ತು ಕಟ್ಟಿಗೆಯಗಳವುಗಳಿಂದ ಇವರ ಗುಡಿಸಲುಗಳು ನಿರ್ಮಾಣಗೊಂಡಿವೆ. ಕೆಲವರು ಕಲ್ಲು, ಇಟ್ಟಿಗೆಗಳಿಂದ ಇತ್ತೀಚೆಗೆ ಮನೆಯನ್ನು ಕಟ್ಟಿಕೊಂಡಿದ್ದಾರೆ.

**೪ : ೯ : ೧೦ : ೧ ವಸತಿ ಭೂಮಿಯ ಆಯ್ಕೆ ಮತ್ತು ಪೂರ್ವ ಸಿದ್ಧತೆ**

ಒಡಿಗರು ತಮ್ಮ ವಸತಿಯ ನೆಲೆಗಾಗಿ ಒಂದು ಸೂಕ್ತ ಸ್ಥಳವನ್ನು ಆಯ್ಕೆ ಮಾಡಿಕೊಂಡು, ಅಲ್ಲಿ ಸ್ಥಳ ಪರೀಕ್ಷೆಯನ್ನು ಮಾಡುತ್ತಾರೆ. ಅದು ಶುಭವೆಂದು ಕಂಡುಬಂದರೆ ಸ್ಥಳದಲ್ಲಿ ನಾಲ್ಕು ಕಡ್ಡಿ ಕಂಬಗಳನ್ನು ನೆಟ್ಟು, ಅವುಗಳ ಮೇಲೆ ಒಂದೊಂದುರ ಮೇಲೆ ನಾಲ್ಕು ಕಲ್ಲನ್ನು ಇಟ್ಟು ಹೋಗುತ್ತಾರೆ. ಮರುದಿನ ಬಂದು ನೋಡಿದಾಗ ನಾಲ್ಕು ಕಡ್ಡಿಯ ಮೇಲಿನ ಕಲ್ಲುಗಳು ಹಾಗೆಯೇ ಇದ್ದರೆ ಆ ಸ್ಥಳ ಮನೆಯನ್ನು ಕಟ್ಟಲು ಸೂಕ್ತವೆಂದು ತಿಳಿಯುತ್ತಾರೆ. ಇಲ್ಲವಾದರ ಅದು ಮನೆಯನ್ನು ಕಟ್ಟಲು ಯೋಗ್ಯ ಸ್ಥಳವಾಗಲಾರದು ಎಂದು ನಂಬುತ್ತಾರೆ.

ಮನೆಯ ಕಿಟಕಿ, ಬಾಗಿಲುಗಳನ್ನು ಹಿಂದೆ ಹಾಗೂ ಮೂಡಲ ಭಾಗಕ್ಕೆ ಇಡುವುದು ನಿಯಮವಿದೆ. ಇದರಿಂದ ಮನೆಗೆ ಶುಭವಾಗುತ್ತದೆ. ಸೂರ್ಯನ ಪ್ರಭೆ ಮನೆಯಲ್ಲಿ ಪ್ರವೇಶಿಸಿ ಶುಭ ಉಂಟಾಗುತ್ತದೆ. ಅಲ್ಲದೇ ಆ ಮನೆಯು ಅಭಿವೃದ್ಧಿಯಾಗುತ್ತದೆಂದು ನಂಬುತ್ತಾರೆ.

ಗುಡಿಸಲನ್ನು ಕಟ್ಟುವಾಗ, ಗುಡಿಸಲಿನ ಹಿಂದೆ ಹಾಗೂ ಮುಂದೆ ಒಂದು ಪಟ್ಟಿಯನ್ನು ಕಟ್ಟುತ್ತಾರೆ. ಇದನ್ನು ''ಭೀಮನ ಪಟ್ಟಿ'' ಎಂದು ಕರೆಯುತ್ತಾರೆ. ಈ ಪಟ್ಟಿಯನ್ನು ಕಟ್ಟುವುದರಿಂದ ದುಷ್ಟಶಕ್ತಿಗಳು ಒಳನುಗ್ಗುವುದಿಲ್ಲವೆಂದು ಈ ಸಮುದಾಯ ನಂಬಿದೆ. ಅಲ್ಲದೇ ಮನೆಯ ತಲೆಬಾಗಿಲಿನಲ್ಲಿ ಕಬ್ಬಿಣದ ತುಂಡನ್ನು ಹಾಕುತ್ತಾರೆ. ಇದರಿಂದ ಸಿಡಿಲು ಬಡಿಯುವುದಿಲ್ಲ ಎಂಬ ನಂಬಿಕೆಯು ಈ ಸಮುದಾಯದಲ್ಲಿದೆ.

* ಮನೆಯಲ್ಲಿ ಮೊಲ ಪ್ರವೇಶಿಸಬಾರದು. ಒಂದು ವೇಳೆ ಪ್ರವೇಶಿಸಿದರೆ ಆ ಮನೆಯನ್ನು ಮೂರು ತಿಂಗಳು ಬಿಡಬೇಕು. ನಂತರ ಕುಲದೈವಕ್ಕೆ ಪೂಜಿಸಿ ಮನೆಯನ್ನು ಪ್ರವೇಶ ಮಾಡಬೇಕು. ಮೊಲವು ಸಮುದಾಯದವರಲ್ಲಿ ಶುಭಕಾರ್ಯಗಳಿಂದ ಹಿಡಿದು ಎಲ್ಲ ಕಾರ್ಯಗಳಿಗೂ ಅಶುಭ ಹಾಗೂ ಮನೆ ಪ್ರವೇಶಿಸಿದರೆ ತುಂಬಾ ತೊಂದರೆಯಾಗುತ್ತದೆ ಎಂದು ನಂಬಿದ್ದಾರೆ.

* ಮನೆಯ ಒಳಗಡೆಗೆ ಕಾಗೆಯು ಪ್ರವೇಶಿಸಬಾರದು. ಕಾಗೆ ಪ್ರವೇಶಿಸಿದರೆ ಮನೆಗೆ ಶನಿ ಕಾಡುತ್ತದೆ. ಮೂರು ತಿಂಗಳು ಮನೆ ಬಿಡಬೇಕು. ನಂತರ ಕುಲಗುರುಗಳಿಂದ ಶಾಂತಿ ಮಾಡಿಸಿ, ಮನೆಗೆ ಹೋಗಬೇಕಾಗುತ್ತದೆ. ಕಾಗೆಯು ಆಶುಭ ಎಂಬ ಮಾನಸಿಕ ಧೋರಣೆಯಿಂದ ಈ ನಂಬಿಕೆಗಳು ರೂಢಿಯಲ್ಲಿವೆ.

* ಮನೆಯ ಹೊಸ್ತಿಲ ಮೇಲೆ ಕುಳಿತುಕೊಳ್ಳಬಾರದು. ಅಲ್ಲದೇ ನಿಂತುಕೊಳ್ಳಬಾರದು ಇದರಿಂದ ಕೆಟ್ಟ ಪರಿಣಾಮಗಳಾಗುತ್ತವೆ.

* ಮನೆಯ ಒಲೆಯು ಯಾವಾಗಲೂ ಪೂರ್ವಕ್ಕೆ ಇರಬೇಕೆಂಬ ನಿಯಮವಿದೆ.

* ಹೊಸ್ತಿಲ ಮೇಲೆ ಕುಳಿತುಕೊಂಡರೆ ಹಾಗೂ ನಿಂತುಕೊಂಡರೆ ಒಳಗೆ, ಹೊರಗೆ ಓಡಾಡಲು ತೊಂದರೆಯಾಗುತ್ತದೆ. ಆದ್ದರಿಂದ ಹೊಸ್ತಿಲ ಮೇಲೆ ಕುಳಿತುಕೊಳ್ಳುವುದು ಹಾಗೂ ನಿಂತುಕೊಳ್ಳುವುದನ್ನು ಕೆಟ್ಟದಾಗುತ್ತದೆ ಎಂಬುದಾಗಿ ನಿಷೇಧಿಸಿದ್ದಾರೆ.

* ಮನೆಯಲ್ಲಿ ಒಲೆಯು ಪೂರ್ವದಿಕ್ಕಿಗೆ ಇರಬೇಕೆಂಬ ನಿಯಮವಿದೆ. ಒಲೆಯು ಪೂಜಾರ್ಹವಾದದ್ದು ಮತ್ತು ದೈವೀ ಮನೋಭಾವನೆಯಿಂದ ಪೂರ್ವ ದಿಕ್ಕು ಶುಭ ಎಂಬ ಭಾವನೆ ಇವರ ಮನೆಯ ಬಾಗಿಲುಗಳು ಪೂರ್ವದಿಕ್ಕಿಗೆ ಇರುತ್ತವೆ. ಇದರಿಂದ ಅಡುಗೆ ಸಮಯದಲ್ಲಿ ಒಳ್ಳೆಯ ಗಾಳಿ ಬೆಳಕು ಬರಲೆಂದು ಈ ನಂಬಿಕೆಗಳು ಹುಟ್ಟಿಕೊಂಡಿವೆ.

**೪ : ೯ : ೧೧ ದಿನಂಪ್ರತಿ ಜೀವನದ ವಿಧಿ ನಿಷೇಧಗಳು**

ಒಡಿಗರು ತಮ್ಮ ದೈನಂದಿನ ಸಾಮಾಜಿಕ ಜೀವನದಲ್ಲಿ ಹಲವಾರು ನಂಬಿಕೆ, ವಿಧಿನಿಷೇಧಗಳನ್ನು ಇಟ್ಟುಕೊಂಡಿದ್ದಾರೆ.

* ಬೆಳಗ್ಗೆ ಎದ್ದು ತೆಂಗಿನಮರವನ್ನು ನೋಡಿದರೆ ಒಳಿತು. ನರಿಯನ್ನು ನೋಡಿದರೆ ಶುಭ.

* ಮಾತನಾಡುವಾಗ ಬಲಭಾಗದಲ್ಲಿ ಹಲ್ಲಿಯು ನುಡಿದರೆ, ಆ ಮಾತು ಸತ್ಯವೆಂದು ನಂಬುತ್ತಾರೆ.

* ಕನಸಿನಲ್ಲಿ ಬಂಧುವರ್ಗ, ಸ್ನೇಹಿತರು ಮರಣ ಹೊಂದಿದರೆ ಅವರ ಆಯುಷ್ಯ ಮತ್ತಷ್ಟು ವೃದ್ಧಿಸುತ್ತದೆ.

* ಕನಸಿನಲ್ಲಿ ನದಿ, ಬೆಂಕಿಯನ್ನು ಕಂಡರೆ ಯಾರಾದರೂ ಸಾಯುವ ಸೂಚನೆ.

* ಅರಳಿಮರದ ಮೇಲೆ ದೇವರು ಓಡಾಡುವುದು ಕನಸಿನಲ್ಲಿ ಕಂಡರೆ ಅಶುಭ.

* ಆಲದ ಮರದಡಿಯಲ್ಲಿ ಮಲಗಬಾರದು.

* ಅಮವಾಸ್ಯೆ, ಹುಣ್ಣಿಮೆಯಂದು ರಾತ್ರಿಯ ವೇಳೆಯಲ್ಲಿ ಓಡಾಡಬಾರದು. ಗರ್ಭಿಣಿ ಸ್ತ್ರೀಯರು ಓಡಾಡಿದರೆ ತೊಂದರೆ. ಪಿಶಾಚಿ, ಭೂತಗಳು ಸೇರಿಕೊಳ್ಳುತ್ತವೆ.

* ರಾತ್ರಿಯ ವೇಳೆಯಲ್ಲಿ ಕೋಳಿ ಕೂಗುವುದರಿಂದ ಅಶುಭ.

* ಬುಧವಾರ ಮತ್ತು ಶುಕ್ರವಾರ ಶುಭದಿನಗಳು. ಈ ದಿನಗಳಲ್ಲಿ ಕಾರ್ಯಗಳು ಸುಲಭವಾಗಿ ನೆರವೇರುತ್ತವೆ.

* ಊಟ ಮಾಡುವಾಗ ಬೇರೆಯವರ ದೃಷ್ಟಿ ಬಿದ್ದರೆ, ಮುಂದೆ ಊಟ ಸೇರುವುದಿಲ್ಲ.

ದಿನನಿತ್ಯದಲ್ಲಿ ಬೆಳಗ್ಗೆ ಎದ್ದು ತೆಂಗಿನ ಮರ ನೋಡಿದರೆ ಶುಭ ಎಂಬ ನಂಬಿಕೆಯಿದೆ. ತೆಂಗಿನಮರವನ್ನು ಕಲ್ಪವೃಕ್ಷವೆಂದು ಪೂಜನೀಯ ದೃಷ್ಟಿಯಿಂದ ಪವಿತ್ರ ಭಾವನೆಯಿದೆ ಮತ್ತು ನರಿಯನ್ನು ಸಹ ಕಂಡರೆ ಶುಭವೆಂದು ಹೇಳುತ್ತಾರೆ. ಅಂದಿನ ಕೆಲಸಗಳು ಸುಲಭವಾಗಿ ಆಗುತ್ತವೆ ಎಂದು ನಂಬಿದ್ದಾರೆ.

* ಮಾತನಾಡುವಾಗ ಮನೆಯಲ್ಲಿ ಹಲ್ಲಿ ಬಲಭಾಗದಲ್ಲಿ ನುಡಿದರೆ ಆ ಕೆಲಸದಲ್ಲಿ ಶುಭವಾಗುತ್ತದೆ ಮತ್ತು ಯಾವ ತೊಂದರೆಯಿಲ್ಲದೆ ಆ ಕೆಲಸ ಕಾರ್ಯಗಳು ನಡೆಯುತ್ತವೆ ಎಂಬ ನಂಬಿಕೆಯಿದೆ. ಅವರಾಡುವ ಮಾತುಗಳು ಸತ್ಯವೆಂದು ನಂಬುತ್ತಾರೆ.

* ಕನಸಿನಲ್ಲಿ ಬಂಧುಗಳು, ಸ್ನೇಹಿತರು ಸತ್ತರೆ ಅವರಿಗೆ ಆಯುಷ್ಯ ವೃದ್ಧಿಸುತ್ತದೆ. ಅವರಿಗೆ ಅಂಟಿದ್ದ ಯಾವುದೋ ಕೆಟ್ಟ ದೋಷ ಕನಸಿನ ಮೂಲಕ ನಿವಾರಣೆಯಾಯಿತು ಎಂಬ ನಂಬಿಕೆ.

* ಕನಸಿನಲ್ಲಿ ನದಿ, ಬೆಂಕಿಯನ್ನು ಕಂಡರೆ ಯಾರಾದರೂ ಸಾಯುವ ಸೂಚನೆ. ನದಿ ಹಾಗೂ ಬೆಂಕಿಯು ಭಯದ ಸಂಕೇತವೆಂದು ತಿಳಿದಿದ್ದಾರೆ. ಆದ್ದರಿಂದ ಕನಸಿನಲ್ಲಿ ಬಂದರೆ ಹತ್ತಿರದ ಬಂಧುಗಳು ಸಾಯುವ ಸೂಚನೆ ಎನ್ನುತ್ತಾರೆ.

* ಅರಳಿಮರದ ಮೇಲೆ ದೇವರು ಓಡಾಡುವುದು ಕನಸಿನಲ್ಲಿ ಕಂಡರೆ ಅಶುಭವವೆಂದು ನಂಬಿದ್ದಾರೆ ಮತ್ತು ಆಲದ ಮರದ ಕೆಳಗೆ ಮಲಗಬಾರದು ಎನ್ನುತ್ತಾರೆ. ಆಲದಮರ ತನ್ನ ಬೇರುಗಳ ಮೂಲಕ ಇಂಗಾಲ ಡೈ ಆಕ್ಸೈಡ್‌ನ್ನು ತೆಗೆದುಕೊಳ್ಳುತ್ತದೆ. ಅದರ ಕೆಳಗೆ ಮಲಗುವುದರಿಂದ ಇವರ ಶರೀರಕ್ಕೆ ಇಂಗಾಲದ ಡೈ ಆಕ್ಸೈಡ್ ಸುಲಭ ಪ್ರವೇಶದಿಂದ ಇವರ ಆರೋಗ್ಯ ಕೆಡುತ್ತದೆ.

* ಅಮಾವಾಸ್ಯೆ, ಹುಣ್ಣಿಮೆ ದಿನಗಳಂದು ರಾತ್ರಿಯ ಸಮಯದಲ್ಲಿ ಗರ್ಭಿಣಿ ಸ್ತ್ರೀಯರು ಒಬ್ಬೊಬ್ಬರೆ ಹೊರಗೆ ಹೋಗಬಾರದು. ಅವರ ಮೈಯಲ್ಲಿ ಭೂತ, ಪಿಶಾಚಿಗಳು ಸೇರಿಕೊಳ್ಳುತ್ತವೆ ಎನ್ನುತ್ತಾರೆ. ಅವರು ರಾತ್ರಿ ವೇಳೆ ಕತ್ತಲಲ್ಲಿ ಓಡಾಡುವಾಗ ಬಿದ್ದರೆ ತೊಂದರೆಯಾಗುತ್ತದೆ. ಕಾರಣ ಅವರು ನಿಶ್ಯಕ್ತರಾಗಿರುತ್ತಾರೆ. ಆದ್ದರಿಂದ ಅವರು ಓಡಾಡಬಾರದು ಎಂಬ ನಂಬಿಕೆಯಿಂದ ಈ ರೀತಿ ನಿಷೇಧ ರೂಢಿಯಲ್ಲಿವೆ. ಮತ್ತು ಅಮವಾಸ್ಯೆ ದಿನಗಳು ದೇವರು, ಭೂತ, ಪ್ರೇತಗಳಿಗೆ ಸಂಚರಿಸಲು ಪ್ರಶಸ್ತ ದಿನವೆಂದು ನಂಬುತ್ತಾರೆ.

* ರಾತ್ರಿಯ ವೇಳೆ ಕೋಳಿ ಕೂಗಬಾರದು. ಇದರಿಂದ ಮನೆಗೆ ಅಶುಭವೆಂದು ಕೂಗಿದ ಕೋಳಿಯ ಕಾಲಿನ ಬೆರಳನ್ನು ಹೊಸ್ತಿಲ ಮೇಲಿಟ್ಟು ಒಂದನ್ನು ಕತ್ತರಿಸುತ್ತಾರೆ ಇದರಿಂದ ಯಾವ ತೊಂದರೆಯು ಆಗುವುದಿಲ್ಲವೆನ್ನುತ್ತಾರೆ

* ಬುಧವಾರ ಮತ್ತು ಶುಕ್ರವಾರ ಶುಭದಿನಗಳು. ಈ ದಿನಗಳಲ್ಲಿ ಕಾರ್ಯಗಳು ಸುಲಭವಾಗಿ ನೆರವೇರುತ್ತವೆ. ಸಮುದಾಯದ ಎಲ್ಲಾ ಶುಭಕಾರ್ಯಗಳು ಈ ದಿನಗಳಂದೇ ನಡೆಯುವುದರಿಂದ ಬುಧವಾರ ಮತ್ತು ಶುಕ್ರವಾರ ದಿನಗಳು ಶುಭವೆಂದು ರೂಢಿಯಲ್ಲಿದೆ. ಶನಿವಾರ, ಸೋಮವಾರ ಕುಲದೈವದ ಪೂಜಾ ದಿನಗಳೆಂದು ಹೇಳುತ್ತಾರೆ.

* ಊಟ ಮಾಡುವಾಗ ಬೇರೆಯವರ ದೃಷ್ಟಿ ಬಿದ್ದರೆ ಮುಂದೆ ಊಟ ಸೇರುವುದಿಲ್ಲ. ಕೆಲವರ ಕಣ್ಣಲ್ಲಿ ಕೆಟ್ಟ ದೃಷ್ಟಿಯಿರುತ್ತದೆ. ಅಂಥವರ ಎದುರಿಗೆ ಊಟ ಮಾಡಿದರೆ ದೃಷ್ಟಿಯಾಗುತ್ತದೆ. ನಮಗೆ ಊಟ ಸೇರುವುದಿಲ್ಲ ಎಂದು ನಂಬಿದ್ದಾರೆ.

ಹೀಗೆ ಒಡಿಗ ಬುಡಕಟ್ಟು ಸಮುದಾಯವು ತಮ್ಮ ಜೀವನಶೈಲಿಯಲ್ಲಿ ಹಲವು ರೀತಿಯ ನಂಬಿಕೆಗಳು. ಈ ನಂಬಿಕೆಗಳಿಗೆ ತಕ್ಕಂತೆ ಕೆಲವು ನಿಷೇಧಗಳು ರೂಢಿಸಿಕೊಂಡಿದೆ. ಕೆಲವು ಮೂಢ ನಂಬಿಕೆಗಳೆಂಬಂತೆ ಇವರ ಮಾನಸಿಕ ಧೋರಣೆಯಿಂದ ಕೆಲವನ್ನು ರೂಢಿಸಿಕೊಂಡಿರುತ್ತಾರೆ. ಆ ಮೂಲಕ ಸಾಮಾಜಿಕ ಜೀವನವನ್ನು ಒಂದು ಚೌಕಟ್ಟಿನಲ್ಲಿ ನಡೆಸಲು ಅನುಕೂಲವಾಗಿದೆ.

**ಆಧಾರ ಗ್ರಂಥಗಳು**


೧ ಮಲ್ಲೇಪುರಂ ಜಿ. ವೆಂಕಟೇಶ : ಶಂಭಾ ಕೃ ೩ ಸಂಪುಟ-೬ ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು : ೧೯೯೯.

೨ ಶಂಕರ ನಾರಾಯಣ ತೀ.ನಂ. : ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು : ಮೈಸೂರು ವಿಶ್ವವಿದ್ಯಾಲಯ, ಮೈಸೂರು : ೧೯೮೬.

೩ ಅದೇ

೪ ಕುಮಾರ್ ಆರ್.ಬಿ. : ಮುದ್ದೆ ಕುಂಬಾರರು ಒಂದು ಜಾನಪದೀಯ ಅಧ್ಯಯನ : ಕನ್ನಡ ವಿಶ್ವವಿದ್ಯಾಲಯ. ಹಂಪಿ : ೨೦೦೦ (ಅಪ್ರಕಟಿತ ಪಿ.ಎಚ್.ಡಿ. ಪ್ರೌಢಪ್ರಬಂಧ).

೫ ಶಂಕರನಾರಾಯಣ ತೀ.ನಂ. : ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು : ಮೈಸೂರು ವಿಶ್ವವಿದ್ಯಾಲಯ, ಮೈಸೂರು : ೧೯೮೬.

೬ ಚಂದ್ರಕಾಳೇನಹಳ್ಳಿ : ಸೋಲಿಗರ ಸಂಸ್ಕೃತಿ : ಉಪಸಂಸ್ಕೃತಿ ಅಧ್ಯಯನ : ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು : ೧೯೯೩.

೭ ಥಾಮಸ್ ಪುಲ್ಲರ್ : ಜಾನಪದ ಸ್ವರೂಪ ಮತ್ತು ಸಾಹಿತ್ಯ : ಕರ್ನಾಟಕ ಸಾಹಿತ್ಯ ಪರಿಷತ್ತು, ಬೆಂಗಳೂರು : ೧೯೯೭.

೮ ಚಿದಾನಂದ ಮೂರ್ತಿ. ಎಂ. : ಪೂರ್ಣ ಸೂರ್ಯಗ್ರಹಣ ಒಂದು ಸಮಾಜೋ ಸಾಂಸ್ಕೃತಿಕ ಸಮೀಕ್ಷೆ : ಬೆಂಗಳೂರು : ೧೯೮೨.

೯ ಲಕ್ಕಪ್ಪಗೌಡ ಎಚ್.ಜೆ. : ಪ್ರ.ಸಂ. ಜಾನಪದ ಕೈಪಿಡಿ : ಕನ್ನಡ ಪುಸ್ತಕ ಪ್ರಾಧಿಕಾರ : ಬೆಂಗಳೂರು : ೧೯೯೭.

## ಅಧ್ಯಾಯ - ೫

# ಧಾರ್ಮಿಕ ಜೀವನ ಮತ್ತು ಆಚರಣೆಗಳು

### ಪ್ರವೇಶ

## ಪ್ರವೇಶ

ಆದಿಮಾನವರು ಜೀವನವನ್ನು ಆರಂಭಿಸಿದಾಗಿನಿಂದಲೂ ಪ್ರಕೃತಿಗೆ ತನ್ನದೇ ಆದಂತಹ ಮಹತ್ವವಿದೆ. ಆರಂಭದಿಂದಲೂ ಪ್ರಕೃತಿಯಲ್ಲಿ ಜೀವಿಸುವ ಮಾನವರಿಗೆ ಆಹಾರ, ನೆಲೆ, ವಸತಿ, ರಕ್ಷಣೆ ಒದಗಿಸುವ ಮುಖ್ಯವಾದಂತಹ ಮಾಧ್ಯಮವಾಯಿತು. ಪ್ರಕೃತಿಯನ್ನು ಅವಲಂಬಿಸಿ ಅಲ್ಲಿನ ಹಲವಾರು ಬದಲಾವಣೆಗಳಿಗೆ ಒಗ್ಗಿಕೊಂಡ ಸಮುದಾಯವು ನಿಸರ್ಗವನ್ನೇ ದೇವರೆಂದು ಸ್ವೀಕರಿಸಿತು. ದೇವರುಗಳ ಮೂರ್ತಿಯ ಕಲ್ಪನೆಯು ಇಲ್ಲದಿದ್ದ ಸಮಯದಲ್ಲಿ ಪ್ರಕೃತಿಯಲ್ಲಿ ಕಂಡ ಗಿಡ, ಮರ, ಕಲ್ಲು, ಮಣ್ಣುಗಳೇ ದೈವವಾಗಿ ಪರಿಣಮಿಸಿದವು. ತನ್ನೊಂದಿಗಿದ್ದು, ತನ್ನ ಜೀವನದ ಅತ್ಯಂತ ಮುಖ್ಯ ಅಂಶಗಳಾಗಿ ಉಳಿದುಕೊಂಡ ಗಾಳಿಯನ್ನು ನೀಡುವ ಮರಗಳು, ನೆಲೆಗೆ ರಕ್ಷಣೆ ನೀಡುವ ಕಲ್ಲು, ಜೀವ ದ್ರವ್ಯವಾದ ನೀರು ಹೀಗೆ ಹಲವಾರು ವಸ್ತುಗಳು ದೈವದ ಸ್ಥಾನವನ್ನು ಪಡೆದುಕೊಂಡವು. ಮುಖ್ಯವಾಗಿ ದೈವದ ಪರಿಕಲ್ಪನೆಯು ಬಂದದ್ದೇ ಎರಡು ನೆಲೆಯಲ್ಲಿ ಎಂದು ಗುರುತಿಸಬಹುದು.

೧ ಕಾಡಿನಲ್ಲಿ ವಾಸಿಸುವ ಸಮುದಾಯಗಳು ಕಾಡಿನಲ್ಲಿ ನಡೆಯುವ ಆಕಸ್ಮಿಕ ಬೆಂಕಿಯ ಉತ್ಪಾದನೆ, ಪ್ರಾಕೃತಿಕ ವಿಕೋಪದಿಂದ ಉಂಟಾಗುತ್ತಿದ್ದ ಗಾಳಿಯ ರಭಸತೆ, ಮಳೆಯಿಂದುಂಟಾಗುತ್ತಿದ್ದ ಗುಡುಗು-ಸಿಡಿಲು ಮುಂತಾದ ಸಹಜ ವಿಸ್ಮಯಗಳಿಗೆ ಭೀತರಾಗಿ ಅವುಗಳನ್ನು ಪೂಜ್ಯಭಾವನೆಯಿಂದ ಕಂಡುಕೊಳ್ಳಲು ಆರಂಭಿಸಿದರು. ಜೊತೆಗೆ ದೆವ್ವ, ಭೂತಗಳ ಕಲ್ಪನೆಯಿಂದ ಭೂತಾರಾಧನೆ ಮುಂತಾದ ಆಚರಣೆಗಳು ರೂಢಿಗೆ ಬಂದವು.

೨ ತಮಗೆ ಪ್ರಕೃತಿಯು ನೀಡುವ ಆಹಾರ, ಗಾಳಿ, ನೀರು ಮುಂತಾದುವುಗಳ ಸ್ಮರಣೆಗೆ ಭಕ್ತಿಯ ನೆಲೆಯಲ್ಲಿ ಉಂಟಾದ ಪೂಜ್ಯ ಭಾವನೆ.

ಹೀಗೆ ಭಯ ಮತ್ತು ಭಕ್ತಿಯ ನೆಲೆಯಲ್ಲಿ ಆರಂಭಗೊಂಡ ಪ್ರಕೃತಿ ಆರಾಧನೆಯು ನಾಗರಿಕ ಸಮಾಜದಲ್ಲಿ ವಿವಿಧ ರೀತಿಯಲ್ಲಿ ಮೂರ್ತರೂಪ ಪಡೆದುಕೊಂಡವು. ಬುಡಕಟ್ಟು ಸಮುದಾಯಗಳು ಇಂದಿಗೂ ಅರಣ್ಯಗಳಲ್ಲಿ ವಾಸಿಸುತ್ತಿರುವುದರಿಂದ ಅರಣ್ಯ ಮತ್ತು ಸಮುದಾಯಗಳ ನಡುವೆ ಅತ್ಯಂತ ನಿಕಟ ಸಂಬಂಧವಿರುವುದು ತಿಳಿಯುತ್ತದೆ. ನಾಗರಿಕ ಸಮಾಜದ ಸೋಂಕು ತಗುಲಿದ ಕೆಲವು ಬುಡಕಟ್ಟು ಸಮುದಾಯಗಳಲ್ಲಿಯೂ ಮೂಲದಲ್ಲಿದ್ದ ಪ್ರಕೃತಿಯ ಆರಾಧನೆಯು ಹಾಗೆಯೇ ಉಳಿದಿರುವುದು ಕಂಡುಬರುತ್ತದೆ.

### ೫ : ೧ ಪ್ರಕೃತಿ ಆರಾಧನೆ

ಪ್ರಸ್ತುತ ಒಡಿಗ ಬುಡಕಟ್ಟು ಸಮುದಾಯವೂ ಕೂಡ ಆರಂಭದಲ್ಲಿ ಚಿತ್ರದುರ್ಗ ಪರಿಸರದ ನಾಡಿನಿಂದ ಬಂದವರಾದ್ದರಿಂದ ಇವರ ಪೂಜಾ ಮಾಧ್ಯಮ ಮೂರ್ತಿ ಪೂಜೆಯೆಂದು ಗುರುತಿಸಬಹುದಾದರೂ, ಇದರೊಂದಿಗೆ ಪ್ರಕೃತಿಯ ಆರಾಧನೆಯಿರುವುದನ್ನು ಕಡೆಗಣಿಸುವಂತಿಲ್ಲ. ಚಿತ್ರದುರ್ಗ ಪರಿಸರದಿಂದ ಬಂದಂತಹ ಒಡಿಗ ಸಮುದಾಯವು ಅರಣ್ಯವಾಸಿಯಾದರು. ಅರಣ್ಯದೊಂದಿಗೆ ಗಾಢವಾದ ಸಂಬಂಧವನ್ನು ಹೊಂದಿದ್ದರು. ಆ ಕಾರಣಕ್ಕಾಗಿಯೂ ಇವರು ಪ್ರಕೃತಿಯ ಪೂಜೆಯು ವಿಶೇಷವಾಗಿದೆ. ಇಂದು ಒಡಿಗರು ಪ್ರಕೃತಿಯನ್ನು ತಮ್ಮದೆ ಆದಂತಹ ಸಾಂಕೇತಿಕ ಮೂರ್ತಿ ಮಾಧ್ಯಮದೊಂದಿಗೆ ಪೂಜಿಸುತ್ತಾರೆ.

೧ ಪ್ರಕೃತಿಯ ಮುಖ್ಯ ಧಾತುವಾದ ಗಾಳಿಯನ್ನು ದೇವತೆಯೆಂದು ಭಾವಿಸಿದ ಒಡಿಗ ಸಮುದಾಯವು ''ಕರಿಗಾಳಿತಾಯಿ'' ಎಂಬಂತಹ ದೈವವನ್ನು ಪೂಜಿಸುತ್ತದೆ.

೨ ಭೂಮಿಯನ್ನೇ ನಂಬಿ ಬದುಕುವ, ಈ ನೆಲದ ಅಪಾರ ಸಂಬಂಧ ಸ್ಮರಿಸುವ ದೃಷ್ಟಿಯಿಂದ ''ಮರಳು ಪರೆತಾಯಿ'' ಎಂಬ ಹೆಸರಿನಲ್ಲಿ ಒಂದು ದೈವವನ್ನು ಪೂಜಿಸುತ್ತಿದ್ದಾರೆ. ಅದರಂತೆ ''ಭೂದಾಡಿ''ಯನ್ನು ಆರಾಧಿಸುತ್ತಾರೆ.

೩ ಭಯ ಮತ್ತು ಭಕ್ತಿಯ ನೆಲೆಯಲ್ಲಿ ''ಮೇಲ್‌ದೈಯ್ಯ''ವನ್ನು ಪೂಜಿಸುತ್ತಾರೆ.

ಮೂಲತಃ ನಾಡಿನಿಂದ ಕಾಡಿಗೆ ಬಂದು ವಾಸಿಸುತ್ತಿರುವ ಒಡಿಗರಲ್ಲಿ ಕರಿಗಾಳಿತಾಯಿ, ಮರಳು ಪರೆತಾಯಿ, ಭೂದಾಡಿ, ಮೇಲ್‌ದೈಯ್ಯಗಳು ವಿವಿಧ ರೀತಿಯ ಕಥಾನಕಗಳೊಂದಿಗೆ ಸೃಷ್ಟಿಯಾಗಿದ್ದಾರೆ. ಅಂತಹ ಕಥನಗಳನ್ನು ದೇವರುಗಳು ಎಂಬ ಶೀರ್ಷಿಕೆಯಡಿ ವಿವರಿಸಲಾಗಿದೆ. ಆದರೆ ಪ್ರಕೃತಿ ನಿಷ್ಠ ನೆಲೆಯಲ್ಲಿ ಆಲೋಚಿಸಿದರೆ ಬಹುಶಃ ಇವು ನಿಸರ್ಗದತ್ತ ದೈವಗಳೆಂದು ಗುರುತಿಸಲು ಸಾಧ್ಯವಿದೆ. ಆ ಮೂಲಕ ಒಡಿಗ ಸಮುದಾಯವು ತಾವು ವಾಸಿಸುವ ಪ್ರಕೃತಿಗೆ ಧನ್ಯತಾಭಾವವನ್ನು ಸೂಚಿಸುತ್ತಾರೆಂಬುದು ಮುಖ್ಯವಾಗುತ್ತದೆ.

### ೫ : ೧ : ೧ ಧಾರ್ಮಿಕ ಕೇಂದ್ರಗಳು

ಒಡಿಗ ಬುಡಕಟ್ಟು ಸಮುದಾಯವು ಪ್ರಕೃತಿಯ ಮಡಿಲಿನಲ್ಲಿ ನೆಲೆಗೊಂಡಿರುವುದರಿಂದ ನಿಸರ್ಗದಲ್ಲಿನ ಕಲ್ಲು, ಮಣ್ಣು, ಮರ-ಗಿಡಗಳು-ಪ್ರಾಣಿಗಳಲ್ಲಿ ದೈವೀ ಭಾವನೆಯನ್ನು ಕಾಣುತ್ತಾರೆ. ಹಾಗೆಯೇ ತಾವು ವಾಸಿಸುವ ಪ್ರಾದೇಶಿಕ ಪ್ರದೇಶದಲ್ಲಿನ ದೈವಗಳನ್ನು ಪೂಜಿಸುವರು. ಸಮುದಾಯದಲ್ಲಿನ ತಮ್ಮ ಕುಲದೈವಗಳು ನೆಲೆಗೊಂಡಿರುವ ಸ್ಥಳವನ್ನು ಧಾರ್ಮಿಕ ಕೇಂದ್ರಗಳೆಂದು ಪರಿಗಣಿಸಿ ಪೂಜೆ ಸಲ್ಲಿಸಿಕೊಂಡು ಬರುತ್ತಾರೆ.

| ಧಾರ್ಮಿಕ ಕೇಂದ್ರಗಳು | ದೇವರುಗಳು |
|---|---|
| ತಿರುಪತಿ | ವೆಂಕಟೇಶ್ವರ |
| ಕಾಳಹಸ್ತಿ | ಬೇಡರಕಣ್ಣಪ್ಪ |
| ಆದಂಡ | ಮಸನಿ - ಚಾಮುಂಡಿ |
| ಧರ್ಮಸ್ಥಳ | ಮಂಜುನಾಥ ಸ್ವಾಮಿ |
| ಮೇಲುಕೋಟೆ | ಚೆಲುವನಾರಾಯಣ |
| ಕೋಟೆರು | ಕರಿಗಾಳಿತಾಯಮ್ಮ |
| ತಿರುನಲ್ಲಿ | ದೇವೇಶಿ ನಾರಾಯಣ |
| ಪುಲುಪಳ್ಳಿ | ಸೀತಾರಾಮಸ್ವಾಮಿ |

ಇವು ಸಮುದಾಯದ ಧಾರ್ಮಿಕ ಕೇಂದ್ರಗಳು. ಇವರು ವರ್ಷಕ್ಕೊಂದು ಸಲ ಅನುಕೂಲವಾದ ಸಂದರ್ಭಗಳಲ್ಲಿ ಧಾರ್ಮಿಕ ಕೇಂದ್ರಗಳಿಗೆ ತೆರಳಿ ಪೂಜೆ ಸಲ್ಲಿಸಿಕೊಂಡು ಬರುತ್ತಾರೆ.

### ೫ : ೨ ದೇವರುಗಳು

ಬುಡಕಟ್ಟುಗಳು ಧಾರ್ಮಿಕ ಪರಂಪರೆ, ಸಂಸ್ಕೃತಿಗಳಿಗೆ ಪ್ರಭಾವಿತ ಹಾಗೂ ಪ್ರೇರಿತರಾಗಿ ತಾವು ನೆಲೆಗೊಂಡಿರುವ ಆಯಾ ಪ್ರಾದೇಶಿಕ ಧರ್ಮ ಹಾಗೂ ದೇವರು-ದೇವತೆಗಳನ್ನು ತಮ್ಮದನ್ನಾಗಿ ಮಾಡಿಕೊಂಡು ಪೂಜಿಸುತ್ತಾರೆ. ಅಲ್ಲದೆ ಪ್ರಾದೇಶಿಕ ಆಚಾರ-ವಿಚಾರಗಳನ್ನು ಪಾಲಿಸಿಕೊಂಡು ಬಂದಿರುತ್ತವೆ. ಪರಂಪರೆಯಿಂದ ಬಂದ ಧಾರ್ಮಿಕ ಆಚರಣೆಯೇ ಅವರ ಬಾಳಿಗೆ ಆಧಾರ. ಜೀವನದಲ್ಲಿನ ಕಷ್ಟ-ನಷ್ಟಗಳಿಗೆ, ಸುಖ-ದುಃಖಗಳಿಗೆ ಒಳಿತು-ಕೆಡಕುಗಳಿಗೂ ಮೂಲಭೂತವಾದ ಅಗೋಚರ ಶಕ್ತಿಯೊಂದಿದೆ ಎಂದು ನಂಬಿ ತಮ್ಮ ಸುತ್ತಲಿನ ಪ್ರಕೃತಿಯಲ್ಲಿಯೇ ದೇವರನ್ನು ಸೃಷ್ಟಿಸಿಕೊಂಡಿದ್ದಾರೆ.

ಒಡಿಗ ಬುಡಕಟ್ಟು ಸಮುದಾಯವು ಇದರಿಂದ ಹೊರತಾಗಿಲ್ಲ. ತಮ್ಮ ಸುತ್ತಲಿನ ಪ್ರಕೃತಿಯಲ್ಲಿಯೇ ದೈವವನ್ನು ಕಂಡುಕೊಂಡಿದ್ದಾರೆ. ಸಮುದಾಯದಲ್ಲಿ ವೈಷ್ಣವ ಹಾಗೂ ಶೈವ ಸಂಪ್ರದಾಯದ ದೈವರಾಧಕರೆಂಬುದು ತಿಳಿಯುತ್ತದೆ.

**ದೇವರುಗಳು**

| | |
|---|---|
| ಕರಿಗಾಳಿ ತಾಯಮ್ಮ | ಚಟ್ನಳ್ಳಿ ಚಾಮುಂಡಿ |
| ಗೋನಹಳ್ಳಿ ಮಸನಿ | ಮರಳು ಪರೆತಾಯಿ |
| ಮೀರಕೆ ಮಾರಮ್ಮ | ವೆಂಕಟೇಶ್ವರ |
| ಮಲ್ಲೇಶ ಸ್ವಾಮಿ | ಭೈರವೇಶ್ವರ |
| ಬಸವೇಶ್ವರ | ಮಂಜುನಾಥಸ್ವಾಮಿ |
| ಚೆಲುವ ನಾರಾಯಣ | ಬೇಡರಕಣ್ಣಪ್ಪ |
| ಮೇಲ್‌ದೈಯ್ಯ | ಬೊಮ್ಮಣ್ಣ |
| ಕಾಳಿಕಟ್ಟೆ ತಾಯಿ | ಹೊಸಹಳ್ಳಿ ಚಾಮುಂಡಿ |
| ದೇಶಿ ಮಾರಮ್ಮ | ಚಿಕ್ಕ ತಾಯಮ್ಮ |
| ದಾಸ್ತಮ್ಮ | ಮಾರಿ |
| ಹಿರಪಟ್ಲು ಭೂದಾಡಿ | |

ಇವು ಸಮುದಾಯದಲ್ಲಿನ ದೇವತೆಗಳು. ಕೆಲವು ದೈವಗಳಿಗೆ ಸಾಮಾನ್ಯ ಪೂಜಾ ವಿಧಿ-ವಿಧಾನಗಳಿಂದ ಪೂಜಿಸುತ್ತಾರೆ ಹಾಗೂ ಪ್ರಾದೇಶಿಕ ದೈವಗಳಾದ ದೇವೇಶಿ ನಾರಾಯಣ, ದೇವೀರಮ್ಮ, ಬಳ್ಳೆಯ ಮಸ್ತಮ್ಮ, ಸೀತಾರಾಮ ದೈವಗಳನ್ನು ಪೂಜಿಸುತ್ತಾರೆ.

**ಪೂಜಾವಾರದ ದಿನಗಳು**

ಸೋಮವಾರದಂದು ಬಸವೇಶ್ವರ, ಭೈರವೇಶ್ವರ, ಮಂಜುನಾಥ ಸ್ವಾಮಿಯನ್ನು ಪೂಜಿಸುತ್ತಾರೆ. ಸೋಮವಾರ ಶೈವಪಂಥದವರು ಶ್ರೇಷ್ಠವೆಂದು ಭಾವಿಸಿದ್ದಾರೆ. ಮಂಗಳವಾರ ಹಾಗೂ ಶುಕ್ರವಾರದಂದು ಶಕ್ತಿ ದೇವತೆಗಳಾದ ಕರಿಗಾಳಿ ತಾಯಮ್ಮ, ಮಾರಿ, ಚಾಮುಂಡಿ, ಮಸನಿ, ದಾಸ್ತಮ್ಮ ದೈವಗಳನ್ನೇ ಆರಾಧಿಸುತ್ತಾರೆ. ಶನಿವಾರ, ವೆಂಕಟೇಶ್ವರ, ಚೆಲುವನಾರಾಯಣ, ಬೊಮ್ಮಣ್ಣ, ಮೇಲ್‌ದೈಯ್ಯ ದೈವಗಳನ್ನು ಆರಾಧಿಸುತ್ತಾ ಶನಿವಾರದಂದು ವೈಷ್ಣವ ಪಂಥದವರು ಶ್ರೇಷ್ಠವೆಂದು ಭಾವಿಸಿದ್ದಾರೆ.

**೫ : ೨ : ೧ ಕರಿಗಾಳಿ ತಾಯಿ**

ಒಡಿಗ ಬುಡಕಟ್ಟು ಸಮುದಾಯದ ಮುಖ್ಯ ಶಕ್ತಿ ದೈವ ಹಾಗೂ ಮಾಸಾಲು ಕುಟುಂಬದ ಕುಲದೈವ. ಈ ದೇವತೆಯು ಸಾಣಾಗಾಲದ ಕೋಟೆರು ಊರಿನಲ್ಲಿ ನೆಲೆಗೊಂಡಿದೆ. ಮಾಸಾಲು ಮನೆತನದ ಪೂಜಾರಿ ಗುಂಪಿನವರು ದೇವಿಯ ಪೂಜೆಯನ್ನು ನಡೆಸುತ್ತಿದ್ದಾರೆ. ಇದು ಇವರ ಸತ್ಯವಾದ ದೈವ.

ಮಾಸಾಲು ಮನೆತನದ ಹೆಣ್ಣುಮಗುವನ್ನು ಹೆಗ್ಗನೂರು ಮನೆಗೆ ವಿವಾಹ ಮಾಡಿಕೊಟ್ಟಿತ್ತು. ವಿವಾಹವಾದ ಒಂದು ವರ್ಷದ ನಂತರ ಅವಳ ಗಂಡನು ಆಕಸ್ಮಿಕ ಮರಣಕ್ಕೆ ತುತ್ತಾದನು. ಗಂಡನ ಮನೆಯವರು ಇವಳನ್ನು ಹೊರ ಹಾಕಿದರು. ಮಾಸಾಲು ಮನೆತನದ ವಯೋವೃದ್ಧರೊಬ್ಬರು ಈಕೆಯನ್ನು ಕರೆದುಕೊಂಡು ಹೋಗಿ ಸಾಕಿದರು. ಕಾಲ ಕಳೆದಂತೆ ಆಕೆಗೆ ಒಂದು ಗಂಡು ಮಗುವಾಯಿತು. ದಿನ ಕಳೆದಂತೆ ತಾಯಿ ಹಾಗೂ ಮಗುವನ್ನು ಕರಿಗಾಳಿ ದೇವಾಲಯದ ಹತ್ತಿರ ಒಂದು ಗುಡಿಸಲನ್ನು ಹಾಕಿಕೊಟ್ಟು, ಮಗುವನ್ನು ದೇವಿಯ ಪೂಜೆಯನ್ನು ಮಾಡಿಕೊಂಡು ಹೋಗುವಂತೆ ಹೇಳಿ ಆತನಿಗೆ ಪೂಜಾರಿ ಎಂದು ಹೆಸರಿಟ್ಟರು. ಪೂಜಾರಿಯು ದಿನವು ದೇವಿಗೆ ಪೂಜೆ ಮಾಡುತ್ತಿದ್ದನು. ಸಮುದಾಯದ ಹಿರಿಯರೆಲ್ಲರೂ ಸೇರಿ ದೇವಿಯ ಜಾತ್ರೆಯನ್ನು ಮಾಡಲು ನಿರ್ಧರಿಸಿದರು. ದಿನವು ಗೊತ್ತುಪಡಿಸಲಾಗಿತ್ತು. ಇದೇ ಸಮಯದಲ್ಲಿ ದೇವಾಲಯದ ಪೂಜಾರಿಯು ಸೇತುವೆ ಮೇಲೆ ಹಾಕಿದ್ದ ಹಲಗೆಗಳನ್ನು ಕದ್ದು ಬಿಟ್ಟಿದ್ದನು. ಇದು ಪೋಲಿಸರಿಗೆ ತಿಳಿದು ಅವನನ್ನು ಬಂಧನದಲ್ಲಿಟ್ಟರು. ಜನರೆಲ್ಲರೂ ಬಂದು ಜಾತ್ರೆ ಸೇರಿದ್ದಾರೆ. ಆದರೆ ಆಡೋ ಮಗ (ಪೂಜಾರಿಯೇ) ಇಲ್ಲ. ಎಲ್ಲರೂ ಚಡಪಡಿಸುತ್ತಿರುವಾಗ ಸಮುದಾಯದ ಮತ್ತೊಂದು ದೇವರು ಮೇಲ್‌ದೈಯ್ಯ. ಒಬ್ಬ ಹಿರಿಯರ ಮೇಲೆ ಆವೇಶ ಬಂದು ನೀವು ಪೂಜೆಗೆ ಸಿದ್ಧಗೊಳಿಸಿಕೊಳ್ಳಿ, ಪೂಜಾರಿಯು ಬರುತ್ತಾನೆ. ಹೆದರಬೇಡಿ ಎಂದು ಮಾತು ಕೊಟ್ಟಿತ್ತು. ದೇವರು ಅಕ್ಕಿಯಿಟ್ಟು ಆ ಪೂಜಾರಿಯನ್ನು ಕರೆಯಿತು. ಪೂಜಾರಿಯನ್ನು ಬೇಡಿಯ ಸಮೇತವಾಗಿ ಕರೆತಂದಿತ್ತು. ಪೂಜೆಯು ಪ್ರಾರಂಭವಾಯಿತು. ಒಂದು ಕೈಯಲ್ಲಿ ಬೇಡಿ ಮತ್ತೊಂದು ಕೈಯಲ್ಲಿ ಬಾಡು ಹಿಡಿದುಕೊಂಡು ತೋಳಾ ಆಡುವುದಕ್ಕೆ ಪ್ರಾರಂಭಿಸಿತು. ಹೊರಗೆ ಪೋಲೀಸರು ಬಂದು ದೇವಾಲಯದ ಸುತ್ತ ಕಾವಲು ನಿಂತಿದ್ದರು. ತೋಳಾ ಆಡಿದ ನಂತರ ಹೊಳೆಗೆ ಸ್ನಾನಕ್ಕೆ ಹೋದಾಗ ಪೂಜಾರಿಯು ಮೇಲೆ ಬರಲೇ ಇಲ್ಲ. ಎಲ್ಲರೂ ಭಯಭೀತರಾದರು. ಸಂಜೆ ವೇಳೆಗೆ ಸಮುದಾಯದ ಒಬ್ಬ ಪೆದ್ದನ ಮೇಲೆ ತೋಳ ಮೈ ಏರಿತು. ನೀವು ಏನು

ಭಯಬೀಳಬೇಡಿ ಯಾರು ಜೈಲ್ ಮನೆಗೆ ಹೋಗಬೇಕಾಗಿಲ್ಲ. ಪೂಜಾರಿಯು ಇಲ್ಲೆ ಇದ್ದಾನೆ ಎಂದು ಅಕ್ಕಿಯಿಟ್ಟು ಪೂಜಾರಿಯನ್ನು ಹೊರಗೆ ಕರೆಯಿತು. ಪೂಜಾರಿಯು ನೀರಿನಿಂದ ಮೇಲೆ ಬಂದನು. ಅವನಿಗೆ ಅಲ್ಲಿಯೇ ವಿಗ್ರಹದ ಹತ್ತಿರ ವಿಶ್ರಾಂತಿ ನೀಡಿ ಮತ್ತೆ ದೇವಾಲಯಕ್ಕೆ ಕರೆ ತಂದರು. ದೇವರ ಪೂಜೆಯನ್ನು ಮಾಡುತ್ತಿದ್ದಾಗ ತೋಳಾ ಬಂದು ಬಟ್ಟತೊಪ್ಪಿಗಾರ ನೀನು ನನ್ನ ಮಗಾನ ಹಿಡಿದುಕೊಂಡು ಹೋಗಿ ಜೈಲ್ ಮನೇಲಿ ಇಟ್ಟರೆ ನಿನ್ನ ಸರ್ಕಾರವನ್ನು ''ಮಂಕು ಮರಳು'' ಮಾಡುತ್ತೇನೆ ಎಂದು ಹೇಳಿತು. ಪೂಜೆಯ ನಂತರ ಪೂಜಾರಿಯನ್ನು ಮತ್ತೆ ಪೋಲಿಸರು ಹಿಡಿದುಕೊಂಡು ಹೋದರು. ಒಂದು ವಾರದೊಳಗೆ ಇಡೀ ಸರ್ಕಾರವೇ ಮಂಕು ಮರುಳಾಯಿತು. ಎಲ್ಲಿ ಹೋದರು ಮಂಕು ಮರಳು ಕವಿದಂತೆ ಆಯಿತು. ಎಲ್ಲಾ ಕಡೆ ಶಾಸ್ತ್ರ ಕೇಳಿದಾಗ ಕರಿಗಾಳಿ ತಾಯಿಯದೇ ಇದು ಎಂದು ಬಂತು. ಕೊನೆಗೆ ಬಟ್ಟತೊಪ್ಪಿಗಾರರು ದೇವಿಗೆ ಹರಕೆ ಕಟ್ಟಿಕೊಂಡರು. ಒಂದು ವಾರದಲ್ಲಿ ಮಂಕು ಮರಳು ನಿವಾರಣೆಯಾದರೆ ನಿನಗೆ ಮುಖವಾಡ, ಚಿನ್ನದ ತಾಳಿಯನ್ನು ಮಾಡಿಸಿಕೊಡುತ್ತೇವೆ ಎಂದು ಹಾಗೆಯೇ ಒಂದು ವಾರದೊಳಗೆ ಸರ್ಕಾರದ ಮಂಕು ಮರಳು ಹರಿಯಿತು. ಪೂಜಾರಿಯನ್ನು ಬಿಟ್ಟುಬಿಟ್ಟರು ಹಾಗೂ ದೇವಿಗೆ ಮುಖವಾಡ, ಚಿನ್ನದ ತಾಳಿ ಮಾಡಿಸಿಕೊಟ್ಟು ನಿಮ್ಮ ದೇವತೆಯು ಸತ್ಯವಾದ ದೇವತೆ ತಪ್ಪಾಯಿತು ಎಂದು ಪೂಜೆ ಮಾಡಿಸಿಕೊಂಡು ಹೋದರು.

ಸಮುದಾಯದಲ್ಲಿ ಇಂದಿಗೂ ಬೇಡಿಯಿದ್ದು ಹಾಗೂ ಪೋಲಿಸರು ನೀಡಿರುವ ದೇವಿಯ ಮುಖವಾಡ, ಚಿನ್ನದ ತಾಳಿ ಇದೆ. ಆದರೆ ಜಾತ್ರೆ ಆಗಲಿ, ಹಬ್ಬವಾಗಲಿ ಇತರೆ ಆಚರಣೆಯು ನಡೆಯುತ್ತಿಲ್ಲ.

**೫ : ೨ : ೨ ದಾಸ್ತಮ್ಮ**

ದಾಸ್ತಮ್ಮ ದೇವಿಯು ಎಡಕೋಡು ಮನೆತನದ ಕುಲದೈವ. ಈ ದೈವವನ್ನು ಮನೆಯಲ್ಲಿಯೇ ಪೂಜಿಸುವುದು ರೂಢಿಯಲ್ಲಿದೆ. ಯಾವುದೇ ಹಬ್ಬ-ಹರಿದಿನಗಳೇನು ಈ ದೈವಕ್ಕೆ ವಿಶೇಷವಿಲ್ಲ. ದಾಸ್ತಮ್ಮನಿಗೆ ದಿನವು ಧೂಪ-ದೀಪಗಳಿಂದ ಮಾತ್ರ ಪೂಜೆ ನೆರವೇರುತ್ತದೆ. ಹಣ್ಣು-ಕಾಯಿಯು ದೇವಿಯ ಪೂಜೆಗೆ ನಿಷೇಧ. ದಾಸ್ತಮ್ಮನ ದರ್ಶನವು ಎಡಕೋಡು ಮನೆತನದವರಿಗೆ ಮಾತ್ರ. ಇತರೆ ಮನೆತನಗಳಿಗೆ ದೈವದ ದರ್ಶನವಿರುವುದಿಲ್ಲ. ಈ ಮನೆಗೆ ಬರುವ ಸೊಸೆಯರಿಗೆ ನಿಬಂಧನೆಯಿರುವುದಿಲ್ಲ. ಮನೆಯ ಹೆಣ್ಣುಮಕ್ಕಳಿಗೆ ವಿವಾಹದವರೆಗೆ ಯಾವುದೇ ನಿರ್ಬಂಧನೆ ಗಳಿರುವುದಿಲ್ಲ. ವಿವಾಹದ ನಂತರ ಅವರಿಗೂ ದೈವದ ದರ್ಶನವಿರುವುದಿಲ್ಲ.

ದಾಸ್ತಮ್ಮ ದೇವಿಯು ಮೂಲತಃ ಬೇಗೂರಿನ ದೇವರಗುಡ್ಡದ ಮನೆತನದವರಿಗೆ ಸೇರಿದ ದೈವವಾಗಿತ್ತು. ಈ ದೈವದ ಪೂಜೆಯಿಂದ ಆ ಮನೆತನದಲ್ಲಿ ಐಶ್ವರ್ಯ ತುಂಬಿತ್ತು. ದೇವರಗುಡ್ಡದ ಮನೆಯಿಂದ ಎಡಕೋಡಿನ ಮನೆಗೆ ಹೆಣ್ಣು ಕೊಟ್ಟು ವಿವಾಹ ಮಾಡಿದ್ದರು. ಇವರದೊಂದು ಸಾಧಾರಣ ಕುಟುಂಬವಾಗಿತ್ತು.

ತವರು ಮನೆಯ ಐಶ್ವರ್ಯ ಕಂಡು ತನ್ನ ತವರು ಮನೆಯ ದೇವಿಯನ್ನು ತಂದು ನನ್ನ ಗಂಡನ ಮನೆಯಲ್ಲಿ ಪೂಜಿಸುವುದರಿಂದ ತನ್ನ ಮನೆಯಲ್ಲಿಯು ಐಶ್ವರ್ಯ ತುಂಬುತ್ತದೆ ಎಂದು ತವರು ಮನೆಯಿಂದ ದಾಸ್ತಮ್ಮ ದೇವಿಯನ್ನು ಕದ್ದು ತಂದು ತನ್ನ ಗಂಡನ ಮನೆಯಲ್ಲಿ ಪೂಜಿಸಿದಳು. ಇದರಿಂದ ಮನೆಗೆ ಐಶ್ವರ್ಯ ಬರದೇ ತಮ್ಮ ಮನೆತನದ

ಅಣ್ಣ-ತಮ್ಮಂದಿರುಗಳಿಗೆ ಜಗಳವಾಗಿ ಬೇರೆಯಾಗಿದ್ದಾರೆ. ಅಣ್ಣನ ಮನೆಯ ಸೊಸೆ ತವರುಮನೆಯಿಂದ ಕದ್ದು ತಂದ ದೇವರನ್ನು ಪೂಜಿಸಲು ಇಷ್ಟಪಡದೆ ತಮ್ಮ ಮನೆತನವನ್ನು ತೊರೆದು ಹೆಗ್ಗನೂರು ಮನೆತನಕ್ಕೆ ಸೇರಿದ್ದಾರೆ. ಹೆಗ್ಗನೂರಿನ 'ಬೇಟೆಗಾರ' ಮನೆತನವೇ ಹಿಂದೆ ಎಡಕೋಡು ಮನೆತನದಲ್ಲಿದ್ದ ಗುಂಪು. ಇಂದು ಬೇಟೆಗಾರರು ವೆಂಕಟೇಶ್ವರನನ್ನು ಕುಲದೈವವನ್ನಾಗಿ ಸ್ವೀಕರಿಸಿದ್ದಾರೆ.

### ೫ : ೨ : ೩ ಚಿಕ್ಕ ತಾಯಮ್ಮ

ಈ ದೇವಿಯ ಆಚರಣೆ ತುಂಬ ಕಟ್ಟು-ನಿಟ್ಟಿನಿಂದ ನಡೆಸಬೇಕು. ಚಿಕ್ಕ ತಾಯಮ್ಮ ಒಡಿಗ ಸಮುದಾಯದ ನೆಟ್ಟಿಕಲ್ಲುಂಡಿಯ ಮನೆತನದ ಕುಲದೈವ. ಈ ದೈವದ ಪೂಜೆಗೆ, ಮೊದಲು ಹಿರಿಯರೆಲ್ಲರು ಸೇರಿ ಒಂದು ದಿನವನ್ನು ನಿರ್ಧರಿಸಿ ದೈವದ ಪೂಜೆಯನ್ನು ನಡೆಸುತ್ತಾರೆ. ಈ ದೈವದ ಗುಡ್ಡಮಾರು (ಪೂಜಾರಿ)ಗಳು ಐದು ದಿನಗಳು ಉಪವಾಸವಿದ್ದು, ದೇವರನ್ನು ಮನೆಯಿಂದ ಹೊಳೆಗೆ ತೆಗೆದುಕೊಂಡು ಹೋಗಿ ಮಜ್ಜನ (ಮಡಿ) ಮಾಡಿಸುತ್ತಾರೆ. ದೈವವನ್ನು ಹೊಳೆಗೆ ತೆಗೆದುಕೊಂಡು ಹೋಗುವಾಗ ಹೆಜ್ಜೆಗೆ ಒಂದರಂತೆ ತೆಂಗಿನಕಾಯಿಯನ್ನು ಹೊಡೆಯಬೇಕು. ಮಜ್ಜನ ಮಾಡಿಸಿ ತೆಗೆದುಕೊಂಡು ಬರುವಾಗಲೂ ಹೆಜ್ಜೆಗೆ ಒಂದು ತೆಂಗಿನಕಾಯಿಯನ್ನು ಒಡೆಯುತ್ತಾ ಮನೆಗೆ ಕರೆತರುತ್ತಾರೆ. ಮನೆಯಲ್ಲಿ ದೇವಿಗೆ ಮಡಿಬಟ್ಟೆಯನ್ನು ಹಾಕಿ, ಒಡವೆ-ವಸ್ತ್ರ, ಹೂವುಗಳಿಂದ ಅಲಂಕರಿಸಿ ಪೂಜೆ ಸಲ್ಲಿಸುತ್ತಾರೆ. ಎರಡು ದಿನಗಳ ಕಾಲ ಪೂಜೆ ಸಲ್ಲಿಸಿ ಎರಡನೆ ದಿನ ಹರಕೆ ಹೊತ್ತವರು ಪ್ರಾಣಿಬಲಿಯನ್ನು ಕೊಡುತ್ತಾರೆ. ಈ ದೈವವು ಅಕ್ಕಿಕಾಳನ್ನು ಕೊಟ್ಟು ಹೇಳುವ ಸ್ಥಳದಲ್ಲಿಯೇ ಬಲಿಕೊಡುವ ಪದ್ಧತಿ ಇದೆ. ಇಲ್ಲದಿದ್ದರೆ ತೊಂದರೆಗಳು ಬರುತ್ತವೆ ಎಂದು ನಂಬಿದ್ದಾರೆ. ಬಲಿ ಕೊಟ್ಟ ನಂತರ ದೈವಕ್ಕೆ ಎಡೆಯಿಟ್ಟು ಪೂಜಿಸುತ್ತಾರೆ. ಈ ದೈವದ ಪೂಜೆಗೆ ಗುಡ್ಡಿನ ಮನೆಯವರು ಒಬ್ಬರಾದರೂ ಬರುತ್ತಾರೆ. ಹಿರಿಗುಡ್ಡದವರು ದೈವಕ್ಕೆ ಮೊದಲ ಪೂಜಾ ಆರಾಧಕರಾಗಿರುವರು.

### ೫ : ೨ : ೪ ದೇಶಿ ಮಾರಮ್ಮ

ಒಡಿಗ ಬುಡಕಟ್ಟು ಸಮುದಾಯವು ಇಂದು ಕುಟುಂಬಗಳು ಬೆಳೆದಂತೆ ಚದುರಿ ಅಲ್ಲಲ್ಲಿ ವಾಸಿಸುತ್ತಿದ್ದಾರೆ. ಸುಮಾರು ಹದಿನೈದರಿಂದ ಇಪ್ಪತ್ತು ಊರುಗಳಲ್ಲಿ ನೆಲೆಸಿದ್ದಾರೆ. ದೇಶಿ ಮಾರಮ್ಮನ ಪೂಜೆಯನ್ನು ಒಂದೊಂದು ಊರಿನವರು ಪ್ರತ್ಯೇಕವಾಗಿ ಆಚರಿಸುತ್ತಾರೆ. ಹಿಂದೆ ಎಲ್ಲರೂ ಸೇರಿ ಒಂದು ಕಡೆ ಈ ದೈವದ ಪೂಜೆಯನ್ನು ಮಾಡುತ್ತಿದ್ದರು. ಊರಿನ ಹಿರಿಯರು ಸೇರಿ ಒಂದು ದಿನವನ್ನು ನಿರ್ಧರಿಸಿ ದೈವದ ಪೂಜೆಗೆ ಸಮುದಾಯದವರೆಲ್ಲರೂ ಅಕ್ಕಿ, ಬೇಳೆ ಹಾಗೂ ಒಂದೊಂದು ಕೋಳಿಯನ್ನು ತರಬೇಕೆಂದು ಹೇಳುತ್ತಾರೆ. ಈ ದೈವದ ಪೂಜೆಯನ್ನು ಊರ ಹೊರಗಿನ ಹೊಳೆಯ ಹತ್ತಿರ ನೆರವೇರಿಸುತ್ತಾರೆ. ದೈವದ ಪೂಜೆಗೆ ಮಹಿಳೆಯರಿಗೆ ನಿಷೇಧವಿದೆ.

ಮೊದಲು ಇಬ್ಬರು ಹಿರಿಯರು ಹೊಳೆಯ ಹತ್ತಿರ ಹೋಗಿ ಚಪ್ಪರವನ್ನು ನಿರ್ಮಿಸಿ ಮೇಲೆ ಹೊಂಗೆಸೊಪ್ಪು, ನೇರಳೆ ಸೊಪ್ಪನ್ನು ಹಾಕಿ ನಂತರ ಅನ್ನ ಮಾಡಿ ಅದರಿಂದ ದೈವದ ಗೊಂಬೆಯನ್ನು ಮಾಡಿ ಬಾಳೆ ಎಲೆಯಲ್ಲಿ ಹಸಿರು ಚಪ್ಪರದಲ್ಲಿಟ್ಟು ಪ್ರಥಮ ಪೂಜೆ ಸಲ್ಲಿಸುತ್ತಾರೆ. ಊರಿನವರೆಲ್ಲರೂ ಹಣ್ಣು-ಕಾಯಿ, ಹೂವು ಹಾಗೂ ಒಂದು

ಕೋಳಿಯನ್ನು ತೆಗೆದುಕೊಂಡು ಪೂಜೆಗೆ ಆಗಮಿಸಿ ಮೊದಲು ಹಣ್ಣು-ಕಾಯಿಗಳಿಂದ ದೇವಿಗೆ ಪೂಜೆ ಸಲ್ಲಿಸಿ ನಂತರ ಕೋಳಿಯನ್ನು ಕೊಯ್ದು ದೇಶಿಮಾರಮ್ಮನ ಮೇಲೆ ರಕ್ತವನ್ನು ಬಿಡುತ್ತಾರೆ. ಎಲ್ಲಾ ಕೋಳಿಗಳನ್ನು ಬಲಿ ಕೊಟ್ಟ ಮೇಲೆ ದೇವಿಗೆ ಮತ್ತೆ ಪೂಜೆ ಸಲ್ಲಿಸಿ ನಮ್ಮ ಮಕ್ಕಳು, ಮರಿಗೆ, ಬೆಳೆಗಳಿಗೆ ಯಾವ ತೊಂದರೆ ಕೊಡದೇ ಹೋಗು ತಾಯೇ ಎಂದು ಹೊಳೆಯಲ್ಲಿ ಬಿಡುತ್ತಾರೆ. ಎಲ್ಲರೂ ಒಂದೇ ಕಡೇ ಮಾಂಸಾಹಾರವನ್ನು ಅಣಿಗೊಳಿಸಿ ಪಂಕ್ತಿ ಭೋಜನವು ನಡೆಯುತ್ತದೆ.

**೫ : ೨ : ೫ ಮರಳು ಪರೆತಾಯಿ**

ಸಮುದಾಯದಲ್ಲಿನ ನಿಸರ್ಗದೇವತೆ ಕಪಿಲ ಹೊಳೆಯ ಪಕ್ಕದಲ್ಲಿ ನೇರಳೆಮರದ ಬುಡದ ಬಂಡೆಯಲ್ಲಿ ಈ ದೇವಿಯು ನೆಲೆಗೊಂಡಿದ್ದಾಳೆ. ಸಮುದಾಯದಲ್ಲಿ ದನಕರು ಹಾಗೂ ಬೆಳೆಗಳಿಗೆ ಕಷ್ಟ-ನಷ್ಟಗಳು ಬಂದಾಗ ಈ ದೈವವನ್ನು ಕುರಿತು ಪ್ರಾರ್ಥಿಸಿ, ಹರಕೆ ಮಾಡಿಕೊಂಡು ತಮಗೆ ಅನುಕೂಲವಾದ ಸಮಯದಲ್ಲಿ ಈ ದೇವಿಯು ನೆಲೆಗೊಂಡಿರುವಲ್ಲಿಯೇ ಪ್ರಾಣಿಬಲಿಯನ್ನು ನೀಡಿ ಪೂಜೆಸಲ್ಲಿಸುತ್ತಾರೆ.

**೫ : ೨ : ೬ ಮಲ್ಲೇಶಸ್ವಾಮಿ**

ಸಮುದಾಯದ ಮುಖ್ಯ ದೈವ, ಬೇಗೂರಿನವರ ಕುಲದೈವ. ಸಮುದಾಯದಲ್ಲಿ ಯಾರಿಗಾದರೂ ಭೂತ, ಪ್ರೇತ, ದೈವಗಳಿಂದ ತೊಂದರೆ ಬಂದರೆ ಮಲ್ಲೇಶಸ್ವಾಮಿಯ ಗದ್ದುಗೆ ಪೂಜೆಯನ್ನು ಮಾಡುತ್ತಾರೆ.

ಸಮುದಾಯದಲ್ಲಿ ಕಷ್ಟಗಳು ಬಂದಾಗ ಹಾಗೂ ಮಕ್ಕಳು, ಮರಿಗಳು ಭಯದಿಂದ ಹೆದರಿ ಮಂಕಾದಾಗ ಕಂಚಿನ ತಪ್ಪಲೆ ಅಥವಾ ಕಂಚಿನ ಗಿಂಡಿಯಲ್ಲಿ ನೀರು ತೆಗೆದುಕೊಂಡು ಮಲ್ಲೇಶಸ್ವಾಮಿಯ ಧ್ಯಾನ ಮಾಡುತ್ತಾ ನಮಗೆ ಬಂದಿರುವ ಕಷ್ಟಗಳು ದೂರಾದರೆ ಗದ್ದುಗೆ ಪೂಜೆ ಮಾಡಿಸುತ್ತೇವೆ ಎಂದು ಹರಸಿಕೊಳ್ಳುತ್ತಾರೆ. ನಾಲ್ಕೈದು ಮನೆಯವರು ಸೇರಿ ಒಂದು ದಿನವನ್ನು ನಿರ್ಧರಿಸಿ ಮಲ್ಲೇಶಸ್ವಾಮಿ ಗದ್ದುಗೆ ಪೂಜೆಗೆ ಸಿದ್ಧತೆ ಮಾಡಿಕೊಳ್ಳುತ್ತಾರೆ. ದೈವವನ್ನು ತರುವ ದಿನದಂದು ಮನೆಯನ್ನು ಗೋಮಯದಿಂದ ಸಾರಿಸಿ ಮನೆಯಲ್ಲಿನ ಹಿರಿಯರಾದಿ ಎಲ್ಲರೂ ಮಡಿಯುಟ್ಟಿರುತ್ತಾರೆ. ಹಿರಿಯರಿಬ್ಬರು ದೈವದ ಪೂಜೆಗೆ ಬಾಳೆಕಂಬಗಳಿಂದ ಗುಡಿ ನಿರ್ಮಿಸಿ ದೈವವನ್ನು ತರಲು ನಾಲ್ಕಾರು ಜನರೊಂದಿಗೆ ಹೋಗುತ್ತಾರೆ. ದೈವವನ್ನು ತರುವಾಗ ಯಾರೊಂದಿಗೂ ಮಾತನಾಡಬಾರದು. ಜೊತೆಯಲ್ಲಿರುವ ತಾಳಗಳನ್ನು ತರುವ ವ್ಯಕ್ತಿಯು ಯಾರಾದರೂ ಮಾತನಾಡಿಸಿದರೆ ಅವರಿಗೆ ಗದ್ದುಗೆ ಪೂಜೆಗೆ ನೀವು ಬನ್ನಿ ಎಂದು ಹೇಳುತ್ತಾನೆ. ದೈವವನ್ನು ತರುವವರನ್ನು ಗಮನಿಸಿ ಮನೆಯವರು ದೈವವು ಮನೆಯ ಬಾಗಿಲಿಗೆ ಬರುವಷ್ಟರಲ್ಲಿ ದೀಪ ಹಚ್ಚಿ, ಕಂಬಳಿಯನ್ನು ಹಾಸಿ ಅದರ ಮೇಲೆ ದೈವವನ್ನು ಕೂರಿಸುವರು. ಮಡಿಯುಟ್ಟವರು ದೈವವನ್ನು ವಿಭೂತಿಯಿಂದ ತೊಳೆದು ಮಜ್ಜನ ಮಾಡಿಸುತ್ತಾರೆ. ಗುಡ್ಡಮಾರರು ಗುಡಿಯನ್ನು ಕಟ್ಟಿದ ಮೇಲೆ ಒಂದು ಬಾಳೆ ಎಲೆ ಹಾಕಿ ಅದರ ಮೇಲೆ ಏಳುವರೆ ಸೇರು ಭತ್ತವನ್ನು ಹಾಕುತ್ತಾರೆ. ಮೊದಲು ಕಳಸವನ್ನಿಟ್ಟು ನಂತರ ಮಲ್ಲೇಶಸ್ವಾಮಿ, ಅಜ್ಜ ಮೂಲಕಮ್ಮ, ಬಸವೇಶ್ವರ, ಚೇಜಿ, ಆತ್ಮಲಿಂಗಗಳನ್ನು ಬಾಳೆ ಎಲೆಯ ಮೇಲೆ ಇಟ್ಟು ಹೂವುಗಳಿಂದ ಅಲಂಕರಿಸುತ್ತಾರೆ.

ಗುಡ್ಡಮಾರರು ದೈವವನ್ನು ಧೂಪ-ದೀಪಗಳಿಂದ ಪೂಜಿಸುತ್ತಾರೆ. ಮಲ್ಲೇಶಸ್ವಾಮಿಯ ಬಲಗೈ ಕಡೆಯಿರುವ ದೀಪವನ್ನು ಎತ್ತಿಕೊಂಡು ಬೇತಾರ, ಬೇತಾರ (ಮಲ್ಲೇಶಸ್ವಾಮಿಯ ಭಂಟ) ಎನ್ನುತ್ತಾ ಪೂಜೆ ಮಾಡಿ ದೈವದ ಸ್ಮರಣೆ ಮಾಡುತ್ತಾ, ''ದೇವ ಮೇಲು ಲೋಕದವನೆ, ಕೆಳ ಲೋಕದವನೆ, ಹಳೇ ವಸ್ತ್ರ ಹಾಸಿ, ಪೂಂಡು ಬಾಳು ವಸ್ತ್ರ ತಲೆಯ ಮೇಲೆ ಇರಿಸಿ, ಕಣ್ಣು ಹೋದವನಿಗೆ ಕಣ್ಣುಕೊಟ್ಟು, ಒಣಗಿದ ಮರಕೆ ಚಿಗುರು ಬರಿಸಿ ರಾಮ ರಾಮ, ಕಲ್ಲು ಕಂಬದಿಂದ ಒಡೆದು ಮೂಡಿರುವ ರಾಮನಿಗೆ, ನಮ್ಮ ಶೃಂಗಾರ ನಿಮಗೆ ಸುಗ್ರೀವನ ಶೃಂಗಾರ ರಾಮ ರಾಮ, ನಮ್ಮನ್ನು ಕಾಪಾಡು'' ಎಂದು ಹೇಳುತ್ತಾ ಚಾಪೆ ಮೇಲೆ ಕುಳಿತುಕೊಳ್ಳುತ್ತಾರೆ. ಮಲ್ಲೇಶಸ್ವಾಮಿಯನ್ನು ಕುರಿತು ಹಾಡುಗಳನ್ನು ಹಾಡುತ್ತಾ ''ಶರಣೆನ್ನೀರೊ ಗುರುದೇವರಿಗೆ, ಎಳ್ಮಲೆ ಮೇಲ್‌ಗುರು ಗುರುಸಿದ್ದಯ್ಯನ ಸ್ವಾಮಿ ನೆನೆದು ಶರಣೆನ್ನೀರೊ ನೀ ಗುರುದೇವರಿಗೆ, ಅಜ್ಜ ಮೂಲಕಮ್ಮನ ಪಾದವ ನೆನೆದು ಶರಣೆನ್ನೀರೊ, ಹಿರಿಯಣ್ಣ, ಬೊಮ್ಮಣ್ಣಸ್ವಾಮಿ ನೆನೆದು ಶರಣೆನ್ನೀರೊ ಗುರುವು ದೇವುರಿಗೆ, ಕುತಿರು ಭೂಮಿತಾಯಿಯ ನೆನೆದು ಶರಣೆನ್ನೀರೊ ಗುರುದೇವುರಿಗೆ, ಸೃಷ್ಟಿಸಿರುವ ಶಿವನ ನೆನೆದು ಶರಣೆನ್ನೀರೊ ಗುರುದೇವುರಿಗೆ, ಕೊಂಗುತು ಮಲ್ಲಮ್ಮ, ಕೂಡಗುತು ಮಲ್ಲಮ್ಮ, ಅಳು ಮಲ್ಲಮ್ಮ, ಚೀಳು ಮಲ್ಲಮ್ಮ, ಉರಿಯ ಮಲ್ಲಮ್ಮ, ಹುತ್ತೂರು ಮಲ್ಲಮ್ಮಗೆ, ಶರಣೆನ್ನೀರೊ ಗುರುದೇವುರಿಗೆ, ಬೂದಿ ಮಕ್ಕಾಣ್ಣನ ಕಾಲುಭಟ್ಟನ ನೆನೆದು ಶರಣೆನ್ನೀರೊ ಗುರುದೇವುರಿಗೆ, ಬೆಳ್ಳಿ ಬೆಳೆದವನ ಪಾದವ ನೆನೆದು ಶರಣೆನ್ನೀರೊ ಗುರುದೇವುರಿಗೆ, ವೆಂಕಟೇಶ್ವರ ಪಾದವ ನೆನೆದು ಶರಣೆನ್ನೀರೊ ಗುರುದೇವುರಿಗೆ, ಬೇಡರ ಕಣ್ಣಪ್ಪನ ಪಾದವ ನೆನೆದು ಶರಣೆನ್ನೀರೊ ಗುರುದೇವುರಿಗೆ'' ಎನ್ನುತ್ತಾ, ದೈವಗಳಿಗೆ ಪೂಜೆ ಸಲ್ಲಿಸುತ್ತಾರೆ.

ದೈವದ ಮುಂದೆ ಕುಳಿತಿರುವ ಗುಡ್ಡಮಾರರು, ಹಣೆ, ಕಣ್ಣು, ಮೈ, ಕೈಗಳಿಗೆ ವಿಭೂತಿ ಧರಿಸಿಕೊಂಡಿರುವ ಇವರನ್ನು ಸ್ವಾಮಿಯ ಭಂಟರು ಎಂದು ಹೇಳುತ್ತಾರೆ. ಅವರು ಭೂತ-ಪ್ರೇತ, ದೈವ ಮೈ ಪ್ರವೇಶಿಸುವವರನ್ನು, ಭಯ, ಭೀತಿಗೆ ಒಳಗಾದವರನ್ನು ಒಬ್ಬರಾಗಿ ಕರೆದು ದೈವದ ಮುಂದೆ ಕೂರಿಸಿ ಭಂಟರು ದೈವ ಸ್ಮರಣೆ ಮಾಡುತ್ತಾ ಭೂತ-ಪ್ರೇತ, ದೈವಗಳನ್ನು ಕರೆಯುತ್ತಾರೆ. ಅವುಗಳು ಮಲ್ಲೇಶಸ್ವಾಮಿಗೆ ಹೆದರಿ, ಮೈ ತುಂಬುತ್ತವೆ. ಆಗ ಭಂಟರು, ನೀನು ಯಾರು, ಯಾಕಾ ಬಂದಿ ನಿನಗೆ ಏನೂ ಬೇಕು ಹೇಳು ಕೊಡುತ್ತೇವೆ ಎಂದಾಗ ಅವು ಕೋಳಿ, ಆಡು, ಹಂದಿಯನ್ನು ಬಲಿ ಕೇಳುತ್ತವೆ. ಬಲಿ ಕೊಟ್ಟರೆ ಹೋಗುವೆಯಾ ಎಂದು ಮಲ್ಲೇಶಸ್ವಾಮಿಯ ಆಣೆಯಾಗಿಯೂ, ಬೇಡರ ಕಣ್ಣಪ್ಪನ ಆಣೆಯಾಗಿಯು ಬರುವುದಿಲ್ಲ ಎಂದು ಹೇಳಿಸುತ್ತಾ ಮಲ್ಲೇಶ ಸ್ವಾಮಿಯ ಜಾಗಟೆಯ ಮೇಲೆ ಕೈಯಿರಿಸಿ ಪ್ರಮಾಣ ಮಾಡಿಸುತ್ತಾರೆ. ನಾನು ಇನ್ನು ಬರುವುದಿಲ್ಲ ನನ್ನದು ತಪ್ಪಾಯಿತು ಎಂದು ಅವುಗಳು ಹೊರಟು ಹೋಗುತ್ತವೆ. ಭಂಟರು ಅವುಗಳಿಗೆ ಸ್ವಾಮಿಯ ಬೆತ್ತದಿಂದ ಹೊಡೆದು ಹೊರಗೆ ಕಳುಹಿಸುತ್ತಾರೆ. ಕೋಳಿಯನ್ನು ಬಲಿ ಕೇಳಿದರೆ ಅಲ್ಲಿಯೇ ದೈವದ ಪೂಜೆಯು ನಡೆದಿರುವ ಗುಡಿಯ ಹಿಂದೆ, ಜೋಳದ ರೊಟ್ಟಿ, ಪುರಿ, (ಮಂಡಾಳು) ಒಂದು ಎಲೆಯ ಮೇಲಿಟ್ಟು ಕೋಳಿಯನ್ನು ಕೊಯ್ದು ಶಾಂತಿ ಮಾಡಿ ಪೂಜಿಸುತ್ತಾರೆ. ಇದನ್ನು ಅಣಕಟ್ಟು ಹಿಡಿಯುವುದು ಎನ್ನುತ್ತಾರೆ.

ಕೋಳಿಯನ್ನು ಬಲಿ ನೀಡುವಾಗ, ''ನಾಕಟ್ಟು ಕಟ್ಟದಲ್ಲ, ನಾಕಟ್ಟು ಕಟ್ಟದಲ್ಲ ಗುರುಸಿದ್ದಯ್ಯ ಕಟ್ಟೊದು, ನಾಕಟ್ಟು ಕಟ್ಟದಲ್ಲ. ನಾಕಟ್ಟು ಕಟ್ಟದಲ್ಲಿ ಅಜ್ಜ ಮೂಲಕಮ್ಮ ಕಟ್ಟೊದು, ನಾಕಟ್ಟು ಕಟ್ಟದಲ್ಲ, ನಾಕಟ್ಟು ಕಟ್ಟದಲ್ಲ, ಮಲ್ಲೇಶ

ಸ್ವಾಮಿ ಕಟ್ಟೊದು, ನಾಕಟ್ಟು ಕಟ್ಟದಲ್ಲ, ನಾಕಟ್ಟು ಕಟ್ಟದಲ್ಲ, ವೆಂಕಟೇಶ್ವರ ಸ್ವಾಮಿ ಕಟ್ಟೊದು ನಾಕಟ್ಟು ಕಟ್ಟದಲ್ಲ, ನಾಕಟ್ಟು ಕಟ್ಟದಲ್ಲ, ಬೇಡರ ಕಣ್ಣಪ್ಪ ಕಟ್ಟೊದು'' ಎಂದು ಹೇಳುತ್ತಾ ಶಾಂತಿ ಮಾಡುತ್ತಾರೆ.

ಇದೇ ರೀತಿ ಹತ್ತರಿಂದ-ಇಪ್ಪತ್ತು ಜನರನ್ನು ಒಟ್ಟಿಗೆ ಸೇರಿಸಿ ಮಲ್ಲೇಶ ಸ್ವಾಮಿಯ ಗದ್ದುಗೆ ಪೂಜೆಯನ್ನು ಮಾಡುತ್ತಾರೆ.

**೫ : ೨ : ೭ ತಿರುಪತಿ ವೆಂಕಟೇಶ್ವರ**

ಒಡಿಗ ಬುಡಕಟ್ಟು ಸಮುದಾಯದಲ್ಲಿ ಗೂಡುಮನೆಯವರು ವೈಷ್ಣವ ಪಂಥದವರು. ಇವರ ಕುಲದೈವ ತಿರುಪತಿ ವೆಂಕಟೇಶ್ವರ. ಈ ಮನೆತನದವರು ತಿರುಪತಿಗೆ ಹೋಗಿ ಬಂದ ನಂತರ ತಮ್ಮ ಕುಲಬಾಂಧವರನ್ನೆಲ್ಲಾ ಕರೆಸಿ ವೆಂಕಟೇಶ್ವರನ ಪೂಜೆಯನ್ನು ಮಾಡುತ್ತಾರೆ.

ಕುಲದೈವದ ದರ್ಶನಕ್ಕೆ ಹೊರಡುವಾಗ ತನ್ನ ಬಂಧು-ಬಳಗದವರಿಗೂ ತಿಳಿಸಿ ಒಟ್ಟಾಗಿ ನಾಲ್ಕೈದು ಕುಟುಂಬಗಳು ಹೊರಟು, ಮನೆಗಳಲ್ಲಿ ನಿಯಮ ನಿಷ್ಠೆಯಿಂದ ದೇವರಿಗೆ ಪೂಜೆ ಸಲ್ಲಿಸಿ ಹೊರಡುತ್ತಾರೆ. ತಿರುಪತಿ ಬೆಟ್ಟವನ್ನು ಕಾಲುನಡಿಗೆಯಿಂದ ಏರಿ ದೇವರ ದರ್ಶನ ಪಡೆಯುತ್ತಾರೆ. ಕುಲದೈವದ ನಾಮಸ್ಮರಣೆಯಿಂದ ಗೋವಿಂದ, ಬಾಲಾಜಿ ಎನ್ನುತ್ತಾ ಬೆಟ್ಟವನ್ನು ಹತ್ತುವುದು. ದೇವರ ದರ್ಶನ ಪಡೆದು ಹಿಂದಿರುಗಿದ ನಂತರ ತಂದಿರುವ ಪ್ರಸಾದವನ್ನು ದೇವರ ಕೋಣೆಯಲ್ಲಿಟ್ಟು, ಒಂದು ದಿನ (ಶನಿವಾರ) ಪೂಜಾ ದಿನವನ್ನು ಎಲ್ಲರೂ ಸೇರಿ ನಿರ್ಧರಿಸುತ್ತಾರೆ.

ದೇವರು ಮಾಡುವ ದಿನದಂದು ಮನೆಗಳನ್ನು ಸಾರಿಸಿ ಸುತ್ತಲು ಗೋಮೂತ್ರವನ್ನು ಹಾಕಿ, ಹತ್ತಿರದ ಬಂಧು ಬಳಗದವರು ಬಂದಿರುತ್ತಾರೆ. ಹಿರಿಯರಾದಿ ಮಕ್ಕಳು ಮಡಿಯುಟ್ಟಿರುತ್ತಾರೆ. ದೇವರ ದರ್ಶನ ಪಡೆದ ಎಲ್ಲರೂ ಒಂದೇ ಮನೆಯಲ್ಲಿ ಈ ಕಾರ್ಯವನ್ನು ಮಾಡುತ್ತಾರೆ. ಈ ಪೂಜೆಗೆ ಸಮುದಾಯದ ಕುಲಗುರುಗಳನ್ನು ಕರೆಸಿ ಅವರೇ ಈ ಕಾರ್ಯವನ್ನು ಮುಂದೆ ನಿಂತು ನಡೆಸುತ್ತಾರೆ. ಮೊದಲು ಮನೆಯಲ್ಲಿ ದೇವರ ಭಾವಚಿತ್ರ ಹಾಗೂ ದೇವರ ಪ್ರಸಾದವನ್ನು ಇಟ್ಟು ತಮ್ಮ ಕುಲುಗುರುಗಳ ಕೈಯಲ್ಲಿ ಎಲ್ಲರೂ ನಾಮವನ್ನು ಇಡಿಸಿಕೊಳ್ಳುತ್ತಾರೆ. ನಂತರ ಕುಲಗುರುಗಳ ಸಮ್ಮುಖದಲ್ಲಿ ಪೂಜೆಯು ನಡೆಯುತ್ತದೆ. ಅಂದು ಪೂಜೆಯ ನಂತರ ತಮ್ಮ ಹಿರಿಯರ ಪೂಜೆಯನ್ನು ಸಹ ಕೆಲವರು ಮಾಡುತ್ತಾರೆ. ಸತ್ತ ಗುಂಡಿಯ ಹತ್ತಿರ ಹೋಗಿ ವ್ಯಕ್ತಿಯ ಹೆಸರಿನಲ್ಲಿ ಗುರುಗಳು ಎಡೆಯಿಡುತ್ತಾರೆ. ಸತ್ತ ವ್ಯಕ್ತಿಯ ಮನೆಯವರು ವ್ಯಕ್ತಿಯ ಹೆಸರನ್ನು ಹೇಳಿಸುತ್ತಾ ನಂಜೇಗೌಡರು ಇಂದು ಸ್ವರ್ಗ ಸೇರಿದರು. ಹೀಗೆ ಸತ್ತ ಹಿರಿಯರ ಎಲ್ಲಾ ಹೆಸರುಗಳನ್ನು ಹೇಳುತ್ತಾ ಸ್ವರ್ಗ ಸೇರಿದರು ಎನ್ನುತ್ತಾರೆ. ಪೂಜೆಯ ನಂತರ ಹಿಂತಿರುಗಿ ಬರುವಾಗ ಹಿಂದಕ್ಕೆ ನೋಡಬಾರದು.

ಹಿರಿಯರ ಪೂಜೆಯ ನಂತರ ಮನೆಗೆ ಬಂದು ಗೋವಿಂದನ ನಾಮಸ್ಮರಣೆ ಮಾಡುತ್ತಾ ದೇವರಿಗೆ ಎಡೆಯನ್ನು ಇಟ್ಟು ಪೂಜೆ ಸಲ್ಲಿಸುತ್ತಾರೆ. ನಂತರ ಒಬ್ಬೊಬ್ಬರನ್ನಾಗಿ ಕರೆದು ತೀರ್ಥ ಪ್ರಸಾದವನ್ನು ನೀಡುತ್ತಾರೆ.

ಗೂಡು ಮನೆಯವರು ಮುಳ್ಳಿನ ಮನೆಯ ಹೆಣ್ಣುಮಕ್ಕಳನ್ನು ಮದುವೆ ಮಾಡಿಕೊಂಡು ತಮ್ಮ ಕುಟುಂಬಕ್ಕೆ ತಂದಿದ್ದರೆ ಅವರನ್ನು ಅಂದು ತಮ್ಮ ಕುಟುಂಬಕ್ಕೆ ಸೇರಿಸಿಕೊಳ್ಳುತ್ತಾರೆ. ಕುಲಗುರುಗಳ ಹತ್ತಿರ ಕರೆದುಕೊಂಡು ಹೋಗಿ, ಗೋಮೂತ್ರವನ್ನು ತೀರ್ಥವಾಗಿ ನೀಡುತ್ತಾರೆ. ಅದರಿಂದ ಸತ್ಯ ಮಾಡಿಸುತ್ತಾರೆ. ವೆಂಕಟರಮಣನ ಪಾದ ಸತ್ಯವಾಗಿ, ಬೇಡರ ಕಣ್ಣಪ್ಪನ ಪಾದ ಸಾಕ್ಷಿಯಾಗಿ ಇಲ್ಲಿ ನಡೆಯುತ್ತಿರುವ ಕಾರ್ಯವನ್ನು ನಮ್ಮ ತಂದೆ-ತಾಯಿಗಳಿಗೆ ನಮ್ಮ ಕುಟುಂಬದ ಬಂಧು-ಬಳಗದವರಿಗೆ ತಿಳಿಸುವುದಿಲ್ಲ. ಇನ್ನೂ ನಾನು ಈ ಮನೆಗೆ ಸಂಬಂಧಪಟ್ಟವಳು ಎಂದು ಹೇಳಿಸುತ್ತಾರೆ. ಪೂಜೆಯ ನಂತರ ಮನೆಯ ಯಜಮಾನನು ಕುಲಗುರುಗಳ ಪಾದ ತೊಳೆದು ನಮಸ್ಕಾರ ಮಾಡುತ್ತಾನೆ. ಪೂಜೆಯ ನಂತರ ಆಹ್ವಾನಿತ ಬಂಧು-ಬಳಗದವರಿಗೆ ಊಟೋಪಚಾರ ನಡೆಸುತ್ತಾರೆ. ಅನ್ನ, ಸಾರು, ಪಾಯಸ, ಉದಕ, ಹಪ್ಪಳ, ಉಪ್ಪಿನಕಾಯಿ, ಪಲ್ಯಗಳನ್ನು ಮಾಡಿರುತ್ತಾರೆ. ಊಟದ ನಂತರ ಎಲ್ಲರಿಗೂ ತಿರುಪತಿಯಿಂದ ತಂದಂತಹ ಪ್ರಸಾದವನ್ನು ನೀಡುತ್ತಾರೆ. ಈ ಕಾರ್ಯ ಮಾಡುವಾಗ ಮುಳ್ಳಿನ ಮನೆಯವರಿಗೆ ತಿಳಿಸುವಂತಿಲ್ಲ. ಈ ಕಾರ್ಯಕ್ಕೆ ಅವರು ಬರುವಂತಿಲ್ಲ.

**೫ : ೩ : ಕೊಂಡ ಕೋಲು**

ಕೊಂಡಕೋಲು ಸಮುದಾಯದಲ್ಲಿನ ಎಲ್ಲಾ ಶುಭಕಾರ್ಯಗಳಿಗೂ ಅವಶ್ಯಕ. ಹುಟ್ಟಿನಿಂದ ಸಾವಿನವರೆಗಿನ ಎಲ್ಲಾ ಆಚರಣೆಗಳಲ್ಲಿಯೂ ಕೊಂಡಕೋಲನ್ನು ಪೂಜಿಸುತ್ತಾರೆ. ಸಮುದಾಯದ ದಾಸರ ಗುಂಪಿನ ಮನೆತನದಲ್ಲಿ ಕೊಂಡಕೋಲು ಇದೆ. ಮೇಲುಕೋಟೆಯ ಚಲುವನಾರಾಯಣ ಸ್ವಾಮಿ ಅರ್ಚಕರು ಸಮುದಾಯದ ಕುಲ ಗುರುಗಳು. ಅವರು ಹಿಂದೆ ಎರಡು ಅಥವಾ ಮೂರು ವರ್ಷಗಳಿಗೊಮ್ಮೆ ಬಂದು ಹೋಗುತ್ತಿದ್ದರು. ಅವರು ಊಂಜುಬೆಲ್ಲು (ದಾಸರ)ಮನೆಯಲ್ಲಿಯೇ ಇದ್ದು ಸಮುದಾಯದ ಶುಭಕಾರ್ಯಗಳನ್ನು ನಡೆಸುತ್ತಿದ್ದರು. ಪ್ರತಿಯೊಂದು ಶುಭಕಾರ್ಯಗಳಿಗೆ ಬಂದು ಹೋಗಲು ಅನಾನುಕೂಲವಾದ್ದರಿಂದ ದಾಸರ ಗುಂಪಿಗೆ ಕೊಂಡಕೋಲು ಹಾಗೂ ಮುದ್ರೆ ಉಂಗುರವನ್ನು ನೀಡಿ, ಸಮುದಾಯದ ಶುಭಕಾರ್ಯಗಳಿಗೆ ನೀಡುವಂತೆ ಹೇಳಿದ್ದಾರೆ.

ಇಂದು ಸಮುದಾಯದಲ್ಲಿ ಯಾವುದೇ ಶುಭಕಾರ್ಯಗಳಾದರೂ ಕೊಂಡಕೋಲುದಾಸರು ಕೊಂಡಕೋಲು ಹಾಗೂ ಮುದ್ರೆ ಉಂಗುರವನ್ನು ತೆಗೆದುಕೊಂಡು ಹೋಗಿ ಕೊಡುತ್ತಾರೆ. ಪೂಜೆ ಪುನಸ್ಕಾರಗಳು ನಡೆದ ಮೇಲೆ ಮನೆಯವರು ಇವರಿಗೆ ಕಾಣಿಕೆಯನ್ನು ನೀಡುವರು. ಆ ಕಾಣಿಕೆಯನ್ನು ಮೇಲುಕೋಟೆ ದೇವಾಲಯಕ್ಕೆ ಹೋದಾಗ ಮುಡುಪಿನಲ್ಲಿ ಹಾಕುತ್ತಾರೆ.

**೫ : ೪ ಬಲಿ ಮತ್ತು ಹರಕೆಗಳು**

**೫ : ೪ : ೧ ಬಲಿ**

ಬುಡಕಟ್ಟು ಸಮುದಾಯಗಳು ದೈವಗಳಲ್ಲಿ ಅಪಾರವಾದ ನಂಬಿಕೆಯನ್ನು ಹೊಂದಿರುತ್ತವೆ. ಅವು ದೇವತೆಗಳನ್ನು ತಮ್ಮತ್ತ ಒಲಿಸಿಕೊಳ್ಳಲೂ ಅನೇಕ ವಿಧಿ ಸಂಪ್ರದಾಯಗಳನ್ನು ಆಚರಿಸುತ್ತಾರೆ. ಅದರಲ್ಲಿ ಬಲಿ ಪೂಜೆಯು ಒಂದು.

ವಸ್ತುವನ್ನು, ಪ್ರಾಣಿಯನ್ನು, ನರಮನುಷ್ಯನನ್ನು ತಮ್ಮ ಇಷ್ಟ ದೇವರಿಗೆ ಸಮರ್ಪಿಸುವುದರ ಮೂಲಕ ಬಲಿ ನೀಡುತ್ತವೆ. ಬುಡಕಟ್ಟುಗಳಲ್ಲಿ ಕಾಣುವ ಬಲಿಯ ಉದ್ದೇಶ, ಸ್ವರೂಪ ಹಾಗೂ ವಿವಿಧ ಸಂಪ್ರದಾಯಗಳ ಕುರಿತು ಸಾಕಷ್ಟು ಬರೆಹಗಳು ಪ್ರಕಟಗೊಂಡಿವೆ. "Sacrifice is the ritual destruction of an object, or more commonly the slaughter of a victim by effusion of blood suffocation, fire or other.... means" ಈ ರೀತಿಯಾಗಿ ನಾನಾ ವಿಧಿ ಸಂಪ್ರದಾಯಗಳಿಂದ ದೇವರಿಗೆ ಬಲಿಯನ್ನು ಅರ್ಪಿಸುತ್ತಾರೆ.

ಒಡಿಗ ಬುಡಕಟ್ಟು ಸಮುದಾಯದಲ್ಲಿಯು ಬಲಿ ಪೂಜೆಯು ಕಂಡುಬರುತ್ತದೆ. ಬಲಿಯನ್ನು ಹೆಚ್ಚಾಗಿ ಸ್ತ್ರೀ ದೇವತೆಗಳು, ಶಕ್ತಿ ದೇವತೆಗಳಿಗೆ ಮಾತ್ರ ಅರ್ಪಿಸುತ್ತಾರೆ. ಇದರಿಂದ ದೇವತೆಗಳು ತೃಪ್ತರಾಗುತ್ತವೆ ಎಂದು ಭಾವಿಸುತ್ತಾರೆ. ಇವರಲ್ಲಿ ಪ್ರಾಣಿಬಲಿಯನ್ನು ಮಾತ್ರ ಕಾಣಬಹುದು. ನರಬಲಿಯು ಇರುವುದಿಲ್ಲ.

ಬಲಿ ಎಂದರೆ ವಿಧಿ ಪೂರ್ವಕವಾಗಿ ದೈವಗಳಿಗೆ ಅರ್ಪಿಸುವುದು. ಪ್ರಾಣಿಗಳ ರಕ್ತವನ್ನು ದೈವಕ್ಕೆ ಸಮರ್ಪಿಸುವುದು. ಇದರಿಂದ ದೇವರನ್ನು ತೃಪ್ತಿಗೊಳಿಸುವುದು ಹಾಗೂ ದೈವವನ್ನು ಒಲಿಸಿಕೊಳ್ಳಲು ಬಲಿ ನೀಡುವುದರ ಮೂಲಕ ಪ್ರಯತ್ನಿಸುತ್ತಾರೆ.

ಒಡಿಗರು ಬಲಿ ನೀಡುವ ವಿಧಿ-ವಿಧಾನಗಳು ತುಂಬ ಸರಳವಾಗಿವೆ. ಸಮುದಾಯದಲ್ಲಿನ, ಚಟ್ನಳ್ಳಿ ಚಾಮುಂಡಿ, ಕರಿಗಾಳಿತಾಯಿ, ಹೊಸಹಳ್ಳಿ ಚಾಮುಂಡಿ, ಮೀರಕೆಮಾರಮ್ಮ, ಮರಳುಪರೆತಾಯಿ, ಮಾರಿ, ಕಾಳಿಕಟ್ಟೆತಾಯಿ, ದೇಶಿಮಾರಮ್ಮನಿಗೆ ಪ್ರಾಣಿ ಬಲಿಯನ್ನು ನೀಡುತ್ತಾರೆ. ಉಳಿದ ಯಾವ ದೇವರುಗಳಿಗೂ ಬಲಿ ಕೊಡುವ ಪದ್ಧತಿಯು ಇರುವುದಿಲ್ಲ. ಈ ಸಮುದಾಯದಲ್ಲಿ ಕೇವಲ ಸ್ತ್ರೀ ದೇವತೆಗಳಿಗೆ ಮಾತ್ರ ಬಲಿ ಪೂಜೆ ಇರುವುದು ಕಂಡುಬರುತ್ತದೆ. ಚಟ್ನಳ್ಳಿ ಚಾಮುಂಡಿ, ಮೀರಕೆ ಮಾರಮ್ಮ, ಹೊಸಹಳ್ಳಿ ಚಾಮುಂಡಿ, ಮರಳು ಪರೆತಾಯಿ ಈ ದೇವತೆಗಳಿಗೆ ಕುರಿ, ಆಡು, ಕೋಳಿ ಹಾಗೂ ಹಂದಿಯನ್ನು ಬಲಿಕೊಡುತ್ತಾರೆ. ಕರಿಗಾಳಿತಾಯಿ, ಮಾರಿ, ಕಾಳಿಕಟ್ಟೆ ತಾಯಿ, ದೇಶಿ ಮಾರಮ್ಮ ಈ ದೇವತೆಗಳಿಗೆ ಕುರಿ, ಕೋಳಿ, ಆಡನ್ನು ಮಾತ್ರ ಬಲಿಕೊಡುತ್ತಾರೆ. ಹಂದಿಯ ಬಲಿಯು ಈ ದೇವತೆಗಳಿಗೆ ನಿಷೇಧವಿದೆ. ಪ್ರಾಣಿಗಳಲ್ಲಿ ಕುರಿ, ಕೋಳಿ, ಆಡು, ಹಂದಿ ಈ ಪ್ರಾಣಿಗಳನ್ನು ಬಲಿ ಕೊಡುವ ಪದ್ಧತಿ ಇದೆ. ಉಳಿದ ಯಾವ ಪ್ರಾಣಿಗಳನ್ನು ಬಲಿ ಕೊಡುವುದು ಸಮುದಾಯದಲ್ಲಿ ಕಂಡುಬರುವುದಿಲ್ಲ.

**೫ : ೪ : ೨ ಹರಕೆಗಳು**

ಒಡಿಗ ಸಮುದಾಯವು ತಮಗೆ ಏನಾದರೂ ತೊಂದರೆಗಳು ಉಂಟಾದರೆ ದೈವಗಳನ್ನು ನೆನೆದು ತಮ್ಮ ತೊಂದರೆಗಳು ನಿವಾರಣೆಯಾಗಲೆಂದು ಹರಕೆ ಮಾಡಿಕೊಳ್ಳುತ್ತಾರೆ. ಹರಕೆಯು ನೈವೇದ್ಯ, ಕಾಣಿಕೆ ಅಥವಾ ವಸ್ತುಗಳ ರೂಪದಲ್ಲಿರುತ್ತವೆ ಹಾಗೂ ಕೆಲವು ಸಮಯದಲ್ಲಿ ಪ್ರಾಣಿಗಳನ್ನು ಬಲಿ ನೀಡುತ್ತೇವೆಂದು ಹರಕೆ ಮಾಡಿಕೊಳ್ಳುತ್ತಾರೆ.

* ಹಾವು ಅಥವಾ ಚೇಳು ಕಡಿದಾಗ ವ್ಯಕ್ತಿಯು ಜೀವ ಸಹಿತ ಉಳಿದರೆ ಸುಬ್ರಮಣ್ಯ ಸ್ವಾಮಿಗೆ ತೆಂಗಿನಕಾಯಿ ಒಪ್ಪಿಸುವುದಾಗಿ ಹರಕೆ ಮಾಡಿಕೊಳ್ಳುತ್ತಾರೆ. ಗುಣವಾದ ಆನಂತರ ಹರಕೆ ತೀರಿಸಿಕೊಳ್ಳುತ್ತಾರೆ.

* ತಾವು ಬೆಳೆದ ಬೆಳೆಗಳಿಗೆ ಕಾಡು ಪ್ರಾಣಿಗಳಿಂದ ತೊಂದರೆ ಆಗದಂತೆ ದಾಸ್ತಮ್ಮ ಹಾಗೂ ಕಾಳಿ ಕಟ್ಟೆ ತಾಯಿ ದೈವಗಳಿಗೆ ಒಂದು ಕಾಲು ರೂಪಾಯಿಯನ್ನು ಹರಕೆ ಕಟ್ಟಿ, ಬೆಳೆಗಳನ್ನು ಕಟಾವು ಮಾಡಿದ ಮೇಲೆ ಮೊದಲು ಆ ದೈವಗಳಿಗೆ ದವಸ-ಧಾನ್ಯಗಳನ್ನು ಒಪ್ಪಿಸಿ ಹರಕೆ ತೀರಿಸಿಕೊಳ್ಳುತ್ತಾರೆ.

* ದನಕರುಗಳು ಕಾಣೆಯಾದಾಗ ಅವು ಹಿಂತಿರುಗಿ ಬರುವಂತೆ ಚಾಮುಂಡಿ, ಮಸನಿ, ಮೇಲ್‌ದೈಯ್ಯ ದೈವಗಳಿಗೆ ವಸ್ತ್ರಗಳನ್ನು ಕೊಡಿಸುವುದಾಗಿ ಹರಕೆ ಮಾಡಿಕೊಂಡು ಅವು ಹಿಂತಿರುಗಿದ ಮೇಲೆ ಹರಕೆ ಒಪ್ಪಿಸುತ್ತಾರೆ ಹಾಗೂ ಹಸುಗಳು ಹಾಲು ಕೊಡದಿದ್ದರೆ ಮಾರಿ ದೇವಿಗೆ ತುಪ್ಪದ ದೀಪ ಹಚ್ಚುವುದಾಗಿ ಹರಕೆ ಮಾಡಿಕೊಳ್ಳುತ್ತಾರೆ.

* ಒಡಿಗರು ತಮಗೆ ಏನಾದರೂ ತೊಂದರೆಗಳು ಉಂಟಾದರೆ ಕರಿಗಾಳಿತಾಯಮ್ಮ ಹಾಗೂ ಚಾಮುಂಡಿ ದೈವಗಳಿಗೆ ಕೋಳಿಯನ್ನು, ಆಡನ್ನು ನೀಡುವುದಾಗಿ ಹರಕೆ ಮಾಡಿಕೊಳ್ಳುತ್ತಾರೆ. ತೊಂದರೆಗಳು ನಿವಾರಣೆಯಾದಾಗ ದೈವಗಳಿಗೆ ಹರಕೆಯನ್ನು ಒಪ್ಪಿಸುತ್ತಾರೆ.

* ಒಡಿಗ ಸಮುದಾಯದ ಯಾವುದೇ ವ್ಯಕ್ತಿ ದೀರ್ಘ ಕಾಲದ ಅನಾರೋಗ್ಯಕ್ಕೆ ಒಳಗಾದರೆ ತಮ್ಮ ಕುಲದೈವಗಳಿಗೆ ಒಂದು ಕಾಲು ರೂಪಾಯಿ ಹರಕೆ ಕಟ್ಟುತ್ತಾರೆ. ಕಾಯಿಲೆಯಿಂದ ಗುಣವಾದ ಮೇಲೆ ಹರಕೆ ಹಣವನ್ನು ನೀಡಿ ಪೂಜೆ ಸಲ್ಲಿಸಿಕೊಂಡು ಬರುತ್ತಾರೆ.

* ಸಮುದಾಯದಲ್ಲಿನ ಮಕ್ಕಳು-ಹಿರಿಯರು ಭೂತ-ಪ್ರೇತಗಳಿಗೆ ಹೆದರಿ ಮಂಕಾದರೆ ಮಲ್ಲೇಶಸ್ವಾಮಿ ಗದ್ದುಗೆ ಪೂಜೆ ಮಾಡಿಸುವುದಾಗಿ ಹರಕೆ ಮಾಡಿಕೊಂಡು ಅನಂತರ ಗದ್ದುಗೆ ಪೂಜೆ ಹಾಕಿಸಿ ತಮ್ಮ ಹರಕೆಯನ್ನು ತೀರಿಸಿಕೊಳ್ಳುತ್ತಾರೆ.

**೫ : ೫ ಹಬ್ಬ**

''ಹಬ್ಬ'' ಎನ್ನುವ ಶಬ್ದ ಸಂಸ್ಕೃತದ ಪರ್ವನ್ ಪದದ ತದ್ಭವ. 'ಪರ್ವ' ಎಂದರೆ ಒಂದು ಇನ್ನೊಂದರ ಜೊತೆ ಸಂಧಿಸುವುದು ಎಂದರ್ಥ. ಸಂಪ್ರದಾಯಗಳು ಮತ್ತು ಆಚರಣೆಗಳು ಹಬ್ಬಗಳಿಗೆ ಪ್ರೇರಕಗಳಾಗಿವೆ. ಒಂದು ಅವಧಿಯಲ್ಲಿ ನಡೆಸುವ ಸಂಪ್ರದಾಯಗಳು-ಆಚರಣೆಗಳು, ರೂಢಿ, ಉತ್ಸವಗಳು ಹಬ್ಬಗಳಾಗಿವೆ. ದ್ರಾವಿಡ ಭಾಷೆಯಲ್ಲಿ ''ಕೊಪ್ಪ'', ಪಂಟಕ ಶಬ್ದಗಳಿಗೆ ಹಬ್ಬ ಎಂಬ ಅರ್ಥವಿದೆ. ಮಲಯಾಳಂ ; ಕೋಪ್ಪು, ಕೊಡಗು ; ಕೋಪು, ತಮಿಳು ; ಪಂಟಿಕ, ತೆಲುಗು ; ಪಂಡುಗ ಶಬ್ದಗಳಿಗೆ ಹಬ್ಬ ಎಂಬ ಅರ್ಥವಿದೆ. ಬುಡಕಟ್ಟುಗಳ ನಂಬಿಕೆಗಳು, ಸಂಪ್ರದಾಯಗಳು, ಆಚರಣೆಗಳ ಕ್ರಿಯಾ ರೂಪಗಳೇ ಹಬ್ಬಗಳು. ''ನಿಸರ್ಗದ ಆರಾಧನೆ ಮತ್ತು ದೇವರನ್ನು ತಮ್ಮೊಡನೆ ಒಲಿಸಿಕೊಳ್ಳುವ ಸತತ ಪ್ರಯತ್ನಗಳ ಫಲವಾಗಿಯೇ ಈ ಹಬ್ಬಗಳು ಹುಟ್ಟಿಕೊಂಡಿವೆ. ಹೀಗಾಗಿ ಕೆಲವು ಸಂಪ್ರದಾಯಗಳ ಸಮೂಹವೇ ಹಬ್ಬಗಳಾಗಿರುತ್ತವೆ''.[೨] ತಮ್ಮ ಬದುಕಿನ ಎಲ್ಲಾ ಕಷ್ಟ-ಸುಖಗಳಿಗೂ ದೈವವೇ ಕಾರಣವೆಂದು ನಂಬಿದ್ದ ಬುಡಕಟ್ಟು ಸಮುದಾಯಗಳು ''ನಿಸರ್ಗವನ್ನು ನಿಯಂತ್ರಿಸುವ ಮತ್ತು ದೇವರನ್ನು ಒಲಿಸಿಕೊಳ್ಳುವ ಸತತ ಪ್ರಯತ್ನ''[೩] ನಡೆದುದರ ಫಲವಾಗಿಯೇ ಹಬ್ಬಗಳು ಹುಟ್ಟಿಕೊಂಡವು.

ಬುಡಕಟ್ಟು ಸಮುದಾಯಗಳು ಅರಣ್ಯಗಳಲ್ಲಿ ವಾಸಿಸುವುದರಿಂದ ಅವರಿಗೆ ನಿಸರ್ಗವೇ ಆಧಾರವಾಗಿತ್ತು. ಅದನ್ನೇ ನಂಬಿ ಅವರು ಜೀವನ ನಡೆಸುತ್ತಿದ್ದರು. ಅದನ್ನೇ ದೇವರ ಸ್ವರೂಪಗಳಲ್ಲಿ ಕಂಡು ಕೊಂಡಿರಬಹುದು. ನಂತರದ ದಿನಗಳಲ್ಲಿ ಸಮೂಹದಲ್ಲಿ ಕೆಲವು ಆಚರಣೆಗಳನ್ನು ಮಾಡುವುದರೊಂದಿಗೆ ಪ್ರಾರಂಭಿಸಿ, ಅದನ್ನೇ ಹಬ್ಬದ ಸ್ವರೂಪಗೊಳಿಸಿರಬಹುದು. ಇವರು ಎಲ್ಲಾ ಕೆಲಸಗಳಿಗೂ ಅರಣ್ಯ ಭೂಮಿಯನ್ನು ನಂಬಿದ್ದರಿಂದಾಗಿ ಅದರ ಫಲವನ್ನು ಹೆಚ್ಚಿಸಿಕೊಳ್ಳಲು, ನಿಸರ್ಗ ದೇವತೆಯ ಪೂಜೆಯೊಂದಿಗೆ ಹಬ್ಬಗಳನ್ನು ಮಾಡುವ ಆಚರಣೆಗಳನ್ನು ರೂಢಿಸಿಕೊಂಡಿರ ಬಹುದು.

ಒಡಿಗ ಸಮುದಾಯವು ಇದಕ್ಕೆ ಹೊರತಾಗಿಲ್ಲ. ಇವರ ಅರಣ್ಯಗಳಲ್ಲಿ ಗುಡ್ಡ-ಗಾಡು ಪ್ರದೇಶಗಳಲ್ಲಿ ವಾಸಿಸುತ್ತಿದ್ದ ರಿಂದ ಬೇಟೆಯು ಮುಖ್ಯ ಉದ್ದೇಶವಾಗಿತ್ತು. ನಂತರ ಕೃಷಿಯನ್ನು ಅವಲಂಬಿಸಿದರು. ಈ ಸಮಯದಲ್ಲಿ ನಿಸರ್ಗ ದೇವತೆಗಳು ಪೂಜಿಸುವುದರೊಂದಿಗೆ ಹಬ್ಬ ಹರಿದಿನಗಳನ್ನು ಆಚರಿಸುವುದನ್ನು ರೂಢಿಸಿಕೊಂಡರು. ಜೊತೆಗೆ ಜೀವನ ನಿರ್ವಹಣೆಗಾಗಿ ಬೇಟೆ, ಕೃಷಿ, ಕೂಲಿ ಇತರೆ ಕೆಲಸ ಕಾರ್ಯಗಳಲ್ಲಿ ವರ್ಷವೆಲ್ಲ ದುಡಿಯುವುದರಿಂದ ಬಿಡುವು ಇರುತ್ತಿರಲಿಲ್ಲ. ಇಂಥ ಸಮಯದಲ್ಲಿ ಅವರು ಸುಖ ಸಂತೋಷದಿಂದ ಇರಲು ಕೆಲವು ದಿನಗಳನ್ನು ಇತರ ಸಮುದಾಯಗಳಂತೆ ಸಂತೋಷಕ್ಕಾಗಿ ಕೆಲವು ಆಚರಣೆಗಳನ್ನು ರೂಢಿಸಿಕೊಂಡರು. ಆ ದಿನಗಳೇ ಹಬ್ಬ-ಜಾತ್ರೆಗಳೆಂದು ಕರೆಸಿಕೊಂಡವು.

ಈ ಸಮುದಾಯದವರು ಆಚರಿಸುವ ಹಬ್ಬ-ಹರಿದಿನಗಳೆಂದರೆ ದೀಪಾವಳಿ, ಓಣಂ, ಬೀಸು, ಕಡೇಬೀಸು ಶಿವರಾತ್ರಿ ಮುಖ್ಯವಾದವುಗಳು ಹಾಗೂ ಶಕ್ತಿದೇವತೆಗಳನ್ನು ವರ್ಷಕ್ಕೆ ಒಂದು ಸಾರಿ ಪೂಜಿಸುತ್ತಾರೆ.

### ೫ : ೫ : ೧ : ೧ ದೀಪಾವಳಿ

ಒಡಿಗ ಬುಡಕಟ್ಟು ಸಮುದಾಯದಲ್ಲಿ ದೀಪಾವಳಿ ಹಬ್ಬವು ಪ್ರಮುಖವಾದ ಹಬ್ಬವಾಗಿದೆ. ಈ ಹಬ್ಬವನ್ನು ಎರಡು ದಿನ ಆಚರಿಸುತ್ತಾರೆ. ಮೊದಲನೆಯ ದಿನ ಕಾಡಿನಿಂದ ಕಳ್ಳಿಯನ್ನು ತಂದು ಮನೆಯ ತಲೆಬಾಗಿಲಿಗೆ ಕಟ್ಟುವುದೇ ಮೊದಲ ಕೆಲಸ. ಮಕ್ಕಳು ಹಾಗೂ ಹಿರಿಯರೆಲ್ಲರೂ ಮೈ, ಕೈಗಳಿಗೆ ಎಣ್ಣೆಯನ್ನು ಹಚ್ಚಿಕೊಂಡು ಸ್ನಾನ ಮಡಿಯನ್ನು ಮಾಡುತ್ತಾರೆ. ಹಿರಿಯರು ಹಾಗೂ ಮಹಿಳೆಯರು ಮಡಿಯುಟ್ಟು ದೇವರಿಗೆ ಪೂಜೆ ಸಲ್ಲಿಸುತ್ತಾರೆ. ಮಕ್ಕಳು ಹೊಸ ಬಟ್ಟೆಯನ್ನು ಉಟ್ಟು ಸಡಗರದಿಂದ ಹಬ್ಬವನ್ನು ಆಚರಿಸುತ್ತಾರೆ. ಅಂದು ಸಂಜೆ ಮನೆಯ ಮುಂಬಾಗಿಲಿನಲ್ಲಿ ದೀಪಗಳನ್ನಿಟ್ಟು ಸಂಭ್ರಮದಿಂದ ಹಬ್ಬವನ್ನು ಆಚರಿಸುತ್ತಾರೆ. ಅಕ್ಕಿ ಹಿಟ್ಟಿನಿಂದ ಮುದ್ದೆ ಮಾಡಿ ಜೊತೆಗೆ ಕಾಯಿರಸವನ್ನು ಮಾಡಿ ತುಪ್ಪವನ್ನು ಹಾಕಿಕೊಂಡು ಸಂಜೆ ಎಲ್ಲರೂ ಹಬ್ಬದ ಊಟವನ್ನು ಸವಿಯುತ್ತಾರೆ. ಕಡೇ ದಿನ ಬಲಿಪಾಡ್ಯಮಿಯ ದಿನದಂದು ದೊಡ್ಡಬೈರನಕುಪ್ಪೆಯಲ್ಲಿ ಬಸವೇಶ್ವರನ ಜಾತ್ರೆಯು ನಡೆಯುತ್ತದೆ.

### ೫ : ೫ : ೧ : ೨ ಓಣಂ

ಒಡಿಗ ಬುಡಕಟ್ಟು ಸಮುದಾಯವು ಮೂಲತಃ ಚಿತ್ರದುರ್ಗದಿಂದ ಜೀವರಕ್ಷಣೆಗಾಗಿ ಓಡಿ ಹೋಗಿ ಕೇರಳದ ಅರಣ್ಯ

ಪ್ರದೇಶಗಳಲ್ಲಿ ವಾಸಿಸಲಾರಂಭಿಸಿತ್ತು. ಆ ಸಂದರ್ಭದಲ್ಲಿ ಅಲ್ಲಿನ ಸಂಪ್ರದಾಯಗಳನ್ನು ರೂಢಿಸಿಕೊಂಡು ಜೊತೆಗೆ ತನ್ನ ಮೂಲ ಆಚರಣೆಗಳನ್ನು ಉಳಿಸಿಕೊಂಡು ಬಂದಿದೆ. ಈ ಸಮುದಾಯವು ಕೇರಳದಲ್ಲಿ ಆಚರಿಸುವ ಓಣಂ ಹಬ್ಬವನ್ನು ಆಚರಿಸುವುದನ್ನು ರೂಢಿಸಿಕೊಂಡಿದೆ. ಈ ಹಬ್ಬವನ್ನು ಕೇರಳದ ಜನ ಸಾಮಾನ್ಯರು ಆಚರಿಸುವ ಸಂಪ್ರದಾಯದ ಮಾದರಿಯಲ್ಲಿಯೇ ಆಚರಿಸುತ್ತಾರೆ.

ಓಣಂ ಹಬ್ಬದ ದಿನ ಮನೆಯನ್ನು ಗೋಮಯದಿಂದ ಸ್ವಚ್ಛಗೊಳಿಸಿ ಹಾಗೂ ಮನೆಯ ಮುಂದಿನ ಹಜಾರವನ್ನು ಸಾರಿಸಿ, ರಂಗೋಲಿಯನ್ನು ಹಾಕುತ್ತಾರೆ. ಮನೆ ಮಂದಿಯೆಲ್ಲ ಮಡಿಯುಟ್ಟು ಲಕ್ಷ್ಮಿ ಪೂಜೆಯನ್ನು ಮಾಡುವುದುಂಟು. ತಮ್ಮ ಹೊಲ-ಗದ್ದೆಗಳಲ್ಲಿ ಚಿಗುರಿದ ದವಸ-ಧಾನ್ಯಗಳನ್ನು ತಂದು ಮನೆಯ ಮುಂದಿನ ಮೇಟಿಕಂಬದ ಬಳಿ ಇಟ್ಟು ಪೂಜೆ ಸಲ್ಲಿಸುತ್ತಾರೆ. ಈ ಪೂಜೆಯನ್ನು ಹತ್ತು ದಿನಗಳವರೆಗೆ ಮಾಡುತ್ತಾರೆ. ಬಗೆ-ಬಗೆಯ ಹೂವುಗಳಿಂದ ಮೇಟಿಕಂಬ, ಕೃಷಿ ಉಪಕರಣಗಳನ್ನು ಇಟ್ಟು ಪ್ರತಿದಿನ ಮನೆಯ ಮುಂದೆ ರಂಗೋಲಿ ಹಾಕುತ್ತಾ ಮೊದಲ ಒಂಭತ್ತು ದಿನಗಳು ಸರಳವಾಗಿ ಪೂಜೆ ಮಾಡಿ, ಹತ್ತನೆಯ ದಿನ ನೇಗಿಲು, ನೊಗ, ಕೈಗೊಡಲಿ, ಕಳೆಗುದ್ದಲಿ, ಗುದ್ದಲಿ ಎಲ್ಲಾ ಕೃಷಿ ಉಪಕರಣಗಳನ್ನು ಮೇಟಿಕಂಬದ ಬಳಿ ಇಟ್ಟು ದನಕರುಗಳಿಗೆ ಮೈ ತೊಳೆದು ಭಕ್ತಿ ಗೌರವಗಳಿಂದ ಪೂಜೆಸಲ್ಲಿಸುತ್ತಾರೆ.

**೫ : ೫ : ೧ : ೩ ಬೀಸುಹಬ್ಬ**

ಬೀಸು ಹಬ್ಬವನ್ನು ಕೂಡ ಕೇರಳದ ಸಾಂಪ್ರದಾಯಿಕ ರೀತಿಯಲ್ಲಿ ಆಚರಿಸುತ್ತಾರೆ. ಬೀಸು ಹಬ್ಬದಂದು ದೇವೇಶಿನಾರಾಯಣನಿಗೆ ಮೊದಲ ಪೂಜೆ. ಈ ದೇವರು ಕೇರಳದ ತಿರುನಲ್ಲಿ ಎಂಬಲ್ಲಿ ನೆಲೆಸಿದೆ. ಬೀಸು ಹಬ್ಬವನ್ನು ಎರಡು ದಿನಗಳಲ್ಲಿ ಆಚರಿಸುತ್ತಾರೆ. ಬೀಸು ಹಬ್ಬ ಹಾಗೂ ಕಡೇ ಬೀಸು.

ಬೀಸು ಹಬ್ಬದ ದಿನದಂದು ದೇವೇಶಿನಾರಾಯಣ ಗುಡಿಗೆ ಹೋಗಿ ಪೂಜೆ ಸಲ್ಲಿಸಿಕೊಂಡು ಬಂದು ಮನೆಯಲ್ಲಿಯೂ ದೇವರ ಪೂಜೆ ಮಾಡುತ್ತಾರೆ. ಬೀಸು ಹಬ್ಬದ ಸಂದರ್ಭದಲ್ಲಿ ದೇವೇಶಿನಾರಾಯಣ ಸ್ವಾಮಿಯನ್ನು ಕುರಿತು ತಮ್ಮದೇ ಆದ ನಂಬಿಕೆಯನ್ನು ಹೊಂದಿದ್ದಾರೆ.

ಕೊಡಗಿನ ಒಂದು ಕುಟುಂಬದವರಿಗೆ ಮದುವೆಯಾಗಿ ಇಪ್ಪತ್ತೈದು ವರ್ಷ ಕಳೆದರು ಮಕ್ಕಳಾಗಿರಲಿಲ್ಲ. ಕೇರಳದ ತಿರುನಲ್ಲಿ ಎಂಬಲ್ಲಿ ದೇವೇಶಿನಾರಾಯಣ ಎಂಬ ಸ್ವಾಮಿಯ ಸನ್ನಿಧಾನಕ್ಕೆ ಹೋಗಿ ಬನ್ನಿ ಎಂದು ನೆರೆಯವರು ತಿಳಿಸಿದರು. ಅದು ಸತ್ಯದೇವರು ನಿಮಗೆ ಖಂಡಿತವಾಗಿ ಮಕ್ಕಳಾಗುತ್ತವೆ ಎಂದು ಹೇಳಿದರು. ಇದರಿಂದ ಅವರು ಒಮ್ಮೆ ದೇವರ ಸನ್ನಿಧಾನಕ್ಕೆ ತಿರುನಲ್ಲಿಯ ಶ್ರೀ ದೇವೇಶಿನಾರಾಯಣನ ದರ್ಶನಕ್ಕೆ ಬಂದು ಮಕ್ಕಳ ಭಾಗ್ಯವನ್ನು ಬೇಡಿಕೊಂಡರು. ನಮಗೆ ಮಕ್ಕಳಾದರೆ ಮೊದಲ ಮಗುವನ್ನು ನಿನ್ನ ಸನ್ನಿಧಾನಕ್ಕೆ ತಂದು ಒಪ್ಪಿಸುತ್ತೇನೆ ಎಂಬ ಹರಕೆ ಹೊತ್ತು ಪೂಜೆ ಸಲ್ಲಿಸಿಕೊಂಡು ಹೋದರು. ಒಂದು ವರ್ಷ ಕಳೆದ ಬಳಿಕ ಅವರಿಗೆ ಹೆಣ್ಣು ಮಗುವಾಯಿತು. ಅದಕ್ಕೆ ಸ್ವಾಮಿಯ ಪ್ರೇರಣೆಯಿಂದ ದೇವೀರಮ್ಮ ಎಂದು ಹೆಸರಿಟ್ಟರು. ದೇವೇಶಿನಾರಾಯಣನ ಸನ್ನಿಧಿಗೆ ಬರುವ ಮತ್ತು ದೇವೀರಮ್ಮನನ್ನು ದೇವರ ಸನ್ನಿಧಾನಕ್ಕೆ ಒಪ್ಪಿಸುವುದನ್ನು ಮರೆತುಬಿಟ್ಟಿದ್ದರು. ಮೂರು ವರ್ಷ ಕಳೆದ ಬಳಿಕ ಆ ಮಗುವೇ ದೇವರ ಸನ್ನಿಧಾನಕ್ಕೆ ಹೋಗುವುದನ್ನು ಜ್ಞಾಪಿಸಿ ಕರೆದುಕೊಂಡು ಬರುತ್ತದೆ. ದೇವರ ಸನ್ನಿಧಿಯಲ್ಲಿರುವ ಪಾಪನಾಸಿನ ಕೊಳದಲ್ಲಿ

ಸ್ನಾನ ಮಾಡಲು ತಂದೆ-ತಾಯಿ ಜೊತೆಗೆ ದೇವೀರಮ್ಮ ಹೋದರು. ತಂದೆ-ತಾಯಿ ಸ್ನಾನದ ನಂತರ ದೇವೀರಮ್ಮನು ಆಭರಣ ಕಳಚಿ ಕೊಳದ ಬಳಿಯಲ್ಲಿಟ್ಟು ಸ್ನಾನಕ್ಕೆ ಹೋದಳು. ಎಷ್ಟು ಹೊತ್ತಾದರು ಬರದಿದ್ದರಿಂದ ತಂದೆ-ತಾಯಿಯರು ಗಾಬರಿಗೊಂಡು ದೇವೀರಮ್ಮ, ದೇವೀರಮ್ಮ ಎಂದು ಕೂಗಿಕೊಂಡರು. ಕೂಗಿದಾಗ ಮೂರು ಬಾರಿ ''ಹೋಯ್'' ಎನ್ನುವುದನ್ನು ಕೇಳಿಸಿ ನಂತರ ಮಗುವು ನಿಮ್ಮ ಹರಕೆ ಒಪ್ಪಿಸಿಯಾಯಿತು. ನೀವು ಇನ್ನೂ ಹಿಂತಿರುಗಿ ಹೋಗಿ ಎಂಬಂತೆ ಹೇಳಿದ್ದನ್ನು ಕೇಳಿಸಿಕೊಂಡು ತಂದೆ-ತಾಯಿಯರು ಹಿಂತಿರುಗಿದರು. ಆ ದೇವೀರಮ್ಮ ಸ್ವಾಮಿಯ ಎಡಭಾಗದಲ್ಲಿ ನೆಲೆಸಿರುವುದಾಗಿ ಹೇಳುತ್ತಾರೆ.

ಆದ್ದರಿಂದ ಬೀಸುಹಬ್ಬದ ಸಂದರ್ಭದಲ್ಲಿ ಹಬ್ಬದ ದಿನ ಬೆಳಿಗ್ಗೆ ಸುಮಾರು ನಾಲ್ಕು ಅಥವಾ ಐದು ಘಂಟೆಗೆ ಪಾಪನಾಸಿನಿ ಕೊಳದಲ್ಲಿ ಸ್ನಾನ ಮಾಡಿ ಯಾರ ಮುಖವನ್ನು ನೋಡದೆ ದೇವರ ಸನ್ನಿಧಾನಕ್ಕೆ ಬಂದು ದೇವೇಶಿನಾರಾಯಣ ಸ್ವಾಮಿಯನ್ನು ನೋಡಿದರೆ ದೇವೀರಮ್ಮನು ಮೊದಲು ಬಲಭಾಗದ ತೋಳಿನ ಹತ್ತಿರ ಕಾಣುತ್ತಾಳೆ. ಮತ್ತೊಂದು ಸಾರಿ ಎಡಭಾಗದ ತೋಳಿನ ಹತ್ತಿರ ಕಾಣುತ್ತಾಳೆ ಎಂದು ಹೇಳುತ್ತಾರೆ.

ದೇವೇಶಿ ನಾರಾಯಣಸ್ವಾಮಿಯು ತಿರುನಳ್ಳಿ ಹತ್ತಿರ ಕುದುರೆಗೂಡು (ಕೋಟೆರು) ಎಂಬಲ್ಲಿ ಒಂದೇ ರಾತ್ರಿಯಲ್ಲಿ ದೇವಸ್ಥಾನ ನಿರ್ಮಿಸಿ ಅಲ್ಲಿ ದೇವೀರಮ್ಮನನ್ನು ನೆಲೆಸಲು ಸಲಹೆ ನೀಡಿತು. ಆದರೆ ಆ ದೇವಸ್ಥಾನದ ನಿರ್ಮಾಣವು ಒಂದೇ ರಾತ್ರಿಯಲ್ಲಿ ಮುಗಿಯಲಿಲ್ಲ. ದೇವಸ್ಥಾನ ಅರ್ಧವಾಗಿ ನಿಂತು ಹೋಯಿತು. ಆದ್ದರಿಂದ ಅಲ್ಲಿ ದೇವಿಯು ನೆಲೆಸಲು ಒಪ್ಪಲಿಲ್ಲ. ಇದರಿಂದ ಈ ಜಾಗದಲ್ಲಿ ಒಡಿಗ ಬುಡಕಟ್ಟು ಸಮುದಾಯದ ಶಕ್ತಿ ದೇವತೆಯಾದ ಕರಿಗಾಳಿ ತಾಯಮ್ಮ, ದೇವೇಶಿ ನಾರಾಯಣನ ಒಪ್ಪಿಗೆ ಪಡೆದು ಅಲ್ಲಿ ನೆಲೆಸಿದ್ದಾಳೆ.

**೫ : ೫ : ೧ : ೪ ಕಡೇಬೀಸು**

ಬೀಸುಹಬ್ಬ ಕಳೆದ ಒಂಭತ್ತನೆಯ ದಿನದಂದು ಕಡೇಬೀಸು ಹಬ್ಬವನ್ನು ಆಚರಿಸುತ್ತಾರೆ. ಅಂದು ಸಮುದಾಯದವರೆಲ್ಲ ಸೇರಿ ಈ ಸಮುದಾಯಕ್ಕೆ ಸಂಬಂಧಿಸಿದ ಮೀರಕೆ ಮಾರಮ್ಮನ ಪೂಜೆಯನ್ನು ಮಾಡುತ್ತಾರೆ.

ಬೀಸುಹಬ್ಬದ ದಿನ ಸಮುದಾಯದವರೆಲ್ಲಾ ಸೇರಿ ಹೊಳೆಯ ಹತ್ತಿರ ಹೋಗಿ ಸ್ನಾನ ಮಾಡಿ ಮಡಿಯುಟ್ಟು, ತಾವು ತಂದಿರುವ ಅರಿಶಿನ, ಗಂಧ, ಬೆಲ್ಲ, ಈರುಳ್ಳಿ, ಬೇವಿನಸೊಪ್ಪು ಇದರಿಂದ ಪಾನಕ ಮಾಡಿ ಅಲ್ಲಿ ಅಂದು ವೆಂಕಟೇಶ್ವರ ನಾಮಸ್ಮರಣೆ ಮಾಡಿ ಗೋವಿಂದನನ್ನು ನೆನೆದು ಒಂದು ಮರದ ಕೆಳಗೆ ಕುಳಿತು ಪಾನಕ ಕುಡಿಯುತ್ತಾರೆ. ಕಡೇಬೀಸು ಹಬ್ಬವನ್ನು ಆಚರಿಸುವ ಸಲುವಾಗಿ ಪ್ರತಿ ಮನೆಗೆ ಹತ್ತು ರೂಪಾಯಿಗಳನ್ನು ಸಂಗ್ರಹಿಸುವ ಕುರಿತು ಮಾತನಾಡುತ್ತಾರೆ. ದೇವರ ಕಾರ್ಯಕ್ಕೆ ಎಲ್ಲರೂ ಬಂದು ಸೇರುವಂತೆ ಹೇಳುತ್ತಾರೆ.

ಹೊಳೆಯ ಪಕ್ಕದ ಒಂದು ಮರದ ಕೆಳಗೆ ಸ್ಥಳವನ್ನು ಸ್ವಚ್ಛಗೊಳಿಸಿ ಮೀರಕೆ ಮಾರಮ್ಮನನ್ನು ತಂದು ಅಲ್ಲಿ ಪೂಜಿಸುತ್ತಾರೆ. ಅಲ್ಲಿ ಸಮುದಾಯದವರೆಲ್ಲರು ಸೇರಿ ದೇವಿಗೆ ಅರಿಶಿನ, ಕುಂಕುಮ, ಒಡವೆ, ವಸ್ತ್ರಗಳಿಂದ ಸಿಂಗರಿಸುತ್ತಾರೆ. ಈ ದೇವತೆಗೆ ಸಮುದಾಯದ ಬರಗೂರು ಮನೆತನದವರು ಪೂಜಾರಿಗಳು. ಅಂದು ಉಪವಾಸವಿದ್ದು ದೇವರಿಗೆ ಪೂಜೆ ಸಲ್ಲಿಸುತ್ತಾರೆ. ಎಲ್ಲರೂ ಹೂ, ಹಣ್ಣು, ಕಾಯಿಗಳೊಂದಿಗೆ ಬಂದು ದೇವಿಗೆ ಪೂಜೆ ಸಲ್ಲಿಸಿಕೊಂಡು

ಹೋಗುವುದರ ಜೊತೆಗೆ ಒಂದೊಂದು ಕೋಳಿಯನ್ನು ದೇವಿಗೆ ಅರ್ಪಿಸುತ್ತಾರೆ. ಇಂದು ನಾಗರಿಕತೆಯನ್ನು ಹೊಂದಿದಂತೆ ಯುಗಾದಿ, ಗಣೇಶಚತುರ್ಥಿ ದಿನಗಳಂದು ಹಬ್ಬವನ್ನು ಮಾಡುತ್ತಾರೆ. ಈ ಸಮುದಾಯದ ಯುವಕರು ಗಣೇಶ ಚತುರ್ಥಿಯ ದಿನ ಗಣೇಶನನ್ನು ಕೂರಿಸುವರು. ಈ ದಿನಗಳಂದು ವಿಶೇಷವಾಗಿ ಆಚರಿಸದೇ ಮನೆಗಳಲ್ಲಿ ದೇವರಿಗೆ ಪೂಜೆ ಸಲ್ಲಿಸುತ್ತಾರೆ.

**೫ : ೨ ಜಾತ್ರೆಗಳು**

ಸಂಸ್ಕೃತದ ''ಯಾತ್ರ'' ಕನ್ನಡದಲ್ಲಿ ಜಾತ್ರೆ ಆಯಿತು. ಇದು ವ್ಯಾಕರಣದ ತತ್ಸಮ-ತದ್ಭವದ ಲೆಕ್ಕಕ್ಕಷ್ಟೆ ಸಂಬಂಧಿಸಿದ ಸಂಗತಿಯಲ್ಲ. ದ್ರಾವಿಡ ಜನಾಂಗಗಳ ಮೇಲೆ ವೈದಿಕರ ಪ್ರಭಾವವನ್ನು ಇದು ಸೂಚಿಸುತ್ತದೆ. ಹಾಗಿದ್ದರೆ ಈ ಪ್ರಭಾವಕ್ಕಿಂತ ಮೊದಲು ದ್ರಾವಿಡರಲ್ಲಿ ಜಾತ್ರೆಯನ್ನು ಸೂಚಿಸುವ ಪದ ಯಾವುದಾಗಿತ್ತು. ''ತೇರು'' ದ್ರಾವಿಡ ಪದ. ಇದು ಜಾತ್ರೆಯ ನಿರ್ದಿಷ್ಟವಾದ ಒಂದು ಕಾರ್ಯಕ್ರಮವನ್ನಷ್ಟೆ ಸೂಚಿಸುತ್ತದೆ. ''ತೇರು ಹರಿದ ಮೇಲೆ ಪರಿಸಿಗೇನು ಕೆಲಸ'' ಎಂಬ ಗಾದೆಯಂತೆ ತೇರು ಜಾತ್ರೆಯ ಮುಕ್ತಾಯವನ್ನು ಸೂಚಿಸುವುದು. ಸಾಮಾನ್ಯರು ಹಲವೆಡೆ ''ಜಾತ್ರೆಗೆ ಹೋಗು'' ಎಂಬರ್ಥದಲ್ಲಿ ''ತೇರಿಗೆ ಹೋಗು'' ಎಂಬುದಾಗಿ ಬಳಸುತ್ತಾರೆ.

ಬುಡಕಟ್ಟು ಸಮುದಾಯಗಳು ನಿಸರ್ಗದ ಮಡಿಲಿನಲ್ಲಿ ವಾಸಿಸುತ್ತಿದ್ದರಿಂದ ಅವರು ಧಾರ್ಮಿಕಾಚರಣೆಗಳನ್ನು ಮೈಗೂಡಿಸಿಕೊಂಡಿರಬೇಕು. ಬುಡಕಟ್ಟು ಸಮುದಾಯಗಳು ನಡೆಸುವ ಧಾರ್ಮಿಕಾಚರಣೆಗೆ ಹಾಗೂ ದೇವತಾರಾಧನೆಗಳನ್ನು ಸಾಮೂಹಿಕವಾಗಿ ಆಚರಿಸುತ್ತಾರೆ. ಇವುಗಳು ತಲೆತಲೆಮಾರಿನಿಂದ ಬೆಳೆದು ಬಂದ ಆಚರಣೆಗಳೇ ಹಬ್ಬ, ಹರಿದಿನ ಜಾತ್ರೆಗಳಾಗಿರಬಹುದು. ಹಬ್ಬ-ಜಾತ್ರೆಗಳನ್ನು ತನ್ನ ಸಮುದಾಯಕ್ಕೆ ಸೀಮಿತವೆಂಬಂತೆ ಸಮುದಾಯದವರೆಲ್ಲರು ಸಾಮೂಹಿಕವಾಗಿ ಆಚರಿಸುತ್ತಾರೆ.

''ಜಾತ್ರೆಗಳು ತಾಯಿಬೇರು''. ಭೂತ ಕಾಲದ ಗರ್ಭದಲ್ಲಿ ಹೊತ್ತುಕೊಂಡಿದ್ದರೂ ಅವು ಆದಿ ಮಾನವನ ಕಾಲ ದಿಂದಲೇ ಧಾರ್ಮಿಕಾಚರಣೆಗಳ ಒಂದು ಪ್ರಮುಖ ಭಾಗವಾಗಿ ರೂಢಿಯಲ್ಲಿದ್ದಿರಬೇಕೆಂದು ತೋರುತ್ತದೆ. ಸಾಮಾನ್ಯವಾಗಿ ಆದಿಮಾನವನ ಕಾಲದ ದೇವತಾರಾಧನೆಯೇ ಮೊದಲಾದ ಧಾರ್ಮಿಕಾಚರಣೆಗಳು ಸಾಮೂಹಿಕವಾಗಿಯೇ ನಡೆಯುತ್ತಿದ್ದಿರಬೇಕು. ಅವನು ನಿರಂತರವಾದ ತಲೆಮಾರಿನಿಂದ ಪಾರಾಗಿ ತಾತ್ಕಾಲಿಕವಾಗಿಯಾದರು ನೀರು, ನೆರಳು ಕಂಡ ಕಡೆ ನೆಲೆಯೂರಿದ ನಂತರ ತಲೆಮಾರಿನ ಜನ ಬುಡಕಟ್ಟಿನ ಜನರಿಗಾಗಿ ಪರಿವರ್ತನೆಗೊಂಡ ಸಂದರ್ಭದಲ್ಲಿ ಜಾತ್ರೆಗಳು ಸರಳ ಮೂಲಾವಸ್ಥೆಯಲ್ಲಿ ಕಾಣಿಸಿಕೊಂಡಿರಬೇಕು.''[೪]

ಒಡಿಗ ಬುಡಕಟ್ಟು ಸಮುದಾಯವು ನಿಸರ್ಗದ ಮಡಿಲಿನಲ್ಲಿ ವಾಸಿಸುತ್ತಿರುವುದರಿಂದ ಅಲ್ಲಿ ನಿರಂತರವಾಗಿ ಶ್ರಮವಹಿಸಿ ದುಡಿಯಬೇಕು. ಇದರಿಂದ ವಿರಾಮ ಪಡೆದು ಸಂತೋಷದಿಂದಿರಲು ಸಮುದಾಯದವರು ಹಬ್ಬ, ಹರಿದಿನ, ಜಾತ್ರೆಗಳ ಆಚರಣೆಯಲ್ಲಿ ಪಾಲ್ಗೊಳ್ಳುತ್ತಾರೆ. ಈ ಸಮುದಾಯದಲ್ಲಿ ಹೊಸಬಟ್ಟೆಯ ಖರೀದಿ ಮಾಡುವುದು ತಮ್ಮ ಗುಡಿಸಲುಗಳಿಗೆ ಹಸಿರು ತೋರಣಗಳಿಂದ ಸಿಂಗರಿಸಿ ಜಾತ್ರೆಗಳಲ್ಲಿ ಸಾಮೂಹಿಕವಾಗಿ ಪಾಲ್ಗೊಂಡು ಸಂತೋಷ ಪಡುತ್ತಾರೆ. ಹಬ್ಬಗಳು ಒಂದು ಕುಟುಂಬಕ್ಕೆ ಸೀಮಿತವೆಂಬಂತೆ ಇರುತ್ತವೆ. ಜಾತ್ರೆಗಳನ್ನು ಸಾಮೂಹಿಕವಾಗಿ

ಆಚರಿಸುತ್ತಾರೆ. ಜಾತ್ರೆಗಳು ಸಾಮೂಹಿಕ ಆಚರಣೆಗೊಳ್ಳುವುದರಿಂದ ಇಲ್ಲಿ ಯಾರು ಕಟ್ಟು ಕಟ್ಟಳೆಗಳನ್ನು ಮೀರುವಂತಿಲ್ಲ. ಒಂದು ವೇಳೆ ಮೀರಿದರೆ ದಂಡ ಅಥವಾ ಆ ದೈವಗಳು ಕೋಪಗೊಂಡು ಶಿಕ್ಷೆ, ತೊಂದರೆಗಳನ್ನು ನೀಡುತ್ತವೆ ಎಂದು ಭಾವಿಸುತ್ತಾರೆ. ಈ ಜಾತ್ರೆಯು ಊರೊಟ್ಟಿನ ಜಾತ್ರೆಯಾಗಿರುವುದರಿಂದ ಎಲ್ಲಾ ಸಮುದಾಯದವರು ಸೇರಿ ಆಚರಿಸುತ್ತಾರೆ. ಆದರೆ ಈ ಜಾತ್ರೆಯನ್ನು ಇವರೇ ಆಚರಿಸುವುದರಿಂದ ಇಲ್ಲಿನ ಆಚರಣೆಗಳಲ್ಲಿ ಇವರೇ ಪ್ರಮುಖರಾಗಿರುತ್ತಾರೆ.

### ೫ : ೨ : ೧ ಭೈರವೇಶ್ವರ ಜಾತ್ರೆ (ಬಸವೇಶ್ವರ)

ದೀಪಾವಳಿಯ ಬಲಿಪಾಡ್ಯಮಿಯ ದಿನದಂದು ಬಸವೇಶ್ವರ ಅಥವಾ ಭೈರವೇಶ್ವರ ಜಾತ್ರೆಯನ್ನು ಒಡಿಗ ಬುಡಕಟ್ಟು ಸಮುದಾಯದವರು ಆಚರಿಸುತ್ತಾರೆ. ಇವರ ಜೊತೆ ಇತರ ಸಮುದಾಯದವರು ಸಹ ಈ ಜಾತ್ರೆಯಲ್ಲಿ ಪಾಲ್ಗೊಳ್ಳುತ್ತಾರೆ. ಸುತ್ತಲು ನೆಲೆಸಿರುವ ಒಡಿಗ ಸಮುದಾಯದವರೆಲ್ಲರ ಸಮ್ಮುಖದಲ್ಲಿ ದೊಡ್ಡಬೈರನ ಕುಪ್ಪೆಯ ಬಸವೇಶ್ವರನ ದೇವಸ್ಥಾನದ ಬಳಿ ಜಾತ್ರೆ ನೆಡೆಯುತ್ತದೆ. ಇಂದು ಇದೇ ಸಮುದಾಯವು ಕಬಿನಿ ಹೊಳೆಯ ಆಚೆ ಗಂಡತ್ತೂರಿನಲ್ಲಿ ನೆಲೆಗೊಂಡಿದ್ದು, ಅಲ್ಲಿಯೂ ಸಹ ಅಂದೇ ಭೈರವೇಶ್ವರನ ಜಾತ್ರೆಯನ್ನು ಆಚರಿಸುತ್ತಾರೆ.

ಸಮುದಾಯದವರು ಜಾತ್ರೆಯ ದಿನ ಬೆಳಗಿನಜಾವ ಸುಮಾರು ಐದು ಗಂಟೆಗೆ ಕೊಟ್ಟಿಗೆಗಳಿಂದ ತಮ್ಮ ದನಕರುಗಳನ್ನು ಮೇಯಲು ಹೊರಗಡೆ ಬಿಟ್ಟು ಒಂಭತ್ತು ಗಂಟೆಗೆ ಅವುಗಳನ್ನು ತಂದು ಕೊಟ್ಟಿಗೆಯಲ್ಲಿ ಕೂಡಿ ಹಾಕುತ್ತಾರೆ. ಹಿರಿಯರು, ಮಕ್ಕಳು, ಅವುಗಳನ್ನು ಹೊಳೆಯ ಹತ್ತಿರ ಕರೆದುಕೊಂಡು ಹೋಗಿ ಮೈ ತೊಳೆದುಕೊಂಡು ಬರುತ್ತಾರೆ. ಅವುಗಳಿಗೆ ಗಂಟೆ-ಕೊಂಬುಗಳಿಗೆ ಬಣ್ಣ ಬಳಿದು ಮೈಮೇಲೆ ಬಣ್ಣದ ವಸ್ತ್ರಗಳನ್ನು ಹಾಕಿ ಸಿಂಗರಿಸುತ್ತಾರೆ. ಅಂದು ಮನೆಯಲ್ಲಿಯೂ ಜಾತ್ರೆಯ ಸಂಭ್ರಮ ತುಂಬಿರುತ್ತದೆ. ಹಿರಿಯರು, ಮಕ್ಕಳು, ಎಲ್ಲರೂ ಮಡಿಯುಟ್ಟು ಮನೆಯನ್ನು ಮಾವಿನಸೊಪ್ಪು, ತಳಿರುತೋರಣಗಳಿಂದ ಸಿಂಗರಿಸಿರುತ್ತಾರೆ. ಮನೆಯಲ್ಲಿ ಹೋರಿಗಳಿಗೆ ಪೂಜೆ ಸಲ್ಲಿಸಿ ಅವುಗಳನ್ನು ಭೈರವೇಶ್ವರ ದೇವಸ್ಥಾನದ ಹತ್ತಿರ ಹೊಡೆದುಕೊಂಡು ಹೋಗುತ್ತಾರೆ. ಅಂದು ಸುತ್ತಲಿನ ಊರುಗಳಿಂದ ಆನೆಮೊಳ, ಮಚ್ಚೂರು, ದೊಡ್ಡಬೈರನಕುಪ್ಪೆಯವರು, ಚಿಕ್ಕಬೈರನಕುಪ್ಪೆ, ಕಡೇಗದ್ದೆ, ಬಾವಲಿ, ವಡಕನ ಮೊಳ, ತಿಮ್ಮನಿಹೊಸಹಳ್ಳಿ ಊರಿನ ಎಲ್ಲರೂ ತಮ್ಮ ಹೋರಿಗಳನ್ನು ಸಿಂಗರಿಸಿಕೊಂಡು ಬಂದಿರುತ್ತಾರೆ.

ಅಂದು ಭೈರವೇಶ್ವರ ಪೂಜೆಗೆ ಎರವರು ಬಣ್ಣ ಬಳಿದು ವೇಷಗಾರರಂತೆ ನರ್ತಿಸುತ್ತಾ ಬರುತ್ತಾರೆ. ಅಲ್ಲಿ ವಾಸಿಸುತ್ತಿರುವ ಕೇರಳ ಮೂಲದ ಹೆಣ್ಣುಮಕ್ಕಳು ಕಳಸಗಳನ್ನು ಹೊತ್ತು ವಾದ್ಯಗಳ ಸಮೇತವಾಗಿ ನರ್ತಿಸುತ್ತ ಬಂದು ದೇವರಿಗೆ ಪೂಜೆ ಸಲ್ಲಿಸಿಕೊಂಡು ಹೋಗುತ್ತಾರೆ. ಇತರೆ ಸಮುದಾಯದವರು ಸಹ ಜಾತ್ರೆಯಲ್ಲಿ ಪಾಲ್ಗೊಂಡಿರುತ್ತಾರೆ. ದೇವರ ಗುಡಿಯ ಹತ್ತಿರ ಹೋರಿಗಳನ್ನು ಹೊಡೆದುಕೊಂಡು ಬಂದಿರುತ್ತಾರೆ. ಒಂದೊಂದು ಊರಿನವರು ಒಂದೊಂದು ಕಡೆ ನಿಲ್ಲಿಸಿ ಬಸವೇಶ್ವರನಿಗೆ ಪೂಜೆಯನ್ನು ಸಲ್ಲಿಸುತ್ತಾರೆ. ಬಸವೇಶ್ವರನ ಪೂಜೆಗೆ ವೈಷ್ಣವರನ್ನು ಈ ಸಮುದಾಯದವರೇ ನೇಮಿಸಿದ್ದಾರೆ. ಜಾತ್ರೆಗೆ ಅಂಗಡಿ, ಮಳಿಗೆಗಳು ಸೇರಿರುತ್ತವೆ. ಹೆಂಗಸರು ಮಕ್ಕಳು ಎಲ್ಲರು ಸಂಭ್ರಮದಿಂದ ಜಾತ್ರೆಯಲ್ಲಿ ಪಾಲ್ಗೊಂಡಿರುತ್ತಾರೆ.

ಪೂಜೆಯ ನಂತರ ಒಡಿಗ ಸಮುದಾಯದವರು ಹೋರಿಗಳನ್ನು ಬಸವೇಶ್ವರ ದೇವಸ್ಥಾನದ ಮುಂದೆ ಒಂದೊಂದು ಊರಿನವರು ಒಂದೊಂದು ಸಾರಿ ಪ್ರತ್ಯೇಕವಾಗಿ ಓಡಿಸುತ್ತಾರೆ. ಹೋರಿಗಳನ್ನು ಓಡಿಸುವಾಗ ಅವುಗಳ ಮೇಲೆ ಕುಳಿತುಕೊಂಡು ಓಡಿಸುತ್ತಾರೆ. ಎಲ್ಲ ಊರಿನವರು ಹೋರಿಗಳನ್ನು ಓಡಿಸಿದ ಬಳಿಕ ಬಸವೇಶ್ವರನಿಗೆ ಪೂಜೆ ನಡೆಯುತ್ತದೆ.

ಗಂಡತ್ತೂರಿನಲ್ಲಿಯೂ ಸಹ ಇದೇ ಮಾದರಿಯಲ್ಲಿ ಬಸವೇಶ್ವರನ ಜಾತ್ರೆಯನ್ನು ಆಚರಿಸುತ್ತಾರೆ.

## Huri Habba

The people of Birakoppa has celebrated ox festival there on tyrical style it is the festival odarous Gowda community. "This people migrated from "chitradurga" to the banks of Kabini river decades ago.

They do the festival to please their Gods like Basaveshwara. Bireshwara and to experence their thanks to these good things happend to them. Oxen are Gods of them.

on his day oxen are decorated with bells. Garlends and taken to Birakoppa. oxen are taken from places like Aneamala, Bavali, Tirunalli, Hosahalli, Machur.

The pooja started at 9.Am.in Bireshwara temple the oxen are taken to the temple complex and special pooja has done after that the oxen have run to the Bireshwara temple the owner of the oxen has climbed upon it live a person travel on horse. The festival is closed after the ox reached the Bireshwara temple.

ಈ ಲೇಖನವು ಮಲೆಯಾಳಂ ದಿನಪತ್ರಿಕೆಯಾದ ''ಮಲೆಯಾಳಿ ಮನೋರಮ''ದಲ್ಲಿ ಈ ಜಾತ್ರೆಯ ಕುರಿತು ಪ್ರಕಟವಾಗಿತ್ತು.

(ದಿನಪತ್ರಿಕೆ : ಮಲೆಯಾಳಿ ಮನೋರಮ : ೨೮-೧೦-೨೦೦೦.)

೫ : ೨ : ೨ ಚಟ್ನಳ್ಳಿ ಚಾಮುಂಡಿ, ಗೋನಹಳ್ಳಿ ಮಸನಿ ಸಮುದಾಯದ ಪ್ರಮುಖ ಶಕ್ತಿ ದೈವಗಳು. ಸಮುದಾಯದವರೆಲ್ಲರೂ ಸೇರಿ ತಿರುನಳ್ಳಿಯ ಆದಂಡ ಎಂಬಲ್ಲಿ ನೆಲೆಸಿರುವ ಈ ಶಕ್ತಿ ದೈವಗಳ ಜಾತ್ರೆಯನ್ನು ಮಾರ್ಚ ತಿಂಗಳ (ಕುಂಭಮಾಸ)ದಲ್ಲಿ ಆಚರಿಸುತ್ತಾರೆ. ಕಷ್ಟ-ನಷ್ಟಗಳು ಬಂದಾಗ ದೈವಗಳನ್ನು ನೆನೆದು ಹರಕೆ ಹೊತ್ತು ನಮ್ಮ ಕಷ್ಟಗಳು ದೂರವಾಗಲಿ ನಿನ್ನ ಸನ್ನಿಧಿಗೆ ಬಂದು ಪೂಜೆ ಸಲ್ಲಿಸಿಕೊಂಡು ಹೋಗುತ್ತೇವೆ ಎಂದು ಹರಕೆ ಹೊತ್ತವರು ಅಂದು ಚಾಮುಂಡಿ ದೇವಿಗೆ ಆಡು, ಕೋಳಿ, ಹಂದಿಗಳನ್ನು ಬಲಿ ಕೊಟ್ಟು ಪೂಜೆ ಸಲ್ಲಿಸಿದರೆ ಮಸನಿ ಹಾಗೂ ಮೇಲ್‌ದೈಯ್ಯಗಳಿಗೆ ಹೂವು, ಹಣ್ಣು, ಕಾಯಿಗಳಿಂದ ಪೂಜೆ ಸಲ್ಲಿಸುತ್ತಾರೆ.

ಜಾತ್ರೆಯ ದಿನವನ್ನು ಸಮುದಾಯದ ಹಿರಿಯರು ಸೇರಿ ನಿರ್ಧರಿಸುತ್ತಾರೆ. ಜಾತ್ರೆಯ ದಿನದಂದು ಐದು ಜನ ಹಿರಿಯರು ಉಪವಾಸವಿದ್ದು ಮಸನಿ ಹಾಗೂ ಮೇಲ್‌ದೈಯ್ಯ ದೇವರ ಗುಡಿಗಳಿಗೆ ಸುಣ್ಣ ಬಳಿದು ಸುತ್ತಲು ಮಾವಿನ ತೋರಣದಿಂದ ಅಲಂಕರಿಸಿ, ಸ್ವಚ್ಛಗೊಳಿಸಿ ಬರುತ್ತಾರೆ. ಸಂಜೆಯ ವೇಳೆಗೆ ಆ ಐದು ಜನರು ಸ್ನಾನ ಮಾಡಿ, ಮಡಿ ಬಟ್ಟೆಯುಟ್ಟು ಮಸನಿ ಹಾಗೂ ಮೇಲ್‌ದೈಯ್ಯಕ್ಕೆ ತಾಳಿ, ಒಡವೆಗಳಿಂದ ಸಿಂಗರಿಸಿ ಹೂವು, ಹಣ್ಣುಕಾಯಿಗಳಿಂದ ಪೂಜಿಸುತ್ತಾರೆ. ಅವರಲ್ಲಿ ಒಬ್ಬರಿಗೆ ಆವೇಶ ಬಂದು ಸಮುದಾಯದ ಬಗ್ಗೆ ಕುರಿತು ಹೇಳುತ್ತಾರೆ. ಬಂದಿರುವ ಸಮುದಾಯದ ಜನರು ಕಷ್ಟಗಳಿಗೆ ನಿವಾರಣೆಯ ರೀತಿಯನ್ನು ಕೇಳಿಕೊಳ್ಳುತ್ತಾರೆ. ಎಲ್ಲರಿಗೂ ಹೂ. ಹಣ್ಣುಗಳ ಪ್ರಸಾದವನ್ನು ನೀಡುತ್ತಾರೆ. ಬಂದಿರುವ ಭಕ್ತಾದಿಗಳಿಗೆ ಊಟೋಪಚಾರ ನಡೆಯುತ್ತದೆ.

ಮಾರನೆಯ ದಿನ ಬೆಳಿಗ್ಗೆ ಮಸನಿ ಹಾಗೂ ಮೇಲ್‌ದೈಯ್ಯಗಳನ್ನು ದೇವರ ಗುಡಿಯ ಹತ್ತಿರ ಕರೆದುಕೊಂಡು ಹೋಗುತ್ತಾರೆ. ಅಲ್ಲಿ ಪೂಜೆ ಸಲ್ಲಿಸಿ ಅಲ್ಲಿಯೂ ಪೂಜಾರಿಗಳ ಮೇಲೆ ಮತ್ತೆ ಆವೇಶ ಬರುತ್ತದೆ. ಅಲ್ಲಿ ಮಕ್ಕಳಾಗದೆ ಇರುವವರು, ಮದುವೆಯಾಗದೆ ಇರುವವರು, ಕಾಯಿಲೆಯಿಂದ ನರಳುವವರು ಮುಂತಾದವರು ತಮ್ಮ ನೋವುಗಳನ್ನು ದೇವರ ಹತ್ತಿರ ಕೇಳುತ್ತಾರೆ. ಅವರಿಗೆ ಒಂದು ತೆಂಗಿನ ಕಾಯಿಯನ್ನು ನೀಡಿ ನಿಮ್ಮ ತೊಂದರೆ ದೂರವಾಗುವುದು. ನೀವು ಚಾಮುಂಡಿ ತಾಯಿಗೆ ಆಡು-ಕೋಳಿ, ಹಂದಿಯನ್ನು ಅರ್ಪಿಸಿ ತಾಯಿಗೆ ಸಂತೋಷಪಡಿಸಿ ಎಂದು ಅವರಿಗೆ ಹೇಳಿ ತೀರ್ಥ ಪ್ರಸಾದವನ್ನು ನೀಡುತ್ತಾರೆ. ನಂತರ ದೇವಾಲಯದ ಸುತ್ತ ಮೂರು ಬಾರಿ ಪ್ರದಕ್ಷಿಣೆ ಹಾಕಿ ಆವೇಶ ಬಂದಿರುವವರು ಮೊದಲು ದೇವರ ಗುಡಿಯ ಬಾಗಿಲಿನಲ್ಲಿ ಕಾಯಿ ಹೊಡೆಯುತ್ತಾರೆ. ಅವರ ಹಿಂದೆ ದೈವದಿಂದ ತೆಂಗಿನ ಕಾಯಿ ಪಡೆದವರೆಲ್ಲರೂ ಕಾಯಿ ಹೊಡೆಯುತ್ತಾರೆ. ಈ ಕಾಯಿ ಹೊಡೆಯದೆ ಹೋದರೆ ಅವನು ತಪ್ಪು ಮಾಡಿದ್ದಾನೆ. ಅದಕ್ಕೆ ಕಾಯಿ ಹೊಡೆಯಲಿಲ್ಲ ಎಂದು ಹೇಳುತ್ತಾರೆ.

ಮಸನಿ ಹಾಗೂ ಮೇಲ್‌ದೈಯ್ಯದ ಪೂಜೆಯ ನಂತರ ಚಾಮುಂಡಿ ದೇವಿಯ ಗುಡಿಯ ಹತ್ತಿರ ಬಂದು ಅಲ್ಲಿಯೂ ದೇವಾಲಯದ ಸುತ್ತ ಶುದ್ಧಗೊಳಿಸಿ ಚಪ್ಪರಹಾಕಿ, ಮಾವಿನಸೊಪ್ಪುಗಳನ್ನು ಕಟ್ಟಿ ಸಿಂಗರಿಸಿರುತ್ತಾರೆ. ಈ ದೇವಿಗ ಪ್ರಾಣಿಗಳನ್ನು ಬಲಿ ಕೊಡುವುದು. ಹರಕೆ ಹೊತ್ತು ಬಂದಿರುವ ಭಕ್ತಾಧಿಗಳು ತಾವು ತಂದಿರುವ ಹರಕೆಯನ್ನು ದೇವಿಗೆ ಅರ್ಪಿಸುತ್ತಾರೆ. ಕೋಳಿ, ಕುರಿ, ಮೇಕೆ, ಹಂದಿ, ಪ್ರಾಣಿಗಳನ್ನು ಬಲಿ ನೀಡಿ ದೇವಿಗೆ ಪೂಜೆ ಸಲ್ಲಿಸುತ್ತಾರೆ. ಚಾಮುಂಡಿ ತಾಯಿಗೆ ಆವೇಶ ಬಂದು ''ಮಲೆ.ಕುರುಬ'' ನನ್ನ ದೇವರ ಹತ್ತಿರ ಹೋಗಿ ಪೂಜೆ ಸಲ್ಲಿಸಿ ಬಾ ನಿನಗೆ ತೊಂದರೆ ಯಾಗುವುದಿಲ್ಲ ಎಂದು ಹೇಳುತ್ತದೆ. ಮಲೆ ಕುರುಬ ಸಮುದಾಯದ ಒಬ್ಬ ವ್ಯಕ್ತಿ ಮಸನಿ ಹಾಗೂ ಮೇಲ್‌ದೈಯ್ಯವ ದೇವಸ್ಥಾನ ಹತ್ತಿರ ಹೋಗಿ ಪೂಜೆಸಲ್ಲಿಸಿ ಬರುತ್ತಾರೆ. ಈ ಜಾತ್ರೆಗೆ ''ಮಲೆ ಕುರುಬ ಬುಡಕಟ್ಟು'' ಸಮುದಾಯದ ಒಬ್ಬ ವ್ಯಕ್ತಿಯಾದರೂ ಬಂದು ದೈವಗಳಿಗೆ ಪೂಜೆಯನ್ನು ಸಲ್ಲಿಸಿಕೊಂಡು ಹೋಗುವ ಪದ್ಧತಿಯಿದೆ.

ಚಾಮುಂಡಿ ದೇವಿಯ ಪೂಜೆಯ ನಂತರ ಕೋಳಿಗಳನ್ನು ಒಂದು ಕಡೆ, ಮೇಕೆ ಕುರಿಗಳನ್ನು ಒಂದು ಕಡೆ, ಹಂದಿಗಳನ್ನು ಒಂದು ಕಡೆ ಪ್ರತ್ಯೇಕವಾಗಿ ತಯಾರಿಸಿ ಬಂದಿರುವಂತಹ ಭಕ್ತಾದಿಗಳಿಗೆಲ್ಲಾ ಪಂಕ್ತಿ ಭೋಜನ ನಡೆಯುತ್ತದೆ.

## ಅಡಿ ಟಿಪ್ಪಣಿಗಳು

೧ Encyclopeadia Britanica : Vol, 19 : 1964

೨ ಭದ್ರಾಪೂರ ಎಸ್. ಎಸ್. : ಜೋಕುಮಾರ : ಜಾನಪದ ಸಾಹಿತ್ಯ ದರ್ಶನ (ಭಾಗ-೧೦) ಕನ್ನಡ ಅಧ್ಯಯನ ಪೀಠ : ಕರ್ನಾಟಕ ವಿಶ್ವವಿದ್ಯಾಲಯ : ಧಾರವಾಡ : ೧೯೮೭.

೩ ದೇ. ಜವರೇಗೌಡ : ಜಾನಪದ ಅಧ್ಯಯನ : ಡಿ.ವಿ.ಕೆ. ಮೂರ್ತಿ : ಕೃಷ್ಣಮೂರ್ತಿ ಪುರಂ : ಮೈಸೂರು : ೧೯೭೬.

೪ ದೇ. ಜವರೇಗೌಡ : ಜಾತ್ರೆಗಳು : (ಜಾನಪದ ವಾಹಿನಿ): ಡಿ.ವಿ.ಕೆ. ಮೂರ್ತಿ ಕೃಷ್ಣಮೂರ್ತಿಪುರಂ: ಮೈಸೂರು : ೧೯೮೬.

## ಅಧ್ಯಾಯ - ೬

# ಭಾಷೆ, ಸಾಹಿತ್ಯ, ಕಲೆ

## ಪ್ರವೇಶ

## ಪ್ರವೇಶ

ಮನುಷ್ಯ ಮತ್ತು ಭಾಷೆಯ ನಡುವೆ ಅತ್ಯಂತ ನಿಕಟವಾದ ಸಂಬಂಧವಿದೆ. ಮನುಷ್ಯರ ಒಟ್ಟು ಸಾಮಾಜಿಕ ಬದುಕಿಗೆ ಭಾಷೆಯು ಒಂದು ಸಮರ್ಥ ಮಾಧ್ಯಮ. ಭಾಷೆಯಿಲ್ಲದಿದ್ದರೆ ಸಾಮಾಜಿಕ ಜೀವನ ಸಾಧ್ಯವಿರಲಿಲ್ಲ. ಸಮುದಾಯಗಳ ಸಮೂಹ ಪ್ರಜ್ಞೆಯು ಆರಂಭವಾದುದೇ ಸಂಕೇತಗಳ ಮೂಲಕ ಆರಂಭದ ಈ ಸಾಂಕೇತಿಕ ಭಾಷೆಯು ಮೌನವಾಗಿದ್ದುಕೊಂಡೇ ಸಮುದಾಯಗಳು ಭಾವನೆಗಳನ್ನು ಹಂಚಿಕೊಳ್ಳುತ್ತಿದ್ದವು. ಮುಂದೆ ಹಲವಾರು ಕೂಗು ಇತ್ಯಾದಿಗಳಿಂದ ಭಾಷೆಯು ರೂಪ ಪಡೆಯಿತು. ಈ ಭಾಷೆಯು ಜಗತ್ತಿನಾದ್ಯಂತ ಒಂದೇ ಬಗೆಯಾಗಿರದೇ, ಆಯಾ ಭೌಗೋಳಿಕ ಪರಿಸರಕ್ಕೆ ತಕ್ಕಂತೆ ಭಿನ್ನತೆಯನ್ನು ಪಡೆದುಕೊಂಡಿತು. ಭಾಷೆಯ ಪದಪುಂಜಗಳು ಮತ್ತು ಅವುಗಳ ಉಚ್ಚಾರಣಾ ರೂಪಗಳು ಭಿನ್ನವೆಂದು ತೋರಿದರೂ ಸಾಮಾಜಿಕ ಒಪ್ಪಂದದ ಮೂಲಕ ಅರ್ಥವ್ಯಾಪ್ತಿಯಲ್ಲಿ ಎಲ್ಲವೂ ಏಕರೂಪತೆಯನ್ನು ಪಡೆದುಕೊಂಡವು. ಭೌಗೋಳಿಕ ಪರಿಸರವನ್ನು ಅವಲಂಬಿಸಿದ ಭಾಷೆಯು ಆಯಾ ಸಮುದಾಯಗಳ ಸಂಸ್ಕೃತಿಯನ್ನೂ ಪ್ರತಿಬಿಂಬಿಸುತ್ತವೆ. ಸಂಸ್ಕೃತಿಯನ್ನು ಭಾಷೆಯು ಯಾವಾಗಲೂ ಹೊತ್ತು ತರುತ್ತಿರುತ್ತದೆ. ಅಂದರೆ ಮನುಷ್ಯನ ಪ್ರತಿಯೊಂದು ಆಗುಹೋಗುಗಳು ಭಾಷೆಯ ಮುಖಾಂತರವೇ ನಡೆಯುತ್ತವೆ. ''ಭಾಷೆಯೆಂಬ ಜ್ಯೋತಿಯು ಬೆಳಗದಿದ್ದರೆ ಇಡೀ ಜಗತ್ತೆಲ್ಲಾ ಕತ್ತಲೆಯಲ್ಲಿ ಮುಳುಗುತ್ತಿತ್ತು'' ಎಂದು ದಂಡಿಯೆಂಬ ಮೀಮಾಂಸಕ ಹೇಳುತ್ತಾನೆ. ಆದ್ದರಿಂದ ಒಂದು ಸಂಸ್ಕೃತಿಯ ರೂಪಿಕೆ ಹಾಗೂ ವಿಕಾಸವು ಆಯಾ ಭಾಷೆಯಲ್ಲಿ ಸಂರಕ್ಷಿಸಿಕೊಂಡು ಬಂದಿರುತ್ತದೆಂಬುದನ್ನು ಗಮನಿಸಬಹುದು. ಈ ದೃಷ್ಟಿಯಿಂದ ಭಾಷೆಗೆ ಅತ್ಯಂತ ಮಹತ್ವವಿದೆ.

ಒಂದೊಂದು ಸಮುದಾಯಗಳು ತಮ್ಮದೇ ಆದಂತಹ ವಿಶಿಷ್ಟ ಸಂಸ್ಕೃತಿಯೊಂದಿಗೆ ವಿಶಿಷ್ಟವಾದಂತಹ ಭಾಷಿಕ ಚಹರೆಯನ್ನು ಹೊಂದಿರುತ್ತವೆಯೆಂಬುದನ್ನು ಜಗತ್ತಿನಾದ್ಯಂತ ಇರುವ ಬುಡಕಟ್ಟು ಸಮುದಾಯಗಳಿಂದಲೇ ಗುರುತಿಸಬಹುದು. ಮುಖ್ಯವಾಗಿ ಬುಡಕಟ್ಟು ಸಮುದಾಯಗಳು ಅರಣ್ಯದಲ್ಲಿ ವಾಸಿಸುವುದರಿಂದ ಅವರ ಭಾಷೆಯು ಮೂಲಭಾಷೆಯನ್ನು ಯಥಾವತ್ತಾಗಿ ಕಾಪಾಡಿಕೊಂಡು ಬಂದಿರುತ್ತದೆ. ಇತರೆ ನಾಗರಿಕ ಸಮಾಜದಲ್ಲಿರುವ ಭಾಷೆಯಂತೆ ಎರವಲು, ಸ್ವೀಕರಣ ಮುಂತಾದ ಭಾಷಿಕ ಪ್ರಭಾವಕ್ಕೆ ಒಳಗಾಗಿರುವುದಿಲ್ಲ. ಈ ಕಾರಣದಿಂದಲೇ ಬುಡಕಟ್ಟು ಸಮುದಾಯಗಳು ತಮ್ಮ ಸಂಸ್ಕೃತಿ ಮತ್ತು ಭಾಷೆಯನ್ನು ಇದ್ದ ಹಾಗೆಯೇ ಉಳಿಸಿಕೊಂಡು ಬಂದಿವೆ. ಇದಕ್ಕೆ ಭೌಗೋಳಿಕ ವಲಯವೂ ಕಾರಣವಾಯಿತು. ಅನೇಕ ಬುಡಕಟ್ಟು ಸಮುದಾಯಗಳು ಮಾತನಾಡುವ ಭಾಷೆಗೆ ಲಿಪಿಯಿರುವುದಿಲ್ಲ. ಅವು ಕೇವಲ ವಾಗ್‌ರೂಪದಲ್ಲಿರುತ್ತವೆ. ಜೊತೆಗೆ ಯಾವುದೋ ಭಾಷೆಯ ಮೂಲಕ ಲಿಪಿಗೊಳ್ಳುತ್ತಿರುವುದು ಇವತ್ತಿನ ವಿದ್ಯಾಮಾನವೆನ್ನಬಹುದು. ಹೀಗೆ ಬುಡಕಟ್ಟು ಸಮುದಾಯಗಳ ಭಾಷೆಯು ಮೌಖಿಕ ಪರಂಪರೆಯನ್ನು ಬಹು ನಿಷ್ಠತೆಯಿಂದ ಮುಂದುವರೆಸುತ್ತಿರುತ್ತವೆ.

ಒಡಿಗರು ಮೂಲತಃ ಚಿತ್ರದುರ್ಗ ಪರಿಸರದಿಂದ ಬಂದು ಮೈಸೂರು-ವೈನಾಡು ಜಿಲ್ಲೆಗಳ ಗಡಿ ಪರಿಸರದಲ್ಲಿ ವಾಸಿಸುತ್ತಿದೆ. ಇದರಿಂದ ಒಡಿಗರ ಮಾತೃಭಾಷೆಯು ಕನ್ನಡವೇ ಆಗಿದೆ. ಇವರಿಗೆ ಯಾವುದೇ ಪ್ರತ್ಯೇಕ ಭಾಷೆಯು ಇರುವುದಿಲ್ಲ. ಇವರು ಇರುವುದೇ ಅತ್ಯಂತ ಕಡಿಮೆ ಜನಸಂಖ್ಯೆಯಾದ್ದರಿಂದ ಎಲ್ಲರೂ ಕನ್ನಡ ಭಾಷೆಯನ್ನೇ ಆಡುತ್ತಾರೆ.

ಕೇರಳದ ಗಡಿಭಾಗದಲ್ಲಿರುವವರು ಸ್ವಲ್ಪ ಮಟ್ಟಿಗೆ ಮಲೆಯಾಳಿ ಭಾಷೆಯನ್ನು ಆಡುತ್ತಾರೆ. ಕೇರಳ-ಕರ್ನಾಟಕದ ಗಡಿಭಾಗಗಳಲ್ಲಿರುವುದರಿಂದ ಇವರು ಮುಖ್ಯವಾಗಿ ದ್ವಿಭಾಷಿಕರು. ಕಾರಣ ಇವರ ಮಾತೃಭಾಷೆಯಾದ ಕನ್ನಡದಲ್ಲಿ ಮಲೆಯಾಳಿ ಭಾಷೆಯ ಪ್ರಭಾವವು ಇರುವುದು ಸಹಜವೇ ಆಗಿದೆ. ಒಟ್ಟಾರೆ ಇವರ ಮಾತೃಭಾಷೆ ಕನ್ನಡ. ಆದರೂ ಶಿಷ್ಟ ಪ್ರಾಮಾಣಿಕ ಕನ್ನಡಕ್ಕಿಂತ ಇವರ ಕನ್ನಡವು ಉಚ್ಚಾರಣೆ ಹಾಗೂ ಕೆಲವು ಪದಜಾಲದಲ್ಲಿ ವೈವಿಧ್ಯತೆಯಿದೆ. ಆದ್ದರಿಂದ ಇವರ ಕನ್ನಡವನ್ನು ''ಒಡಿಗ ಕನ್ನಡ'' ಎಂದು ಒಂದು ಸಾಮಾಜಿಕ ಉಪಭಾಷಾ ಪ್ರಬೇಧವಾಗಿ ಗುರುತಿಸಬಹುದಾಗಿದೆ. ಒಡಿಗ ಕನ್ನಡದ ಕೆಲವು ಭಾಷಿಕ ಅಂಶಗಳನ್ನು ಸಂಕ್ಷಿಪ್ತವಾಗಿ ಹೀಗೆ ತಿಳಿಯಬಹುದು.

**೬ : ೧ ಸಂಬೋಧನಾ ರೂಪಗಳು (ನಿಯಮಗಳು)**

ಒಡಿಗ ಸಮುದಾಯದ ಮಾತೃಭಾಷೆ ಕನ್ನಡ. ಕೆಲವರು ಮಲೆಯಾಳಿ ಭಾಷೆಯನ್ನು ಮಾತನಾಡುತ್ತಾರೆ. ಒಟ್ಟಾರೆ ಇವರು ದ್ವಿಭಾಷಿಕರು. ಒಡಿಗರು ದ್ವಿಭಾಷಿಕರಾಗಿದ್ದರಿಂದಲೇ ಇವರು ಮಾತನಾಡುವಾಗ ಧ್ವನಿ, ಪದ, ವಾಕ್ಯಗಳ ಉಚ್ಚರಣಾ ನಿಯಮಗಳಲ್ಲಿ ಕೊಂಚ ಭಿನ್ನ ರೂಪವಿರುವುದನ್ನು ಅವರ ಮಾತುಗಳಿಂದ ಕಂಡುಕೊಳ್ಳಲಾಗಿದೆ. ಮುಖ್ಯವಾಗಿ ಅವರು ಮಾತನಾಡುವಾಗ ಅವರು ಬಳಸುವ ಭಾಷೆಯ ಓಘ ಕಡಿಮೆ. ಬದಲಾಗಿ ನಿಧಾನವಾಗಿ ರಾಗವನ್ನೆಳೆದು ಮಾತನಾಡುತ್ತಾರೆ. ಬಹುಶಃ ಈ ರಾಗ ಎಳೆಯುವ ರೀತಿಯನ್ನು ಗಮನಿಸಿದರೆ ಮಲೆಯಾಳಿ ಭಾಷೆಯ ವಾಚಿಕ ಪ್ರೇರಣೆಯನ್ನು ಪಡೆದಿದ್ದಾರೆಂಬುದನ್ನು ಗುರುತಿಸಲು ಸಾಧ್ಯವಿದೆ. ಇವರು ಮಾತನಾಡಿಸುವಾಗ ''ಓ...ಯ್'' ಎಂದು ಜೋರಾಗಿ ಕರೆಯುತ್ತಾರೆ. ವ್ಯಕ್ತಿಯು ದೂರವೇ ಇರಲಿ, ಹತ್ತಿರವೇ ಇರಲಿ ಮಾತನಾಡಿಸಿ ಕೂಗುವಾಗ ''ಹೊ...ಹೊಯ್ಞ್'' ಎಂದು ಕೂಗುತ್ತಾರೆ. ಈ ಸಂಬೋಧನೆ ರೂಪಗಳೊಂದಿಗೆ ಪರಸ್ಪರರು ಸಮುದಾಯದಲ್ಲಿ ಮಾತಿಗೆ ಆರಂಭಿಸುತ್ತಾರೆ.

ಒಡಿಗ ಬುಡಕಟ್ಟು ಸಮುದಾಯವು ತಮ್ಮ ''ಒಡಿಗ ಕನ್ನಡ'' ದಲ್ಲಿ ದಿನನಿತ್ಯದಲ್ಲಿ ರೂಪಿಸಿಕೊಂಡ ಕೆಲವು ವಸ್ತು-ವಿಷಯಗಳ ಭಾಷಿಕ ಸಂರಚನೆಯನ್ನು ಇಲ್ಲಿ ಸಂಕ್ಷಿಪ್ತವಾಗಿ ಪಟ್ಟಿಮಾಡಬಹುದು.

**೬ : ೧ : ೧ ಕೌಟುಂಬಿಕ ವಲಯ**

ಯಾವುದೇ ಸಮುದಾಯವು ತನ್ನ ಭಾಷೆಯೊಂದಿಗೆ ಹಲವಾರು ಬಗೆಯಲ್ಲಿ ತನ್ನದೇ ರೀತಿಯಲ್ಲಿ ಪ್ರತಿಕ್ರಿಯಿಸುತ್ತಿರುತ್ತದೆ. ಅಂತೆಯೇ ಒಡಿಗ ಸಮುದಾಯವು ದಿನನಿತ್ಯ ತನ್ನ ಕೌಟುಂಬಿಕ ವಲಯದಲ್ಲಿ ತಮ್ಮ ಸಂಬಂಧಿಕರನ್ನು, ಕೆಲವು ಹೆಸರುಗಳನ್ನು ಕರೆಯುತ್ತಾರೆ. ಅಂತಹ ಕೆಲವು ಮಾದರಿಗಳು ಇಲ್ಲಿವೆ.

| ಶಿಷ್ಟ ಅಥವಾ ಪ್ರಮಾಣಿತ ಕನ್ನಡ | ಒಡಿಗ ಕನ್ನಡ |
|---|---|
| ಅಜ್ಜಿ | ಅಮ್ಮ |
| ಅಮ್ಮ | ಅವ್ವ |

| | |
|---|---|
| ಚಿಕ್ಕಮ್ಮ | ತಾಯೇ |
| ಚಿಕ್ಕಪ್ಪ | ಅಯ್ಯ |
| ಅಪ್ಪ | ಯಪ್ಪ |
| ಹೆಂಡತಿ | ಹೆಡತ್ತಿ |

ಎಂಬಲ್ಲಿ ಪ್ರಮಾಣಿತ ರೂಪ ಕನ್ನಡ ಭಾಷೆಯ ಸಂಬಂಧ ರೂಪಗಳಿಂದ ಭಿನ್ನವಾಗಿರುವುದನ್ನು ಗುರುತಿಸಬಹುದು. ಚಿಕ್ಕಮ್ಮ ಎಂಬ ರೂಪ 'ತಾಯೇ' ಎಂಬುದಾಗಿ ವಿಶೇಷವಾಗಿ ರೂಢಿಯಲ್ಲಿದೆ. ಅದರಂತೆ ಚಿಕ್ಕಪ್ಪ ಎಂಬ ರೂಪ 'ಐಯ್ಯ' ಎಂಬುದಾಗಿ ಬಳಕೆಯಾಗುತ್ತಿದೆ. ಹೆಂಡತಿ ಎಂಬ ಸಬಿಂದು ರೂಪ 'ಹೆಡತ್ತಿ' ಎಂದು ಅಬಿಂದುಕವಾಗಿ ಅಂತ್ಯಾಕ್ಷರ ದ್ವಿತ್ವವಾಗಿದೆಯೆಂಬುದು ಮುಖ್ಯವಾಗಿದೆ.

**೬ : ೧ : ೨ ಮಾನವನ ಅವಯವಗಳು**

| ಶಿಷ್ಟ/ಪ್ರಮಾಣಿತ ಕನ್ನಡ | ಒಡಿಗ ಕನ್ನಡ |
|---|---|
| ತಲೆ | ತಲಿ |
| ಕಣ್ಣು ರೆಪ್ಪೆ | ಕನ್ನುಪೆಕ್ಕೆ |
| ಕಿವಿ | ಕಿಮಿ |
| ತುಟಿ | ತೂಡಿ |
| ಗಡ್ಡ | ತಾಡಿ |
| ಮುಖ | ಮೊಗ |
| ಕುತ್ತಿಗೆ | ಕುತ್ತಗ |
| ತೊಡೆ | ತೂಂಡ |

ಎಂಬಲ್ಲಿ ಕೆಲವು ಪದಗಳಲ್ಲಿ ವಿಶೇಷ ಬದಲಾವಣೆ ಕ್ರಿಯೆಯು ನಡೆದಿರುವುದನ್ನು ಗಮನಿಸಬಹುದು. ಇಲ್ಲಿ ಸ್ಪಷ್ಟವಾಗಿ ಮಲೆಯಾಳಿ ಭಾಷೆಯ ಪ್ರಭಾವವನ್ನು ಗುರುತಿಸಲು ಸಾಧ್ಯವಿದೆ.

**೬ : ೧ : ೩ ಕೃಷಿ ಸಂಬಂಧಿ ವಸ್ತು ವಿಷಯಗಳು**

| ಶಿಷ್ಟ/ಪ್ರಮಾಣಿತ ಕನ್ನಡ | ಒಡಿಗ ಕನ್ನಡ |
|---|---|
| ಉಳುಮೆ ಮಾಡುವುದು | ಹುಳು ಮೇಯಿಸುವುದು |

| | |
|---|---|
| ಕೆಸರು | ಬದಿ |
| ಕಣಜ | ಪತಾಯಿ |
| ಕಣ | ಕಳ |
| ಮಚ್ಚು | ಕಡಗತ್ತಿ |
| ದನ | ಎತ್ತಗ |
| ಎಮ್ಮೆ | ಕಾಟಿ |
| ಶುಂಠಿ | ಇಜಿ |
| ಅಲಸಂದೆ ಕಾಳು | ತುಡುಗುಣಿ ಕಾಳು |
| ಪೈರು ಕತ್ತರಿಸುವುದು (ಕಟಾವು) | ಕಳುಗುಡ್ಡೆ |

ಎಂಬಲ್ಲಿ ಪ್ರಮಾಣಿತ ಕನ್ನಡ ರೂಪಗಳಿಂದ ಒಡಿಗರ ಸಾಮಾಜಿಕ ಕನ್ನಡ ಭಾಷೆಯಲ್ಲಿ ಭಿನ್ನತೆಯಿರುವುದು ತಿಳಿಯುತ್ತದೆ. ಕಣಜ>ಪತಾಯಿಯಾಗಿದೆ. ಬಹುಶಃ ಈ ಪದ ಎರವಲು ಪದವಾಗಿರಬೇಕು. ಕಣ>ಕಳ ಎಂಬಲ್ಲಿ 'ಕಳ' ಕಣದ ಪ್ರಾಚೀನ ರೂಪವು ಯಥಾವತ್ತು ಉಳಿದುಕೊಂಡು ಬಂದಿದೆ. ಅಲ್ಲದೇ ಇನ್ನೂ ಕೆಲವು ಪದಗಳು ವಿಶೇಷವಾಗಿ ಬಳಕೆಗೊಂಡಿವೆ.

**೬ : ೧ : ೪ ಪ್ರಾಣಿ ಸಂಬಂಧಿ**

| ಶಿಷ್ಟ/ಪ್ರಮಾಣಿತ ಕನ್ನಡ | ಒಡಿಗ ಕನ್ನಡ |
|---|---|
| ದನ | ಎತ್ತಗ |
| ಬೆಕ್ಕು | ಕೊತ್ತಿ |
| ತೋಳ | ಕೆಂದನಾಯಿ |
| ನೊಣ | ನುಣು |
| ಗರುಡ | ಬಿಜ್ಜ |
| ಕಾಡೆಮ್ಮೆ | ಕಾಟಿ |
| ಕೋತಿ (ಕಪಿ) | ಕೆಪಿ |

### ೬ : ೧ : ೫ ವಸತಿ ಸಂಬಂಧಿ

| ಶಿಷ್ಟ/ಪ್ರಮಾಣಿತ ಕನ್ನಡ | ಒಡಿಗ ಕನ್ನಡ |
|---|---|
| ಮನೆ | ಊರು |
| ಬಾಗಿಲು | ಅಡಿ |
| ಕಿಟಕಿ | ಪೂಗಣಿ |
| ಹೊಸ್ತಿಲು | ಕಪ್ಪಲೆ |
| ಮನೆಯ ಮುಂದಿನ ಭಾಗ (ಅಂಗಳ) | ತಣಿ |
| ಮನೆಯ ಹಿಂದಿನ ಭಾಗ | ಕಿಣಿ |

### ೬ : ೧ : ೬ ಊಟ-ಉಪಹಾರ ಸಂಬಂಧಿ

| ಶಿಷ್ಟ/ಪ್ರಮಾಣಿತ ಕನ್ನಡ | ಒಡಿಗ ಕನ್ನಡ |
|---|---|
| ದೋಸೆ | ವಡಚಿಟ್ಟು |
| ಸಾಂಬಾರು | ಎಸರು, ಉದಕ |
| ಮಾಂಸ | ಮಾಪ್ಸ |
| ಸೇವಿಗೆ | ಕೊಂಗಮರ್ದಿಟ್ಟು |
| ನಿಂಬೆಹಣ್ಣು | ಹಿಂಬಿಹಣ್ಣು, ಲಿಂಬೆಹಣ್ಣು |

### ೬ : ೧ : ೭ ಪ್ರಾಕೃತಿಕ ಸಂಬಂಧಿ

| ಶಿಷ್ಟ/ಪ್ರಮಾಣಿತ ಕನ್ನಡ | ಒಡಿಗ ಕನ್ನಡ |
|---|---|
| ಆಕಾಶ | ಬಾಣ, ಬಾನ |
| ನಕ್ಷತ್ರ | ತಾರಕ, ಬೆಳ್ಳಿ |
| ಗಿಡ | ತಾಳು |
| ದಾರಿ | ಹಾದಿ |
| ಹಕ್ಕಿ | ಹೆಕ್ಕಿ |
| ಸೀಬೆಮರ | ಚಾಮುನಮರ |

## ೬ : ೧ : ೮ ಇತರೆ

| ಶಿಷ್ಟ/ಪ್ರಮಾಣಿತ ಕನ್ನಡ | ಒಡಿಗ ಕನ್ನಡ |
| --- | --- |
| ಚಾಪೆ | ಮಂದ್ರಿಗೆ |
| ಪೊರಕೆ | ಇಡಗಲು |
| ಚಮಚ | ಚೊಟಿ |
| ದೀಪ | ನಾಂದ್ರಿ |
| ತಟ್ಟೆ | ತಣಿಗೆ |
| ಪಂಚೆ | ಮುಂಡು |
| ಅಂಗಿ | ಕವಚ |
| ಮದುವೆ | ನಗಡಿ, ಲಗ್ನ |
| ಕೆಲಸ | ಪಣಿ |
| ಪಿಶಾಚಿ | ಫೇಯಿ |

ಹೀಗೆ ಒಡಿಗರು ತಮ್ಮ ಕನ್ನಡ ಭಾಷೆಯಲ್ಲಿ ಹಲವಾರು ಬಗೆಯಲ್ಲಿ ವೈಶಿಷ್ಟ್ಯತೆಯನ್ನು ಪಡೆದುಕೊಂಡು ಒಂದು ಸಾಮಾಜಿಕ ಪ್ರಬೇದವಾಗಿ ಬಳಕೆಯಾಗುತ್ತದೆ ಎಂದು ಹೇಳಲು ಅವಕಾಶವಿದೆ. ದ್ವಿಭಾಷಿಕ ವಲಯದಲ್ಲಿ ಜೀವಿಸುತ್ತಿರುವ ಒಡಿಗ ಸಮುದಾಯವು ತಮ್ಮ ದೈನಂದಿನ ವ್ಯವಹಾರ, ಉದ್ಯೋಗ ಮುಂತಾದಲ್ಲಿ ಮಲೆಯಾಳಿ ಮತ್ತು ಕನ್ನಡವನ್ನು ಬಳಸುತ್ತಾರೆ. ಈ ಕಾರಣದಿಂದ ಎರಡು ಭಾಷೆಗಳಿಂದ ಪರಸ್ಪರ ಕೊಡುಪಡೆಯು ನಡೆದಿದೆ. ಎರಡು ಭಾಷೆಗಳು ದ್ರಾವಿಡ ಪರಿವಾರವಾದರೂ ಹಲವಾರು ಬಗೆಯಲ್ಲಿ ವೈಶಿಷ್ಟ್ಯತೆಯಿದೆ. ಸಹಜವಾಗಿಯೇ ಒಡಿಗರ ಮಾತೃಭಾಷೆಯ ಮೇಲೆ ಮಲೆಯಾಳಿ ಪ್ರಭಾವ ಬೀರಿದೆಯೆನ್ನಬಹುದು.

## ೬ : ೧ : ೯ ಶಿಕ್ಷಣ ಮಾಧ್ಯಮ

ಒಡಿಗ ಸಮುದಾಯವು ಒಟ್ಟು ಜನಸಂಖ್ಯೆಯ ದೃಷ್ಟಿಯಿಂದ ಅತ್ಯಂತ ಕಡಿಮೆಯಿದ್ದಾರೆ. ಅದರಲ್ಲಿ ಕೇರಳದ ಗಡಿಯಲ್ಲಿ ಕೆಲವು ಕುಟುಂಬಗಳು ಮಲೆಯಾಳಿ ಭಾಷಿಕರಾಗಿದ್ದಾರೆ. ಕಾರಣ ಶಾಲಾ ಮಕ್ಕಳಿಗೆ ಕೆಲವರು ಕನ್ನಡ ಮತ್ತು ಕೆಲವರು ಮಲೆಯಾಳಿ ಭಾಷೆಯಲ್ಲಿ ಶಿಕ್ಷಣ ನೀಡುತ್ತಾರೆ. ಆಧುನಿಕತೆಯ ಪ್ರಭಾವ ಕೊಂಚಮಟ್ಟಿಗೆ ಆಗಿದ್ದರೂ ಶಿಕ್ಷಣ ಮಾಧ್ಯಮವಾಗಿ ಇಂಗ್ಲೀಷ್ ಭಾಷೆಯನ್ನು ಈ ಸಮುದಾಯವು ಸ್ವೀಕರಿಸಿಲ್ಲ. ಇದಕ್ಕೆ ಆರ್ಥಿಕ, ಸಾಮಾಜಿಕ ಕಾರಣಗಳಿರಬಹುದು.

೬ : ೨ ಸಾಹಿತ್ಯ

ಸಾಹಿತ್ಯ ಎನ್ನುವುದು ಭಾಷೆಯ ಮೂಲಕ ಅಭಿವ್ಯಕ್ತಪಡಿಸುವ ಮನುಷ್ಯನ ಭಾವನೆಗಳ ಮೂರ್ತರೂಪ. ಈ ರೂಪುಗೊಳ್ಳುವಿಕೆ ಮನುಷ್ಯನ ಜೀವನದಲ್ಲಿ ಅನಿವಾರ್ಯವೇ ಆಗಿದೆ. ಜಗತ್ತಿನ ಎಲ್ಲಾ ಜನವರ್ಗಗಳು ಬರವಣಿಗೆಯ ಮೂಲಕ ಅಲ್ಲದಿದ್ದರೂ ಮೌಖಿಕವಾಗಿ ರೂಪ ಪಡೆದದ್ದು ನಿಜ. ಶ್ರಮ ಮೂಲದಿಂದ ಜೀವಿಸಿದ ಅನೇಕ ಸಮುದಾಯವು ತಮ್ಮ ಶ್ರಮದ ದಣಿವನ್ನು ಕಡಿಮೆ ಮಾಡಿಕೊಂಡು ನಿರಾಯಾಸವಾಗಿ ಕೆಲಸವನ್ನು ಮಾಡಿಕೊಳ್ಳಲು ಹಾಡು, ಕಥೆ, ಗಾದೆ, ಒಗಟು ಮುಂತಾದ ಮಾಧ್ಯಮಗಳನ್ನು ಸೃಷ್ಟಿಸಿಕೊಂಡಿದ್ದಾರೆ. ಈ ಸೃಷ್ಟಿಯು ಯಾವುದೇ ಪ್ರಜ್ಞೆಯಿಂದ ಬಂದದ್ದಲ್ಲ. ಬದಲಾಗಿ ಅದು ಅಪ್ರಜ್ಞಾ ಪೂರ್ವಕವಾಗಿ ಹೊರಹೊಮ್ಮಿದ್ದು. ಇದಕ್ಕೆ ಶಿಷ್ಟ ಪರಂಪರೆಯಂತೆ ಯಾವ ಪೂರ್ವಯೋಜನೆಯು ಇರಲಾರದು. ಆದರೂ ಇಂದಿಗೂ ಮೌಖಿಕ ಪರಂಪರೆಯ ಅಧ್ಯಯನ ಯೋಗ್ಯವಾಗಿ ಉಳಿದುಕೊಂಡು ಬಂದಿದೆ.

''ಮನುಷ್ಯನು ಮಾತನ್ನು ರೂಢಿಸಿಕೊಂಡಾಗಲೇ ಆ ಮಾತಿನೊಂದಿಗೆ ಸಾಹಿತ್ಯವೂ ಜನ್ಮತಾಳಿತು''[೧] ಎಂಬ ಮಾತು ಸತ್ಯಕ್ಕೆ ದೂರ. ಏಕೆಂದರೆ ಮನುಷ್ಯನ ಮಾತಿನೊಂದಿಗೆ ಯಾವ ಸಾಹಿತ್ಯವೂ ಸೃಜನವಾಗಲಾರದು. ಹಾಗೆ ನೋಡಿದರೆ ಭಾಷೆ ಕಲಿತ ಮನುಷ್ಯ ಅದನ್ನು ಸಾಮಾಜಿಕಗೊಳಿಸಲು ತನ್ನದೇ ಆದ ಸಮಯವನ್ನು ಪಡೆದುಕೊಂಡಿದ್ದಾನೆ. ಭಾಷೆಯು ಹುಟ್ಟಿನಿಂದ ಅನೇಕ ದಿನಗಳ ನಂತರ ಮೌಖಿಕಗೊಂಡ ಭಾವನೆಗಳು ಕ್ರಮೇಣ ಸಾಹಿತ್ಯವಾಗಿ ಮಾರ್ಪಟ್ಟಿತ್ತು. ಈ ಮೌಖಿಕ ಸಾಹಿತ್ಯ ಜನಾಂಗದ ಸಂಸ್ಕೃತಿಯ ಪ್ರತಿಬಿಂಬ. ಅವರ ಒಟ್ಟು ಬದುಕಿನ ಅಂತಃಸತ್ವ, ತಾವು ಬದುಕಿನಲ್ಲಿ ರೂಢಿಸಿಕೊಂಡ ಹಬ್ಬ-ಹರಿದಿನ, ಆಚರಣೆ, ಮದುವೆ, ಸಾವು, ಜಾತ್ರೆ ಹೀಗೆ ಹತ್ತು ಹಲವಾರು ಸಂದರ್ಭಗಳಲ್ಲಿ ಮನದುಂಬಿ ಕಟ್ಟಿದ ಆಡುನುಡಿಗಳೇ ಸಾಹಿತ್ಯವಾಯಿತು. ಇದಕ್ಕೆ ಮೂಲತಃ ಒಬ್ಬ ಲೇಖಕನಿದ್ದರೂ ಅದು ಖಚಿತವಲ್ಲ. ಹಾಗಾಗಿ ಇದು ಜನಪದ ಸಾಹಿತ್ಯ.

ಒಂದು ಜನಾಂಗದಲ್ಲಿ ಸಾಹಿತ್ಯ ಇರಲೇಬೇಕೆಂದೇನೂ ಇಲ್ಲ. ಯುರೋಪಿನ ಅತಿ ಕಡಿಮೆ ಜನಸಂಖ್ಯೆಯಿರುವ ಯಾವುದೋ ಒಂದು ಬುಡಕಟ್ಟು ಸಮುದಾಯದಲ್ಲಿ ಸಾಹಿತ್ಯವೇ ಇಲ್ಲವೆಂದು ಹೇಳಲಾಗುತ್ತದೆ. ಹಾಗಾಗಿ ಈ ಸಾಹಿತ್ಯದ ಸೃಷ್ಟಿ ಆಯಾ ಸಮುದಾಯಗಳ ಮೇಲೆ ಅವಲಂಬಿತವಾಗಿರುತ್ತದೆ. ಭಾರತದ ಅನೇಕ ಬುಡಕಟ್ಟುಗಳಲ್ಲಿ ಸಾಹಿತ್ಯದ ಸೃಷ್ಟಿಯ ಪ್ರಮಾಣದಲ್ಲಿ ಹೆಚ್ಚು ಕಡಿಮೆಯಿದೆ. ಗುಡ್ಡಗಾಡು ಪ್ರದೇಶದಲ್ಲಿ ವಾಸಿಸುವಂತಹ ಸಮುದಾಯಗಳು ತಮ್ಮದೇ ಆದ ವಿಶಿಷ್ಟ ಶೈಲಿಯ ಸಾಹಿತ್ಯವನ್ನು ಹುಟ್ಟುಹಾಕಿದ್ದರೆ, ನದಿ ಬಯಲಿನ, ಬಯಲು ಪರಿಸರದಲ್ಲಿ ವಾಸಿಸುವ, ಅರಣ್ಯದಲ್ಲಿ ವಾಸಿಸುವ ಸಮುದಾಯಗಳ ಸಾಹಿತ್ಯಕ್ಕೆ ಅನೇಕ ವೈವಿಧ್ಯತೆಯಿರುತ್ತದೆ. ಕಾರಣ ಭೌಗೋಳಿಕ ಪರಿಸರವೂ ಇದಕ್ಕೆ ಮುಖ್ಯ ಕಾರಣವಾಗಬಹುದು ಎಂಬುದನ್ನು ವಿದ್ವಾಂಸರು ಒಪ್ಪುತ್ತಾರೆ. ಅದೇನಿದ್ದರೂ ಆಯಾ ಸಮುದಾಯಗಳು ತಮ್ಮ ಮಟ್ಟಿನ ಸಾಹಿತ್ಯವನ್ನು ಉಳಿಸಿಕೊಂಡು ಬಂದಿವೆ.

ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಸಮುದಾಯವು ವಲಸೆ ಹೋದಲ್ಲಿ ಮೂಲ ಪರಿಸರದ ಹಾಗೂ ಪ್ರಸ್ತುತ ವಾಸಿಸುವ ಪ್ರೇಶದಲ್ಲಿನ ಆ ಜನಾಂಗದ, ಸಾಹಿತ್ಯ ಅನೇಕ ಸಾಮ್ಯತೆಯನ್ನು ಪಡೆದಿರುತ್ತದೆ. ಆಗ ಭೌಗೋಳಿಕ

ವಿಘಟನೆಯಲ್ಲಿ ಏಕರೀತಿಯ ಸಂಸ್ಕೃತಿಯನ್ನು ಕಾಣಲು ಸಾಧ್ಯವಾಗುತ್ತದೆ. ವಲಸೆ ಹೋದಂತಹ ಸಮುದಾಯ ಸ್ಥಳೀಯ ಪರಿಸರದ ಪ್ರೇರಣೆಯಿಂದ ಮತ್ತೊಂದು ಬಗೆಯ ಸಾಹಿತ್ಯದ ಸೃಷ್ಟಿಗೆ ಕಾರಣ ಆಗಬಹುದು. ಇದರಿಂದ ಸಂಸ್ಕೃತಿಯ ವಿಭಿನ್ನತೆಯನ್ನೂ ಅರ್ಥೈಸಬಹುದಾಗಿದೆ.

ಪ್ರಸ್ತುತ ಒಡಿಗ ಸಮುದಾಯವು ಒಂದು ಬಗೆಯಲ್ಲಿ ವಲಸೆ ಸಮುದಾಯವಾಗಿರುವುದರಿಂದಾಗಿ ಈ ಸಮುದಾಯಕ್ಕೆ ತನ್ನದೇ ಆದಂತಹ ಮೌಖಿಕ ಸಾಹಿತ್ಯವಿದೆ. ಒಡಿಗರಿಗೆ ಅಷ್ಟಾಗಿ ಸಾಹಿತ್ಯವನ್ನು ಸೃಷ್ಟಿಸಿಕೊಳ್ಳಲಾಗಿಲ್ಲ. ಇದಕ್ಕೆ ಸಮುದಾಯ ಪರಿಮಿತಿಯ ಜನಸಂಖ್ಯೆ, ವಲಸೆ ಮತ್ತು ಭೌಗೋಳಿಕ ಪರಿಸರ ಕಾರಣವಾಗಿರಬಹುದು. ಉಪಲಬ್ದವಿರುವ ಸಾಹಿತ್ಯವನ್ನು ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಲಾಗಿದೆ. ಅದನ್ನು ಅವರ ಬದುಕಿನ ಅಂಗವಾಗಿ, ಸಂಸ್ಕೃತಿಯ ಬಿಂಬವಾಗಿ ಪರಿಗಣಿಸಿ ಸಂಕ್ಷಿಪ್ತವಾಗಿ ಕೆಳಗಿನಂತೆ ವಿವರಿಸಲಾಗಿದೆ.




೬ : ೨ : ೧ ಬಾಲ್ಯ

ಒಡಿಗರು ಮಗುವಿನ ಜನನವನ್ನು ಅತ್ಯಂತ ಸಂಭ್ರಮದಿಂದ ಸ್ವೀಕರಿಸುತ್ತಾರೆ. ಬಾಲ್ಯದಿಂದಲೂ ಮಗುವಿನ ಆರೈಕೆ ಮಾಡುವಾಗ ಮಗುವಿನ ದುಃಖ, ಸುಖ, ಆಟ, ತೊಟ್ಟಿಲು ಮುಂತಾದ ಸಂದರ್ಭದಲ್ಲಿ ತಾಯಿ ಹಾಡಿ ಆಡಿಸುತ್ತಾಳೆ. ಅಂತಹ ಕೆಲವು ಹಾಡುಗಳು ಇದರಲ್ಲಿವೆ. ಉದಾ :

> ಜಾಜಿ ಹೂವುಗಳಿರಾ, ಜಾಜಿ ಮೊಗ್ಗುಗಳಿರಾ
>
> ಜಾಜಿ ವನದಲ್ಲಿರುವ ಗಿಣಿಗಳೇ|| ಸೋಬಾನೆ ಸೋssss ||
>
> ಜಾಜಿ ವನದಲ್ಲಿರುವ ಗಿಣಿಗಳೇ ನೀವು ಬಂದು
>
> ನಮ್ಮ ಜಾಣು ಮರಿಯ ನೋಡು ಬನ್ನಿ ಸೋಬಾನೆ ಸೋssss ||

೬ : ೨ : ೨ ಯೌವನ

ಒಡಿಗ ಸಮುದಾಯದಲ್ಲಿ ಗಂಡಿನ ಯೌವನಕ್ಕಿಂತ, ಹೆಣ್ಣಿನ ಯೌವನಾವಸ್ಥೆಯು ಅತ್ಯಂತ ಮುಖ್ಯವಾಗಿರುತ್ತದೆ.

ಹೆಣ್ಣು ಮೈ ನೆರೆಯುವುದನ್ನು ಅತ್ಯಂತ ಸಂಭ್ರಮದಿಂದ ಸ್ವೀಕರಿಸಿ, ವಿಶಿಷ್ಟ ಬಗೆಯಲ್ಲಿ ಆಚರಿಸುತ್ತಾರೆ. ಮೈ ನೆರೆತ ಹೆಣ್ಣಿನ ಹೆತ್ತವರು, ಬಂಧುವರ್ಗದವರೆಲ್ಲ ಸೇರಿ ಆಕೆಯನ್ನು ಸಿಂಗರಿಸಿ ''ಒಸುಗೆ''ಯನ್ನು ಮಾಡುತ್ತಾರೆ. ಆ ಮುಂಚೆ ಋತುಮತಿಯಾದ ಹೆಣ್ಣಿಗೆ ನೀರೆರೆಯುವ, ಸಿಂಗರಿಸುವ, ಹೂಮುಡಿಸುವ, ಒಸುಗೆ ಹಾಕುವ, ಆರತಿ ಎತ್ತುವ ಒಂದೊಂದು ಸಂದರ್ಭದಲ್ಲಿಯೂ ಸಮುದಾಯದ ಹಿರಿಯರು ಹಲವಾರು ಹಾಡುಗಳನ್ನು ಹೇಳುತ್ತಾರೆ. ಮೈ ನೆರೆತವಳಿಗೆ ನೀರೆರೆಯುವ ಸಂದರ್ಭದಲ್ಲಿ

ಗಿಂಡಿ ಗಿಂಡಿ ಚಂದ ಗಿಂಡಿಯಾಟ ಚಂದ

ಗಿಂಡಿಯೊಳಗಿರುವ ಮಾಣಿಕ್ಯದ ಅರಳು|| ಸೋಬಾನಾ ಸೋsss||

ಗಿಂಡಿಯೊಳಗಿರುವ ಮಾಣಿಕ್ಯದ ಅರಳು ಚಂದ

ನಮ್ಮ ರಂಬೆನೂ ಚಂದ|| ಸೋಬಾನ ಸೋsss||

ಎಂದು ಸೋಬಾನೆ ಪದಗಳನ್ನು ಹೇಳುತ್ತಾರೆ. ಇದರಿಂದ ಅವಳಿಗೆ ಶುಭವಾಗುತ್ತದೆಂದು ಒಡಿಗರು ನಂಬುತ್ತಾರೆ.

**೬ : ೨ : ೩ ಮದುವೆ**

ಮದುವೆಯ ವಿವಿಧ ಕಾರ್ಯಕ್ರಮಗಳಲ್ಲಿ ಒಡಿಗರು ಹಲವಾರು ಹಾಡುಗಳನ್ನು ಹಾಡುತ್ತಾರೆ.

**ಅ ಐಲ್ ಭತ್ತವನ್ನು ಅಳೆಯುವಾಗ ವರನ ಕಡೆಯವರು**

''ಕೊಟ್ಟು ಮಂಡಲೆ, ಕೂಡುಮಲೆ, ದೇವೇಶ ಬೈನಾಡು ಮುಕ್ಕಣ್ಣ ಹೊಯ್''

ಎಂದು ಹೇಳುತ್ತಾ, ವರನು ಭತ್ತವನ್ನು ಅಳೆದು ಕೊಡುತ್ತಾನೆ.

**ಆ ವಧುವರರಿಗೆ ಕೆಲ್ಸಿಯು ಉಗುರು ತೆಗೆಯುವ ಶಾಸ್ತ್ರವನ್ನು ಮಾಡುವಾಗ ಹಾಡುವ ಪದ ಹೀಗಿದೆ**

ಕೈ ಉಗುರು ತೆಗೆಯುವಾಂಗೆ ಏನೇನಾ ಕೊಡುಬೇಕು

ಐದು ಮಾನ ಅಕ್ಕಿ ಐದು ಚಿಪ್ಪಿನ ಬಾಳೇಲ ಹಣ್ಣು || ಸೋಬಾನ ಸೋss ||

ಕಾಲುಗುರು ತೆಗೆಯುವಾಂಗೆ ಏನೇನಾ ಕೊಡುಬೇಕು

ಐದುಮಾನ ಅಕ್ಕಿ ಐದು ಒಪ್ಪಿನ ಬೆಲ್ಲ || ಸೋಬಾನ ಸೋss ||

**ಇ ವಧುವರರಿಗೆ ಹಿರಿಯರು ಮುತ್ತೈದೆಯರೆಲ್ಲರೂ ಸೇರಿ ಎಣ್ಣೆ ಎರೆಯುತ್ತಾ ಹಾಡುವ ಪದ**

ಭತ್ತದಾಗ ಎಣ್ಣೆಯ ಉದುಕಿ ಬೆಣ್ಯಾಗ ಎಣ್ಣೆಯ ಉದುಕಿ

ಸ್ವಾಮಿ ಚಲುವರಾಯಾಗೆ || ಸೋಬಾನೆ ಸೋss ||

ಸ್ವಾಮಿ ಚಲುವರಾಯಾಗೆ ಎರೆಯಿರಿ ಎಣ್ಣೆ

ನೀವು ಐದು ಮುತ್ತೈದೆಯರು ಸೇರಿ || ಸೋಬಾನ ಸೋss ||

ಈ ಐದು ಜನ ಮುತ್ತೈದೆಯರು ವಧುವರರಿಗೆ ನೀರೆರೆಯುತ್ತಾ ಹಾಡುವ ಸೋಬಾನೆ ಪದ

ಚಪ್ಪರದ ಹಟ್ಟಿಗೆ ಕೆಸರೇನಾ ಮೊಸರೇನಾ

ಧರೆಗೆ ದೊಡ್ಡವ ನಿಮ್ಮಮಗಾ || ಸೋಬಾನ ಸೋss ||

ಧರೆಗೆ ದೊಡ್ಡವಂಗೆ ನಾ ನೀರ ಮಿಯ್ಯದು

ಈ ಅಂದದ ಲೋಕ ಮೂರೇ || ಸೋಬಾನ ಸೋss ||

ಉ ಮದುವೆಯ ಎರಡನೆಯ ದಿನದ ಮೊದಲ ಕಾರ್ಯ ಹರಿಣೆ ತರುವುದು. ಹರಿಣೆ ತರುವ ಸಮಯದಲ್ಲಿ ಹಾಡುವ ಪದ

ನಾವು ಮಾಡಿದ ಹರಿಣೆಯ ನೀವೇನಾ ಜರಿದಿರಿ

ಮೇಲುಕೋಟೆಲ್ಲಿರುವ ಚಲುವರಾಯರು || ಸೋಬಾನೆ ಸೋss ||

ಮೇಲುಕೋಟೆಲ್ಲಿರುವ ಚಲುವರಾಯರ ಗುಡಿಯಲ್ಲಿ

ಬಣ್ಣಕ್ಕೊಂದು ಅರಿವೆ ಕೊಡುವಾರು || ಸೋಬಾನೆ ಸೋss ||

ಊ ಮದುವೆ ಚಪ್ಪರದಲ್ಲಿ ಕೆಲ್ಸಿಯು ಮೇಲ್‌ಕಟ್ಟು ಕಟ್ಟುವಾಗ ಹಾಡು ಹಾಡುತ್ತಾರೆ

ಮೇಲ್‌ಕಟ್ಟು ಕಟ್ಟೊವಂಗೆ ಏನೇನಾ ಕೊಡಬೇಕು

ಹತ್ತುಮಾನ ಅಕ್ಕಿ ಹತ್ತು ಚಿಪ್ಪಿನ ಹಣ್ಣು || ಸೋಬಾನ ಸೋss ||

ಹತ್ತುಮಾನ ಅಕ್ಕಿ ಹತ್ತು ಚಿಪ್ಪಿನ ಹಣ್ಣು

ನಿಮ್ಮ ಅಂದದ ಮೇಲ್ ಕಟ್ಟಾ ಕಟ್ಟು ನೀ || ಸೋಬಾನ ಸೋss ||

ಋ ವಧುವರರಿಗೆ ಆಭರಣ ಧರಿಸುವಾಗ ಹೇಳುವ ಸೋಬಾನೆ ಪದ

ಆ ಕಡಗ ಈ ಕಡಗ ಶಿವಗಂಗೇ ಕೈ ಕಡಗ

ನಿಮ್ಮ ಅತ್ತಮ್ಮ ತಂದವಳೇ ವಸುಕಡಗ || ಸೋಬಾನ ಸೋss ||

ನಿಮ್ಮ ಅತ್ತಮ್ಮ ತಂದವಳೇ ವಸು ಕಡಗ ಬೀಗೂತಿ

ನಿಮ್ಮ ದೊರೆಯಾ ಮಗನಾ ನೋಡು || ಸೋಬಾನ ಸೋss ||

೩ು ಮದುವೆ ಮುಗಿದ ಬಳಿಕ ವಧುವರರು ವರನ ಮನೆಯ ಅಳಿಗುಳಿ ಕಾರ್ಯಕ್ಕೆ ಹೋದಾಗ ವರನ ಅಕ್ಕತಂಗಿಯರು ಇವರನ್ನು ಬಾಗಿಲಲ್ಲಿ ತಡೆದು ಹೇಳುವ ಸೋಬಾನೆ ಪದ

ಆನೆಯ ನಾ ಕೊಡುವೆ ಆನೆ ಮರಿಯನಾ ಕೊಡುವೆ ತಂಗೆಮ್ಮ

ತಡೆದ ಬಾಗಲ ನೀ ಬುಡೂ ।

ಆನೆ ನಮಗುಂಟು ಆನೆಮರಿಯೂ ನಮಗುಂಟು ಅಣ್ಣಯ್ಯ

ತಡೆದ ಬಾಗಿಲ ನಾ ಬೂಡೇ ॥

೬ : ೨ : ೪ ಹಬ್ಬಾಚರಣೆಯ ಸಂದರ್ಭದಲ್ಲಿ ದೇವರನ್ನು ನೆನೆಯುತ್ತಾ ಹಲವಾರು ಹಾಡುಗಳನ್ನು ಹಾಡುತ್ತಾರೆ. ಶಿವರಾತ್ರಿಯ ದಿನದಂದು ಹಾಡುವ ಒಂದು ಪದ ಹೀಗಿದೆ.

ಶಿವಲೀಯಲೋ ಸ್ವಾಮಿ ಶಿವಲೀಯಲೊ

ಜಗಜ್ಯೋತಿ ಬೆಣು(ಳು)ಕಲ್ಲಿ ಶಿವಲೀಯಲೋ ।

ನಮ್ಮ ಶಿವರಾಯ ಎಂಬೋರು ಶಿವಲೀಯಲೊ

ಲೋಕಕ್ಕೆ ದೊಡ್ಡವರು ಶಿವಲೀಯಲೋ

ಶಿವಲೀಯಲೋ ಸ್ವಾಮಿ ಶಿವಲೀಯಲೋ

ಜಗಜ್ಯೋತಿ ಬೆಣುಕಲ್ಲಿ ಶಿವಲೀಯಲೋ ॥

೬ : ೨ : ೫ ದೈವವನ್ನು ಕುರಿತಾಗಿ ಈ ಸಮುದಾಯದಲ್ಲಿ ಕೆಲವಾರು ಹಾಡುಗಳಿವೆ. ಶ್ರೀ ಮಲ್ಲೇಶಸ್ವಾಮಿಯ ಒಂದು ಹಾಡು ಹೀಗಿದೆ. ಈ ಪದ್ಯವನ್ನು ತಮ್ಮ ಮಕ್ಕಳಿಗೆ ದೋಷ, ಭಯ, ನಿವಾರಣೆಯಾಗಲು ಮಲ್ಲೇಶ ಸ್ವಾಮಿಯ ಗದ್ದುಗೆ ಹಾಕುತ್ತಾರೆ. ಆ ಸಂದರ್ಭದಲ್ಲಿ-

ನೀಲ ತಂಪೆಂದೋ ಸ್ವಾಮಿ ನೀಲ ತಂಪೆಂದೋ

ನೀಲ ತಂಪಿಂದೋ ಸ್ವಾಮಿಗೂ ನೀಲ ತಂಪಿಂದೋ ।

ಎಪ್ಪತ್ತೇಳು ಗುರುವಿನ ಮುಂದೆ ನೀಲ ತಂಪೆಂದೋ

ನೀಲ ತಂಪಿಂದೋ ಸ್ವಾಮಿಗೂ ನೀಲ ತಂಪಿಂದೋ ॥

**೬ : ೨ : ೬ ಕೋಲಾಟದ ಪದ**

ಈ ಸಮುದಾಯವು ಕೋಲಾಟವನ್ನು ಆಡುವಾಗ ಹಾಡುಗಳನ್ನು ಹೇಳುತ್ತಾ ಕುಣಿಯುತ್ತಾರೆ.

ಕೋಲು ಪಿಡಿಯುವ ಮುಂದೆ ಯಾರ್‍ಯಾರ ನೆನೆವರೂ

ಈ ಒರುವದಾಗಿ ಒಂದು ಹೊಂಬಾಳೆ ಕೋಲುದಾಗೆ ಕೋಲೆ |

ಈ ಒರುವದಾಗೆ ಹೊಂಬಾಳೆ ಈಗ ಕೋಲುದಾಗೆ ಕೋಲೆ

ನೀ ಪಿಡಿಯೋದು ಕೋಲು ಬಲುಗೈಲಿ ಕೋಲೆ ||

**೬ : ೨ : ೭ ಕೃಷಿ**

ಕೃಷಿಯನ್ನು ಮಾಡಿ ಬೆಳೆಗಳನ್ನು ತೆಗೆಯುವಾಗ, ಕಟಾವು, ಕಣ, ರಾಶಿ ಮುಂತಾದ ಸಮಯದಲ್ಲಿ ಹಾಡು ಹೇಳುತ್ತಾರೆ. ಅಲ್ಲದೇ ಕೃಷಿಯ ಶ್ರಮದ ನಿವಾರಣೆಗಾಗಿ ದಿನನಿತ್ಯ ಕೆಲವು ಪದ್ಯಗಳನ್ನು ಹಾಡುತ್ತಿರುತ್ತಾರೆ.

ತುಟ್ಟ ತುದಿಯ ಮೇಲೊಂದು

ತುಟ್ಟ ತುದಿಯ ಮೇಲೊಂದು

ಬಟ್ಟ ಮಾವಿನನ್ನೆರೆಡು

ಗೊನೆ ಬಾಳೆನನ್ನೆರೆಡು

ಇನಿಯ ಮಾವಿನನ್ನೆರೆಡು

ಅಂತ ನಿನ್ನ ಮೆಚ್ಚಿನ ಮಾವಿನಾ ಹಣ್ಣಿಗೆ ಬೆಲೆ ಹೇಳು ರಾಣಿss ||

**೬ : ೩. ಕಥೆಗಳು**

ಜನಪದ ಸಾಹಿತ್ಯದ ಪ್ರಕಾರಗಳಲ್ಲಿ ಒಂದಾದ ಕಥೆಗಳಿಗೆ ವಿಶಿಷ್ಟ ಸ್ಥಾನವಿದೆ. ಅವು ಒಂದು ಸಮುದಾಯದ ಕುರಿತು ಅಧ್ಯಯನಕ್ಕೆ ಮುಖ್ಯವಾದ ಆಕರ ಸಾಮಗ್ರಿಯಾಗಿವೆ. ಈ ಕಥೆಗಳ ಮೂಲಕ ಒಂದು ಸಮುದಾಯದ ಜೀವನ ವಿಧಾನ, ಸಂಸ್ಕೃತಿಯನ್ನು ಅರಿಯಬಹುದಾಗಿದೆ. ಕಥೆಗಳು ಸಮುದಾಯ ಜೀವನದ ಅನುಭವ, ಜಾಣ್ಮೆಯಿಂದ ಜನಿಸಿ ಅವರ ಸಾಮಾಜಿಕ ಜೀವನದ ಭಾಗವಾಗಿ ಹೊರಹೊಮ್ಮಿರುತ್ತವೆ. ಆದ್ದರಿಂದ ಕಥೆಗಳನ್ನು ಸಾಹಿತ್ಯದ ಒಂದು ಪ್ರಕಾರವೆಂದು ನೋಡುವುದರೊಂದಿಗೆ ಬದುಕಿನೊಂದಿಗೆ ಹೊಂದಿರುವ ಆಂತರಿಕ ಸಂಬಂಧದಿಂದ ನೋಡಬೇಕಾಗಿದೆ. ಈ ದೃಷ್ಟಿಯಿಂದ ಕಥೆಗಳಿಗೆ ವಿಶಿಷ್ಟ ಸ್ಥಾನ ದೊರೆಯುತ್ತದೆ.

ಪ್ರಸ್ತುತ ಒಡಿಗ ಸಮುದಾಯದಲ್ಲಿಯೂ ಕಥೆಗಳಿವೆ. ಹೆಚ್ಚಾಗಿ ಇವರು ತಮ್ಮ ಕುಲದೈವ, ಮನರಂಜನೆ, ಆಧುನಿಕತೆ ಮುಂತಾದ ಬಗ್ಗೆ ಇರುವ ಕಥೆಗಳಿಗಿಂತ ತಮ್ಮ ಸಮುದಾಯದ ಪಂಗಡಗಳಿಗೆ ಸಂಬಂಧಿಸಿದ ಕಥೆಗಳನ್ನು ಕ್ಷೇತ್ರಕಾರ್ಯದಲ್ಲಿ ಹೇಳಿದ್ದಾರೆ. ಮುಖ್ಯವಾಗಿ ಒಡಿಗರು ಹೇಳುವ ಈ ಪಂಗಡಕ್ಕೆ ಸಂಬಂಧಿಸಿದ ಕಥೆಗಳಿಂದ ಆ ಸಮುದಾಯದ ಹೆಸರು, ಉಪ ಪಂಗಡ, ಉಪಪಂಗಡಕ್ಕೆ ಕಾರಣವಾದ ಮೂಲ ವ್ಯಕ್ತಿಗಳು, ಸಮುದಾಯದ ಪ್ರಾಚೀನ, ಸಾಮಾಜಿಕ, ಸಾಂಸ್ಕೃತಿಕ

ಅಧ್ಯಯನಕ್ಕೆ ವಿಶೇಷವಾದಂತಹ ನೆರವು ನೀಡುತ್ತವೆ. ಇಲ್ಲಿ ಒಡಿಗ ಸಮುದಾಯದ ಮಾಸಾಲು ಮನೆತನ, ಬರಗೂರು ಮನೆತನ, ತಾವಟೆ ವಂಶದ ಮೂರು ಕಥೆಗಳು ಇಲ್ಲಿ ನೀಡಲಾಗಿದೆ. ತಾವಟೆ ವಂಶಕ್ಕೆ ಸಂಬಂಧಿಸಿದ ಯಾವುದೇ ವ್ಯಕ್ತಿಗಳು ಇಂದು ಇಲ್ಲ. ಇವರು ಯಾವುದೋ ಕಾರಣಕ್ಕೆ ನಿರ್ಮೂಲನೆಯಾಗಿದ್ದಾರೆಂದು ಒಡಿಗರು ಹೇಳುತ್ತಾರೆ.

ಒಡಿಗರು ತಮ್ಮ ಸಮುದಾಯಕ್ಕೆ ಸಂಬಂಧಿಸಿ ಹೇಳಿದ ಕಥೆಗಳು ಹೀಗಿವೆ -

**ಅ ಮಾಸಾಲು ವಂಶದವರ ಕಥೆ**

ಮಾಸಾಲು ವಂಶದಾಗೇ ಇಬ್ಬರು ಅಣ್ಣು-ತಮ್ಮಂದಿರು ಇದ್ದರೂ. ಇವರು ಬಡತನದಲ್ಲಿ ಬೆಂದು ನೊಂದಿದ್ದರು. ಕಡೀಗೆ ತಮ್ಮ ಮನಿಯನ್ನು ಬಿಟ್ಟು ಕಾಡಿನಲ್ಲಾ ಅಲೆದಾಡುತ್ತಿದ್ದರು. ಕಾಡಿನಲ್ಲ ಅಲೆಯುತ್ತಾ ಬಹುದೂರದುವರೆಗೂ ಹೋದುರು. ನಡುದು ನಡುದು ದಣಿವಾಗಿ, ನೀರಡಿಕೆಯಾಗಿ ಹೊಳೆಯ ದಂಡೆಗೆ ಹೋದುರು. ಅದೇ ಸಮಯದಾಗೇ ಇಬ್ಬರು ಅಕ್ಕ-ತಂಗೇರು ನೀರು ತರಲು ಹೊಳೆಯ ದಂಡೆಗೆ ಬೆರುತ್ತಿದ್ದರು. ಅಕ್ಕ-ತಂಗೇರಿಬ್ಬರನ್ನು ಕಂಡು ಇವರಿಗೆ ಆಚ್ಚರ್ಯವಾಯಿತು. ಈ ದಟ್ಟವಾದ ಅರಣ್ಯದಲ್ಲಿ ಇವರು ಎಲ್ಲಿ ವಾಸವಾಗಿದ್ದಾರೆ ಎಂದು ಅವರನ್ನು ನೀವಾ ಎಲ್ಲಿರುವಿರಿ. ನಿಮ್ಮ ಮನಿಯಲ್ಲಿ ಯಾರಾ ಯಾರಾ ಇದ್ದಾರಿ ಎಂದೆಲ್ಲ ಕೇಳುದರು. ಅಕ್ಕ-ತಂಗೇರಿಬ್ಬರೂ ನಮ್ಮ ಮನಿಯು ಹೊಳೆಯ ದಂಡೆಯಲ್ಲಿದೆ. ನಮ್ಮ ಯಾಪ್ಪ-ಅವ್ವ ಹಾಗೂ ನಾವಿಬ್ಬರೂ ಇಲ್ಲುಯೇ ವಾಸವಾಗಿದ್ದೇವೆ ಎಂದುರು. ನಂತುರ ಅಕ್ಕ-ತಂಗೇರಿಬ್ಬರೂ ಇವರನ್ನು ಕುರಿತು ನೀವಾ ಯಾರಾ? ನಿಮ್ಮ ಮನಿ ಎಲ್ಲುದೆ? ಇಲ್ಲಿಗಾ ಬರುಲು ಕಾರ್ಣಾವೇನು? ಎಂದು ಕೇಳುದುರು. ಅದಕ್ಕೆ ಅಣ್ಣು-ತಮ್ಮಂದಿರಿಬ್ಬರೂ ನಾವು ದೂರದ ಊರಿನವರು. ನಮುಗಾ ಮನಿ, ಮಠವೇನೋ ಇಲ್ಲ. ಕಾಡಿನಲ್ಲಾ ಅಲೆಯುತ್ತಾ ಇಲ್ಲಿಗೆ ಬಂದುವು ಎಂದುರು. ನಂತುರ ಇಬ್ಬರು ಹುಡುಗಿಯುರು ತಮ್ಮ ಮನಿಯ ಕಡುಗೆ ನಡದುರು. ಅಣ್ಣು-ತಮ್ಮಂದಿರಿಬ್ಬರೂ ಸಹ ಆ ಹುಡುಗಿಯರ ಮನೆಯ ಕಡುಗೆ ನಡದುರು. ಹುಡುಗಿಯರ ತಂದೆ-ತಾಯಿಗೆ ಮುಪ್ಪಿನ ವಯಸ್ಸು. ಅವರು ಇವರನ್ನು ಕಂಡು ನೀವು ಬಹಳ ದೂರದಿಂದ ಬಂದಿರುವಂತೆ ಕಾಣ್ತದೆ ನಿಮುಗಾ ಹಸಿವಾಗಿರುವಂತೆ ತೋರುತ್ತದೆ ಎಂದುರು. ಅಣ್ಣ-ತಮ್ಮಂದಿರಿಬ್ಬರೂ ಹೌದು ಎಂಬುಂತೆ ತಲೆಯಾಡಿಸಿದರು. ಆಗ ಅಜ್ಜ-ಅಜ್ಜಿಯರು ಇವರನ್ನು ಒಳ ಕರದು ಊಟೋಪಚಾರವನ್ನು ನೀಡಿದುರು. ಊಟ ಮಾಡಿ ಅಂದು ಮಧ್ಯಾಹ್ನ ಒಂದು ಗಂಟೆಗೆ ಮಲುಗುದೊರು ಮಾರನೆಯ ದಿನ ಸಂಜೆಯಾದರೂವೇ ಏಳನಿಲ್ಲ. ಅಜ್ಜ-ಅಜ್ಜಿಯರು ಎಚ್ಚರಿಸಿದರುವೇ ಏಳನಿಲ್ಲ. ಈ ಅಜ್ಜ-ಅಜ್ಜಿಯರು ಸುಮಾರು ಇಪ್ಪತ್ತು-ಮೂವತ್ತು ರಾಸುಗಳನ್ನು ಸಾಕಿದ್ದರು. ಅಜ್ಜನು ಅವುಗಳಿಗೆ ಮೈ ತೊಳೆದು ರಾಸುಗಳಿಗೆ ಹುಲ್ಲು ಹಾಕಿ ಇಬ್ಬರು ಮಾತನಾಡುತ್ತಾ ಕುಳುತಿದ್ದರು. ಆಗ ಅಣ್ಣು-ತಮ್ಮಂದಿರಿಬ್ಬರೂ ಎದ್ದು ಬಂದುರು. ಅಜ್ಜ-ಅಜ್ಜಿಯರಿಬ್ಬರೂ ಇವರನ್ನು ಕೂರಿಸಿಕೊಂಡು ನೀವು ಯಾರಾ ಯಾವಾ ಊರಾ ಎಂದೆಲ್ಲಾ ಕೇಳುದುರು. ಅದಕ್ಕೆ ಇವರು ನಮುಗಾ ತಂದಿ-ತಾಯಿ ಯಾರೂವೇನಿಲ್ಲ. ಬಡತನದ ಬೇಗಿಯಿಂದ ಮನಿ-ಮಠಗಳನಿಲ್ಲಾ ಬುಟ್ಟು ಕಾಡಿನಾಗೇ ಅಲೆದಾಡುತ್ತಾ ಇಲ್ಲಿಗೆ ಬಂದುವು ಎಂದುರು. ಅಜ್ಜ-ಅಜ್ಜಿಯರು ನೀವಿನ್ನು ಹೊರುಡಿ ಯಾಕಾಂದರಾ ಮನಿಯಲ್ಲಿ ಪ್ರಾಯಕ್ಕೆ ಬಂದ ಇಬ್ಬುರು ಹೆಣ್ಣು ಮಕ್ಕಳವಾ. ನಿಮ್ಮ ಬಡತನಕಾ ಯಾನಾ ಬೇಕಾ ಕೇಳಿ ಕೊಡುತ್ತೀವೆ. ನೀವಿನ್ನು ಹೊರುಡಿ ಎಂದು ಹೇಳುದುರು. ಅಣ್ಣು-

ತಮ್ಮಂದಿರಿಬ್ಬರೂವೇ ಅವರುನ್ನು ಬೇಡುಕೊಳ್ಳುತ್ತಾ ಇಲ್ಲಿ ನಮಗಾ ಯಾರೂನುವೇನಿಲ್ಲ ಹಾಗೂ ನೀವು ಒಪ್ಪಾವುದಾದುರೆ ನಾವು ನಿಮ್ಮ ಇಬ್ಬುರ ಹೆಣ್ಣು ಮಕ್ಕಳನ್ನಾ ಲಗ್ನವಾಗಿ ನಿಮ್ಮೊಂದುಗೆಯೇ ಇರುತ್ತೀವೆ ಎಂದುರು. ಅಜ್ಜ-ಅಜ್ಜಿಯರು ಮನಸ್ಸು ಕರುಗಿ ಇವರುನ್ನು ನೋಡಿದುರೆ ತುಂಬಾ ಒಳ್ಳೆಯವರಂತೆ ಕಾಣ್ತಾರೆ. ಇವರುಗೆ ನಮ್ಮ ಹೆಣ್ಣು ಮಕ್ಕಳನ್ನು ಕೊಟ್ಟು ಲಗ್ನ ಮಾಡುವುದು ಸರಿ ಎಂದು ಒಪ್ಪಿಗೆ ನೀಡಿದುರು. ಅವರುಗೆ ಲಗ್ನವನ್ನು ಮಾಡುದರು. ಅಣ್ಣುನು ದೊಡ್ಡವಳನ್ನು, ತಮ್ಮನು ಚಿಕ್ಕವಳನ್ನು ಲಗ್ನವಾಗಿ ಅವರ ರಾಸುಗಳನ್ನು ನೋಡಿಕೊಳ್ಳುತ್ತಾ ಜೀವನ ಸಾಗಿಸುತ್ತಿದ್ದುರು. ಹೀಗೆ ದಿನುಗಳು ಕಳುದಂತೆ ಅಣ್ಣುನಿಗೆ ಐದು ಮಂದಿ ಹೆಣ್ಣು ಕೂಸುಗಳು ತಮ್ಮನಿಗೆ ಐದು ಮಂದಿ ಗಂಡು ಕೂಸುಗಳಾದುವು. ಅಣ್ಣುನಿಗೆ ಗಂಡು ಸಂತಾನವಿಲ್ಲವೆಂಬ ಕೊರುಗು ಇತ್ತು. ಇದುನ್ನು ಕಂಡು ತಮ್ಮನು ತನ್ನ ಹಿರಿಯ ಮಗನನ್ನು ದೆತ್ತು ಕೊಟ್ಟುನು. ಇವನನ್ನು ಸಾಕಿ ಇವನ ಎಲ್ಲಾ ಆಗುಹೋಗುಗಳನ್ನು ನೀನಾ ನೋಡಿಕೋ ಎಂದು ಹೇಳಿ ಅವನಾ ಮನಿಗೆ ಬುಟ್ಟು ಬಂದುನು. ನಂತುರ ದಿನು ಕಳುದಂತೆ ಅಣ್ಣು-ತಮ್ಮಂದಿರಿಬ್ಬುರ ವಂಶುವು ಬೆಳುವಣಿಗೆಯಾಯಿತು. ಅಣ್ಣುನ ವಂಶುವನ್ನು ನಂಜಲಗೂಡು ತಮ್ಮ ವಂಶುವನ್ನು ಬೊಮ್ಮಲಗೂಡು ಎಂದು ಕರೆಯುಲಾರೋಂಭಿಸಿದರು. ನಂಜಲಗೂಡು ವಂಶುದವರ ಹೆಸಲು ನಂಜ, ಮಲ್ಲ, ದೇವೇಶ ಎಂಬ ಹೆಸಲಿಂದುಲೂ ತಮ್ಮನ ಬೊಮ್ಮಲಗೂಡು ವಂಶುದವರನ್ನು ತಿಮ್ಮ, ಬೊಮ್ಮ ಎಂಬು ಹೆಸಲೂನಿಂದ ಕರೆಯುತ್ತಾರೆ.

**ಆ ಬರಗೂರು ಮನೆತನದ ಕಥೆ**

ಬರಗೂರು ವಂಶದ ಹಿರಿಯರು ಪುಲಪಳ್ಳಿಯ ಸೀತಾರಾಮ ಗುಡಿಯನ್ನು ಕಟ್ಟುವಾಗ ಅಲ್ಲಿನ ವಕೀಲುರೊಂದಿಗೆ ಪಣತೊಟ್ಟರು. ನಾವಾ ಏಳು ದಿವುಸ ಉಪವಾಸವಿದ್ದು ಒಂದು ದಿನಕ್ಕಾ ಒಂದೇ ಒಂದು ಕಾಳು ಮೆಣುಸನ್ನು ತಿಂದು ಏಳು ದಿವುಸದಲ್ಲಿ ಸೀತಾರಾಮನ ಗುಡಿಯನ್ನು ಕಟ್ಟುತ್ತೀವೆ ಎಂದು ಪಣುತೊಟ್ಟು ನಿಂತುರು. ಅದುರಂತೆಯೇ ದಿನ ಒಂದಕ್ಕಾ ಒಂದೇ ಒಂದು ಮೆಣಸಿನ ಕಾಳನ್ನು ತಿಂದು ಏಳು ಎಡಗೆ ಕಲ್ಲನ್ನು ಅಂದುರೆ ಏಳು ಜನ ಸೇರಿ ಎತ್ತುವಂತಸ ಕಲ್ಲುಗಳನ್ನು ಹೊತ್ತು ಏಳು ದಿವುಸದಲ್ಲಿ ಗುಡಿಯನ್ನು ಕಟ್ಟಿ ಪೂರ್ಣಗೊಳಿಸಿದರು. ವಕೀಲುರು ಇವರನ್ನು ಕುರಿತು ನೀವಾ ಹೇಳುದಾ ಹಾಗೆ ಏಳೇ ದಿನುಗಳಲ್ಲಿ ಗುಡಿಯನ್ನು ಕಟ್ಟಿ ಪೂರ್ಣಗೊಳಿಸಿದ್ದಿರಿ. ಪಣುದಲ್ಲಿ ನೀವಾ ಗೆದ್ದಿರಿ. ನೀವಾ ಯಾನಾ ಕೇಳುದುರೂವೇ ನಾವಾ ಕೊಡುತ್ತೀವೆ, ಕೇಳು ಎಂದುರು. ಏಳು ದಿವುಸದಿಂದ ಉಪವಾಸವಿದ್ದ ಕಾರ್ನಾ ಮೊದಲು ಊಟು ಮಾಡಿ ಆಮೇಲೆ ಕೇಳುದುರೆ ಆಯ್ತು ಎಂದುಕೊಂಡು ಇವುರು ಕೊಂಗುಮರದ ಹಿಟ್ಟು ಆಡಿನ ತಲೆಯ ಉದುಕದ ಊಟುವನ್ನು ಕೇಳುದುರು. ಅದುರಂತೆಯೇ ವಕೀಲುರು ಅವರುಗೆ ಅಡುಗೆಯನ್ನು ಸಿದ್ಧಗೊಳಿಸಿ ಊಟೋಪಚಾರವನ್ನು ನೀಡುದುರು. ಊಟುವಾದ ಮೇಲೆ ಇವರು ಹೋಗಿ ವಕೀಲುರನ್ನು ನಾವು ಗುಡಿಯನ್ನು ನೀವಾ ಹೇಳುದುಂತೆಯೇ ಏಳು ದಿನು ಉಪವಾಸವಿದ್ದು, ಏಳು ದಿನುದಲ್ಲಿ ಪೂರ್ಣಗೊಳಿಸಿದ್ದೇವೆ. ನೀವಾ ಯಾನಾ ಕೇಳುದುರು ಕೊಡುತ್ತೀವೆ ಎಂದು ಮಾತು ಕೊಟ್ಟಿದ್ದೀರಿ. ಈಗ ನಾವಾ ಕೇಳುಲು ಸಿದ್ಧರಾಗಿದ್ದೇವೆ ಎಂದುರು. ಆಗ ವಕೀಲುರು ನೀವಾ ಕೇಳುದ್ದು ಆಯ್ತು, ನಾವಾ ಕೊಟ್ಟುದ್ದು ಆಯ್ತು ಎಂದು ಹೇಳು ಕಳುಹಿಸಿದುರು. ನೀವಾ ಯಾನಾ ಕೇಳುವುದಿದ್ದುರೂ ಒಂದೇ ಸಾರಿ ಕೇಳುಬೇಕಾಗಿತ್ತು ಎಂದುರು. ಆನಂತುರ ಈ ಗುಡಿಯಲ್ಲಿ ನಿನ್ನಾ ಹೆಸಲೂ ಹೇಳಿಕ

ಮೊದುಲಾಗಲಿ ಹೋಗು ಎಂದು ಹೇಳುದುರು. ಅದುರಂತೆಯೇ ದೇವರ ಸನ್ನಿಧಿಯಲ್ಲಿ ಇಂದಿಗೂ ನಮ್ಮ ಹೆಸಲನ್ನು ಮೊದಲು ಕರೆಯುತ್ತಾರೆ ಎಂದು ಹೇಳುತ್ತಾರೆ. ಪ್ರತಿವರ್ಷ ಪುಲುಪಳ್ಳಿಯ ಸೀತಾರಾಮ ಗುಡಿ ಜಾತ್ರೆಯ ಸಂದರ್ಭದಲ್ಲಿ ಬರಗೂರು ಮನಿತನುದ ಹೆಸಲನ್ನು ಮೊದಲು ಕರೆದು ವೀಳ್ಯವನ್ನು ನೀಡುತ್ತಾರೆ.

ಇದೆ ಕಥೆಯನ್ನು ಇನ್ನೊಂದು ರೀತಿಯಲ್ಲಿ ಹೇಳುತ್ತಾರೆ. ಬರಗೂರು ಮನಿತನುದ ಹಿರಿಯರೊಬ್ಬರು ಪುಲುಪಳ್ಳಿಯ ವಕೀಲುನೊಂದಿಗೆ ಪಂದ್ಯ ಕಟ್ಟಿ, ಏಳು ದಿನು ಉಪವಾಸವಿದ್ದು ದಿನು ಒಂದುಕ್ಕಾ ಒಂದು ಮೆಣುಸಿನ ಕಾಳು ತಿಂದು ಏಳು ದಿನು ಕಳುದು ಮೇಲೆ ಏಳು ಎಡುಗೆ ಕಲ್ಲುನ್ನು ಏಳು ಮಂದಿ ಸೇರಿ ಎತ್ತುವಷ್ಟು ಭಾರುವಿರುವ ಕಲ್ಲುನ್ನು ಎತ್ತುಕೊಂಡು ಹೊಟ್ಟೆಯ ಮೇಲೆ ಒಂದು ಗಂಟೆಯವರೆಗೆ ಇಟ್ಟುಕೊಂಡುರೆ ನೀವಾ ಯಾನಾ ಕೇಳುದುರೂವೇ ಕೊಡುತ್ತೀನೆ ಎಂದು ವಕೀಲುನು ಸವಾಲನ್ನು ಹಾಕಿದುನು. ಅದೇ ರೀತಿ ಬರಗೂರು ಮನಿತನುದ ಹಿರಿಯನು ಪಂದ್ಯದಲ್ಲಿ ಭಾಗುವಹಿಸಿ ಏಳು ದಿನು ಉಪವಾಸವಿದ್ದು ಏಳು ಎಡುಗೆ ಕಲ್ಲುನ್ನು ಒಂದು ಗಂಟೆಯವರೆಗೆ ತನ್ನ ಹೊಟ್ಟೆಯ ಮೇಲೆ ಇಟ್ಟುಕೊಂಡು ಪಂದ್ಯದಲ್ಲಿ ಗೆದ್ದುನು. ಆಗ ವಕೀಲುನು ನೀನಾ ಗೆದ್ದೆ, ನಿನಗಾ ಯಾನಾ ಬೇಕು ಕೇಳು ಕೊಪುತ್ತೀನೆ ಎಂದುನು. ಇವನು ಏಳು ದಿನುಗಳಿಂದ ಉಪವಾಸವಿದ್ದು ಕಾರ್ನಾ ಮೊದುಲು ಊಟು ಮಾಡಿ ನಂತರ ಕೇಳುದುರೆ ಆಯಿತು ಎಂದುಕೊಂಡು ಮೊದುಲು ಕೊಂಗುಮರದ ಹಿಟ್ಟು ಅಡಿನತಲೆ ಉದುಕದ ಊಟುವನ್ನು ಕೇಳುದುನು. ಅದುರಂತೆಯೇ ಅವನುಗೆ ಊಟೋಪಚಾರವನ್ನು ವಕೀಲುರು ನೀಡುದುರು. ಊಟುವಾದ ಮೇಲೆ ವಕೀಲುನ ದಂಡೆಗೆ ಹೋಗಿ ನಾನು ನೀವಾ ಹೇಳುದುಂತೆ ಪಂದ್ಯದಲ್ಲಿ ಭಾಗವಹಿಸಿ ಗೆದ್ದುದ್ದೇನೆ, ನನಗಾ ನೀವಾ ಯಾನಾ ಕೇಳುದುರೂವೇ ಕೊಡುತ್ತೀನೆ ಎಂದು ಮಾತು ನೀಡುದ್ದುರಿ. ನಾನು ಈಗ ಕೇಳಲು ಸಿದ್ಧನಾಗಿದ್ದೇನೆ ಎಂದುನು. ಆದುರೆ ವಕೀಲುನು ಅಯ್ಯ ನೀನಾ ಕೇಳುದ್ದು ಆಯಿತು, ನಾನಾ ಕೊಟ್ಟುದ್ದು ಆಯಿತು, ನಿನ್ನ ಸರದಿ ಮುಗಿಯಿತು. ನೀನಿನ್ನು ಹೊರುಡುಬಹುದು ಎಂದುರು. ನೀನಾ ಯಾನಾ ಕೇಳುವುದಿದ್ದುರೂವೇ ಮೊದುಲೇ ಕೇಳುಬೇಕಾಗಿತ್ತು ಎಂದು ಈ ಗುಡಿಯಲ್ಲಿ ನಿನ್ನ ಹೆಸಲು ಹೇಳುಕೆ ನಿನ್ನದಾಗುಲಿ ಹೋಗು ಎಂದುರು. ಪ್ರತಿವರ್ಷವು ನಡೆಯುವ ಜಾತ್ರೆಯ ಸಂದರ್ಭದಲ್ಲಿ ಪುಲುಪಳ್ಳಿಯ ಸೀತಾರಾಮ ಗುಡಿಯಲ್ಲಿ ಇವರ ಹೆಸಲನ್ನು ಮೊದುಲು ಕರುದು ವೀಳ್ಯವನ್ನು ನೀಡುವ ಪದ್ಧತಿ ಇಂದಿಗೂ ಕಂಡುಬರುತ್ತದೆ.

**೩ ತಾವಟೆ ವಂಶದ ಕಥೆ**

ಒಂದು ಚಿಕ್ಕ ಊರು ಅಲ್ಲಿ ಸುಮಾರು ಇಪ್ಪತ್ತು-ಇಪ್ಪತ್ತೈದು ಮನಿಗಳಿದ್ದವು. ಆ ಊರಿನ ಕಡೀಯಲ್ಲಿ ಒಂದು ಪುಟ್ಟ ಗುಡಿಸಲು ಇತ್ತು. ಅದರಾಗ ಒಬ್ಬಳು ಮುದುಕಿಯು ನಾಲ್ಕು ಪುಟ್ಟ ಗಂಡು ಕೂಸುಗಳೊಂದಿಗೆ ವಾಸುವಾಗಿದ್ದಳು. ಅಜ್ಜಿಯು ಕೂಲುನಾಲಿ ಮಾಡುಕೊಂಡು ಕೂಸುಗಳನ್ನು ಸಾಕುತ್ತಿದ್ದುಳು. ಅಜ್ಜಿಯು ಕೂಲುಗಾಗಿ ದಿನುವು ಹೊಳೆಯನ್ನು ದಾಟುಕೊಂಡು ಹೋಗುಬೇಕಾಗಿತ್ತು. ಆ ಊರಿನಲ್ಲಿ ಜನುರನ್ನು ಹೊಳೆ ದಾಟುಸುಲು ಒಬ್ಬನು ಒಂದು ಅರುಗೋಲನ್ನು ಇಟ್ಟುಕೊಂಡಿದ್ದುನು. ಅಜ್ಜಿಯು ಅವನ ಅರುಗೋಲಿನಲ್ಲಿ ದಿನುವು ಹೊಳೆ ದಾಟುಕೊಂಡು ಹೋಗಿ ಕೂಲು ಮಾಡುಕೊಂಡು ಸಂಜೆ ಅದೇ ಅರುಗೋಲಿನಲ್ಲಿ ಊರಿಗೆ ಹಿಂತಿರುಗಿ ಬೆರುತ್ತಿದ್ದುಳು. ದಿನುಗಳು ಕಳುದುಂತೆ ಒಂದು

ದಿನು ಅಜ್ಜಿಯು ಕೂಲು ಮುಗಿಸಿಕೊಂಡು ಬರುವುದು ತಡುವಾಯಿತು. ಅರಗೋಲಿನವನು ಹೊರುಟು ಹೋಗಿದ್ದುನು. ಅಜ್ಜಿಯು ಗಾಬುರಿಯಿಂದ ಮನಿಯಲ್ಲಿ ನಾಲ್ಕು ಪುಟ್ಟ ಕೂಸುಗಳು ಮಾತ್ರ ಇವೆ. ಹಸಿವೆಯಿಂದ ಅವು ನೆರುಳುತ್ತಿರುತ್ತವೆ ಎಂದು ಯೋಚಿಸುತ್ತಾ ತನ್ನ ಕುಲುದೇವತೆಯಾದ ಕರಿಗಾಳಿ ತಾಯಿಯನ್ನು ನೆನೆಯುತ್ತಾ, ಅಳುತ್ತಾ ಕುಳುತಿದ್ದುಳು. ಆಗಾ ಹೊಳೆಯಿಂದ ಒಂದು ತೆಪ್ಪ ಮೇಲೆ ಬಂತು. ಹೊಳೆಯ ಮಧ್ಯಭಾಗದಿಂದ ಒಂದು ಧ್ವನಿಯು ಕೇಳು ಬಂತು. ನೀನಾ ದಿನುವು ಒಂದು ನಾಂದರಿಯನ್ನು ತಂದು ಈ ತೆಪ್ಪದ ಮೇಲೆ ಹಚ್ಚಿ ಇಡುಬೇಕು. ಆದುರೆ ನೀನಾ ಹೊಳೆ ದಾಟುವ ವಿಷಯವನ್ನು ಯಾರಿಗೂ ಹೇಳುಬಾರುದು. ಒಂದು ವೇಳೆ ನೀನೆನಾದುರೂವೇ ಹೇಳುದುರೆ ನಿನ್ನ ವಂಶುವು ನಾಶವಾಗುತ್ತದೆ. ನೀನಾ ಇನ್ನೂ ಮೇಲಾ ದಿನುವು ಈ ತೆಪ್ಪದ ಮೇಲಾ ಕುಳುತು ಹೊಳೆ ದಾಟು ಕೊಂಡು ಹೋಗುಬಹುದು ಎಂದು ಹೇಳುತು. ಅದುರಂತೆಯೇ ಅಜ್ಜಿಯು ದಿನು ಸಂಜಿ ಈ ಅರುಗೋಲಿನಲ್ಲಿಯೇ ಹಿಂದುರುಗಿ ಊರು ಸೇರುತ್ತಿದ್ದುಳು. ಹೀಗೆ ದಿನುಗಳು ಕಳುದಂತೆ ಅರುಗೋಲಿನವನು ಅಜ್ಜಿಯು ಬೆಳುಗ್ಗೆ ನನ್ನಾ ಜೊತೆ ಅರುಗೋಲಿನಲ್ಲಿ ಬೆರುತ್ತಾಳೆ. ಆದುರೆ ಸಂಜಿ ಮತ್ತೆ ಬೆರುವುದಿಲ್ಲ ಹೇಗೆ ಸಂಜಿ ಊರುಗೆ ಹಿಂತಿರುಗಿ ಬೆರುತ್ತಾಳೆ ಎಂದು ಎಲ್ಲರುನ್ನು ಕೇಳುದುನು. ಇದುರಿಂದ ಎಲ್ಲರೂ ಆಚ್ಚರ್ಯಗೊಂಡುರು. ಅಜ್ಜಿಯನ್ನು ಎಲ್ಲುರೂ ಕೇಳುಲು ಪ್ರಾರಂಭಿಸಿದುರು. ಅಜ್ಜಿಯು ಯಾನಾದುರೂವೇ ಕಾರುಣ ಹೇಳಿ ತಪ್ಪಿಸಿಕೊಳ್ಳುತ್ತಿದ್ದುಳು. ಜನುರು ಆಚ್ಚರ್ಯದಿಂದ ಅಜ್ಜಿಯನ್ನು ಮತ್ತೆ ಮತ್ತೆ ಕೇಳುತ್ತಿದ್ದಾಗ ಒಂದು ದಿನು ಅಜ್ಜಿಯು ಜಂಭುದಿಂದ ನನ್ನನ್ನಾ ತಾಯಿ ಕರಿಗಾಳಿಯು ಆ ಕಡಿ ದಡುದಿಂದ ಈ ಕಡಿಯ ದಡುಕ್ಕೆ ದಿನುವು ಕರುತಂದು ಬಿಡುತ್ತಾಳೆ ಎಂದು ಹೇಳುದುಳು. ಮಾರುನೆಯ ದಿನು ಅಜ್ಜಿಯು ಕೂಲು ಕೆಲ್ಸ ಮುಗುಸುಕೊಂಡು ಎಂದುನುಂತೆಯೇ ಹೊಳೆಯ ದಂಡೆಗೆ ಬಂದುಳು. ಆಗ ಎಂದುನಂತೆಯೇ ತೆಪ್ಪವು ಅಜ್ಜಿಯ ದಂಡೆಗೆ ಬಂದುತು. ಅಜ್ಜಿಯು ತೆಪ್ಪದಲ್ಲಿ ಕುಳುತು ಹೋಗುವಾಗ ಹೊಳೆಯ ಮಧ್ಯಭಾಗದುಲ್ಲಿ ಅಜ್ಜಿಯು ಹೊಳೆಗೆ ಬಿದ್ದು ಹೋದುಳು. ಇತ್ತ ಗುಡಿಸಿಲಿನುಲ್ಲಿರುವ ನಾಲ್ಕು ಕೂಸುಗಳು ಸಹ ಮರುಣಕ್ಕೆ ತುತ್ತಾದುವು. ಇದುರೊಂದಿಗೆ ಅವರ ವಂಶುವು ಕೊನಿಯಾಯಿತು. ನಮ್ಮ ಸಮುದಾಯದಲ್ಲಿ ಹಿಂದೆ ಇದ್ದ ಈ ತಾವಟೆ ವಂಶುವು ದೇವಿಯ ಶಾಪಕ್ಕೆ ತುತ್ತಾಗಿ ಈಗ ಇಲ್ಲುದಂತಾಗಿದೆ ಎಂದು ಸಮುದಾಯದ ಹಿರಿಯರು ಹೇಳುತ್ತಾರೆ.

**೬ : ೪ ಗಾದೆಗಳು**

ಗಾದೆಯೂ ಕೂಡ ಮೌಖಿಕ ಸಾಹಿತ್ಯದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿದೆ. ಕೇವಲ ಒಂದೇ ವಾಕ್ಯದಲ್ಲಿ ಜೀವನದ ಅನೇಕ ಮಗ್ಗುಲುಗಳನ್ನು ವಿವರಿಸುತ್ತದೆ. ಗಾದೆಗಳ ಮೂಲಕ ಸಂಸ್ಕೃತಿಯಲ್ಲಿನ ವಿಭಿನ್ನ ಮಾದರಿಯ ಅಂಶಗಳನ್ನು ತಿಳಿಯಲು ಸಾಧ್ಯವಿದೆ. ಒಂದೊಂದು ಗಾದೆಯು ಒಂದೊಂದು ಸಮುದಾಯದ ಪ್ರತೀಕವಾಗಿಯೂ ನಿಲ್ಲುತ್ತದೆ. ಶಿಷ್ಟ ಸಾಹಿತ್ಯದ ವೇದಕ್ಕಿಂತಲೂ ಗಾದೆ ದೊಡ್ಡದು. ಸಮುದಾಯಗಳ ಜೀವನದ ಅನುಭವದ ಸಂಗತಿಗಳಾಗಿ ಗಾದೆಗಳು ಸಾಂದರ್ಭಿಕವಾಗಿ ಹುಟ್ಟಿದಂತಹವು. ಗಾದೆಗಳು ರೂಪು ಪಡೆಯಲು ನಿರ್ದಿಷ್ಟ ಕಾಲ, ಸಂದರ್ಭ, ಇರುವುದಿಲ್ಲ. ಬದಲಾಗಿ ಇವು ಬದುಕಿನ ಘಟನೆಗಳ ಹಿನ್ನೆಲೆಯಲ್ಲಿ ಬಂದಂತಹ ಉತ್ಪಾದನೆಗಳು. ಗಾದೆಗಳ ಒಟ್ಟು ಆಶಯ, ಸಾಮಾಜಿಕ ಜೀವನ ದೋಷಗಳನ್ನು ತಿದ್ದುವುದು. ಇವುಗಳ ವ್ಯಾಪ್ತಿಯು ಜಗತ್ತಿನಾದ್ಯಂತ ಹರಡಿದೆ. ಸಂಸ್ಕೃತಿಯ ಬಿಂಬಿಕಗಳಾಗಿ ಮಾನವನ ಭೌತಿಕ ಹಾಗೂ ಬೌದ್ಧಿಕ ಸ್ವರೂಪವನ್ನು ಗಾದೆಗಳು ಎತ್ತಿ ಹೇಳುತ್ತವೆ.

ಪ್ರಸ್ತುತ ಒಡಿಗ ಸಮುದಾಯವು ತಮ್ಮ ದೈನಂದಿನ ಜೀವನದಲ್ಲಿ ಹಲವಾರು ಗಾದೆಗಳನ್ನು ಬಳಸುತ್ತಾರೆ. ಈ ಗಾದೆಗಳು ಅವರ ದೈನಂದಿನ ಜೀವನ, ಬೇಟೆ, ನಂಬಿಕೆ, ನಿಷೇಧ, ಸಂಸ್ಕೃತಿ, ಕೃಷಿ, ಮಳೆ, ಬೆಳೆ, ಹವಾಮಾನ, ಕೌಟುಂಬಿಕ ವಲಯ, ಮನರಂಜನೆ, ಕೆಡುಕು, ಒಳಿತು ಇವೆಲ್ಲವುಗಳ ಉತ್ಪಾದನೆಯಾಗಿ ಹೊರಹೊಮ್ಮಿವೆ. ಅಂತಹ ಕೆಲವು ಗಾದೆಗಳನ್ನು ಇಲ್ಲಿ ವಿವರಿಸಲಾಗಿದೆ.

**೧ ತೆಪ್ಪದ ಮೇಲೆ ಕುಳಿತುಕೊಂಡು ತುಪ್ ಎಂದು ಉಗಿದು ನಾಮ ಹಾಕಿದ ಜನ**

ಇದು ಒಡಿಗ ಸಮುದಾಯದ ಹೆಗ್ಗನೂರು ಮನೆತನ ಕುರಿತಾಗಿ ಬಂದಂತಹ ಗಾದೆ. ಕಷ್ಟ ಬಂದಾಗ ಸಹಾಯ ಪಡೆದು ನಂತರ ಆ ಸಹಾಯವನ್ನು ಸೇರಿಸದೇ ದ್ರೋಹ ಬಗೆಯುವ ಯಾವುದೋ ಒಂದು ಸಂದರ್ಭದಿಂದ ಈ ಗಾದೆ ಬಂದಿದೆ. ಬಹುಶಃ 'ಕೊಟ್ಟೋನು ಕೋಡಂಗಿ ಇಸಗೊಂಡೋನು ಈರಭದ್ರ' ಎಂಬ ಗಾದೆಗೆ ಇದು ಪರ್ಯಾಯ ಎಂಬಂತೆ ಮೂಡಿಬಂದಿದೆ.

**೨ ಕತ್ತೆಗೆ ಮೂರು ಹಣ ಕಟ್ಟಿದರೂ ಒಂದು ಕಾಸು ಕೊಡಲಿಲ್ಲ**

ಇದು ಮಾಸಾಲು ಮನೆತನದವರ ಕುರಿತಾಗಿ ಬಂದಂತಹ ಗಾದೆ. ಬೇರೆಯವರು ಮಾಡಿದ ಸಹಾಯವನ್ನು ತೆಗೆದುಕೊಂಡು, ನಂತರ ಪರಿಯಿಂದ ಬೇಡಿದರೂ ಏನೂ ಯಾರಿಗೂ ಕೊಡದ ಈ ಮಾಸಾಲು ಪಂಗಡದ ಒಂದು ಸಂದರ್ಭದಿಂದ ಈ ಗಾದೆ ಮೂಡಿ ಬಂದಿದೆ.

**೩ ದೊಂಬರ ಆಟ ಆಡಿದರೂ ಮೂರು ಕಾಸು ಕೊಡಲಿಲ್ಲ**

ಇದು ಕೂಡ ಜಿಪುಣತನವನ್ನು ಸೂಚಿಸುವ ಒಂದು ಗಾದೆ.

**೪ ಒಂದು ಕುರ್‌ನರಿ ಬಾಡು ಒಂಭತ್ತು ವಡಚಿಟ್ಟು**

**೫ ಕೊಂಗಮರದ ಹಿಟ್ಟು ಆಡಿನ ತಲೆ**

ಈ ಎರಡು ಗಾದೆಗಳು ಬರಗೂರು ಮನೆತನದ ದುಡುಕುತನವನ್ನು ಹೇಳುತ್ತವೆ. ಒಮ್ಮೆ ಕೇರಳದ ವಕೀಲನೊಂದಿಗೆ ಇವರು ಗುಡಿಯನ್ನು ಕಟ್ಟಲು ಪಂದ್ಯ ಹಾಕುತ್ತಾರೆ. ಏಳುದಿನ ಕಾಲ ಊಟವಿಲ್ಲದೇ ಕೇವಲ ಉಂಡೆ ಮೆಣಸು ತಿಂದು ಗುಡಿಕಟ್ಟಿ ಗೆದ್ದರು. ಇದರಿಂದ ವಕೀಲ ಏನಾದರೂ ಬೇಡಿ ಕೊಡುತ್ತೇನೆ ಎನ್ನುತ್ತಾನೆ. ಏಳು ದಿವಸ ಊಟವಿಲ್ಲದ ಇವರು ದುಡುಕಿ ಕುರಿಬಾಡು, ದೋಸೆ ಕೇಳುತ್ತಾರೆ. ಇದರಿಂದ ಮೇಲಿನ ಗಾದೆಗಳು ಮೂಡಿಬಂದಿವೆ.

**೬ ಅಟ್ಟಮೇಲೆ ಒಲೆ ಉರಿತು ಕೆಟ್ಟಮೇಲೆ ಬುದ್ಧಿ ಬಂತು**

ಯಾವುದೇ ಕೆಲಸ ಮಾಡುವಾಗ ಮನುಷ್ಯ ಯೋಚಿಸಬೇಕು. ಮೊದಲೇ ದುಡುಕಿ ಬರಿಗೈಯಾಗಬಾರದು ಎಂಬ ನೀತಿಯನ್ನು ಹೇಳುವ ಗಾದೆಯಿದು.

೭ ರಚ್ಚನೊಂದಿಗೆ ಹಟವಾಯಿತು ಬೀಸುಕಲ್ಲು ಎದೆ ಮೇಲೆ ಇಟ್ಟರು ಮೂರು ಕಾಸು ಕೊಡಲಿಲ್ಲ

ಇದು ಭೂದಾಡಿ ಮನೆತನದವರ ಜಿಪುಣತನವನ್ನು ಸೂಚಿಸುವ ಗಾದೆ.

೮ ಆನೆ ಅಂದರೆ ಚಾನೆ ಅಂತಾನೆ

೯ ಮೂರು ತರೋದು ಮೂರು ಬಿಡೋದು

ಈ ಎರಡು ಗಾದೆಗಳು ಮನುಷ್ಯನ ಪೆಕರತನವನ್ನು ಹೇಳುತ್ತವೆ.

೧೦ ಸಂಜೆ ಆದರೆ ಸಂದಿಗೆ ಸರಿ

ವಯಸ್ಸಾದವರ ಕುರಿತು ಬಂದಂತಹ ಗಾದೆಯಿದು. ವಯಸ್ಸಾದವರನ್ನು ಸಂಜೆಗೆ ಹೋಲಿಸಿ ಒಂದು ಕಡೆ ಮೂಲೆಯಲ್ಲಿ ಕೂತಿರಿ ಎಂಬುದನ್ನು ವಿವರಿಸುತ್ತದೆ.

೧೧ ಧರ್ಮಗಂಡಿ ಕರ್ಮಗಂಡಿ

ಧರ್ಮ ಉಳಿಯಿತು, ಕರ್ಮ ಅಳಿಯಿತು ಎಂಬುದನ್ನು ಈ ಗಾದೆ ವಿವರಿಸುತ್ತದೆ. ಒಡಿಗರು ಇದಕ್ಕೊಂದು ಕಥೆ ಹೇಳುತ್ತಾರೆ. ಇಬ್ಬರು ಸ್ನೇಹಿತರು ಹೊನ್ನು ತರಲು ಕಾಡಿಗೆ ಹೋಗಬೇಕು. ಒಬ್ಬ ಬುತ್ತಿ ಕಟ್ಟಿಕೊಂಡು, ಇನ್ನೊಬ್ಬ ಚೂರಿ ಹಿಡಿದುಕೊಂಡು ತೆರಳುತ್ತಾರೆ. ಕಾಡಿನಲ್ಲಿ ಚೂರಿಯವನು ತನ್ನ ಸ್ನೇಹಿತನ ಕಣ್ಣುಕಿತ್ತಿ ಹೊನ್ನು ತರಲು ಒಬ್ಬನೇ ಹೋಗುತ್ತಾನೆ. ಇತ್ತ ಕಾಡಿನಲ್ಲಿ ಒಬ್ಬ ರಾಜಕುಮಾರಿ ಮೂರ್ಛೆಯಲ್ಲಿರುತ್ತಾಳೆ. ಮಣ್ಣು ಮತ್ತು ರೋಮ (ಕೂದಲು)ಗಳನ್ನು ಮುಟ್ಟಿಸಿದರೆ ಅವಳಿಗೆ ಎಚ್ಚರವಾಗುತ್ತದೆಂದು ಪ್ರಾಣಿಗಳು ಮಾತನಾಡಿಕೊಳ್ಳುತ್ತಿದ್ದವು. ಕುರುಡ ಅದನ್ನು ಕೇಳಿ ರಾಜಕುಮಾರಿಗೆ ಮುಟ್ಟಿಸುತ್ತಾನೆ. ಇದರಿಂದ ಇವನಿಗೆ ರಾಜ ಸನ್ಮಾನವಾಗಿ ನಗನಾಣ್ಯ ಸಿಕ್ಕುತ್ತದೆ. ಅತ್ತ ಚೂರಿಯವನು ಹೊನ್ನು ಹುಡುಕಿ ಸಿಗದೇ ಸಾಯುತ್ತಾನೆ. ಇದರಿಂದ ಧರ್ಮಕ್ಕೆ ಜಯ ಕರ್ಮಕ್ಕೆ ಅಪಜಯವೆಂಬ ಹಿನ್ನೆಲೆಯಲ್ಲಿ ಈ ಗಾದೆ ಬಂದಿದೆ.

೧೨ ಕರಕೊಳ್ಳಿ ಅಂತ ಎಮ್ಮೆ ಕೊಟ್ಟರೆ ಹಿತ್ತಲಿಗೆ ಹೋಗಿ ಹುಲ್ಲು ಹಿಡಿದು ನೋಡುತ್ತಾನೆ

ಯಾವುದೋ ಒಂದು ಬಗೆಯಲ್ಲಿ ಸಹಾಯವಾಗಿ ಏನಾದರೂ ಕೊಟ್ಟರೆ, ಅದನ್ನು ತೆಗೆದುಕೊಂಡು ನೇರವಾಗಿ ಉಪಯೋಗಿಸದೇ ಅದರ ಪೂರ್ವಾಪರಗಳನ್ನು ನೋಡುವವರುಂಟು. ಉಚಿತವಾಗಿ ಕೊಟ್ಟ ವಸ್ತುಗಳನ್ನು ಹೀಗೆ ನೋಡಬಹುದೇ ಎಂಬ ಭಾವವು ಈ ಗಾದೆಯಿಂದ ಹೊರಡುತ್ತದೆ.

೧೩ ನಾಟಿ ಹಾಕಿದ ಹೊಲ ಚೆಂದ ಮೇಟಿ ನೆಟ್ಟ ಕಣ ಚೆಂದ

ಇದು ಕೃಷಿ ಸಂಬಂಧಿ ಗಾದೆಯೆಂಬುದಾಗಿ ಮೇಲ್ನೋಟಕ್ಕೆ ಕಂಡುಬರುತ್ತದೆ. ಜೊತೆಗೆ ಇದು ವ್ಯಕ್ತಿಗತ ಜೀವನಕ್ಕೂ ಹೋಲಿಸುತ್ತಾರೆ. ಮನುಷ್ಯ ತನ್ನ ಜೀವನದಲ್ಲಿಯೂ ಹಲವಾರು ಸಂಸ್ಕಾರಗಳನ್ನು ಹೊಂದಿ ಚೆಂದವಾಗಿರಬೇಕೆಂಬುದು ಈ ಗಾದೆಯ ಅಂತರಾರ್ಥ.

**೧೪ ಗಂಡ ಇರುವ ಗಂಡು ಕೂಸು ಹೆತ್ತರೆ ಮುಂಡ್ಯಾಕ ಮುಕ್ಕರಕ**

ಇದು ಟೀಕೆಯನ್ನು ಮಾಡುವ ಗಾದೆ. ಬರೀ ಹೆಣ್ಣು ಸಂತಾನವಿರುವ ಸ್ತ್ರೀಯರು ತಮ್ಮ ನೆರೆಹೊರೆಯ ಮನೆಯ ಸ್ತ್ರೀಯರಿಗೆ ಗಂಡು ಮಗುವಾದರೆ ಹೊಟ್ಟೆಕಿಚ್ಚು ಪಡುವುದುಂಟು. ಇಂಥ ಹೊಟ್ಟೆಕಿಚ್ಚು ಪಡುವ ಕೆಲವು ಸ್ತ್ರೀಯರನ್ನು ಕುರಿತು ಈ ಗಾದೆ ಬಂದಿದೆಯೆಂದು ಸಮುದಾಯ ಹೇಳುತ್ತದೆ. ಅಂದರೆ ಮಾಡುವ ಶಕ್ತಿಯಿದ್ದವರಿಗೆ ಪ್ರತಿಫಲವಿದೆ. ಇಲ್ಲದವರಿಗೆ ಅದು ಸಾಧ್ಯವಿಲ್ಲ ಎಂಬ ಭಾವಾರ್ಥವಿದೆ.

**೧೫ ಹಿರಿಯಕ್ಕನ ಚಾಳಿ ಮನೆಮಂದಿಗೆಲ್ಲ**

ಈ ಗಾದೆಯೂ ಕರ್ನಾಟಕದ ಎಲ್ಲ ಭೌಗೋಳಿಕ ಪರಿಸರದಲ್ಲಿ ರೂಢಿಯಲ್ಲಿದೆ.

**೧೬. ತಾಯಿಯಂತೆ ಮಗಳು ನೂಲಿನಂತೆ ಸೀರೆ**

ಈ ಗಾದೆಯೂ ಹಿರಿಯಳಾದ ತಾಯಿಯು ಕೌಟುಂಬಿಕ ಜವಾಬ್ದಾರಿಯಲ್ಲಿ ಮಕ್ಕಳನ್ನು ಉತ್ತಮ ಸಂಸ್ಕಾರಗಳಿಂದ ಬೆಳೆಸಬೇಕು. ಇದಕ್ಕೆ ತಾನು ಮೊದಲು ಸಂಸ್ಕಾರವನ್ನು ಹೊಂದಿರಬೇಕು. ಇಲ್ಲವಾದರೆ ತಾಯಿಯಂತೆ ಮಕ್ಕಳು ಬೆಳೆಯುತ್ತಾರೆ ಎಂಬ ಭಾವವಿದೆ.

**೧೭ ಕೂತು ತಿಂದರೆ ಕುಡಿಕೆ ಹೊನ್ನು ಸಾಲದು**

**೧೮ ಊರು ಉಪಕಾರ ಬಲ್ಲದು ಹೆಣ ಶೃಂಗಾರ ಬಲ್ಲದು**

**೧೯ ಇದ್ದರೆ ಸಿದ್ದನ ಜ್ಞಾನ ಇಲ್ಲದಿದ್ದರೆ ಅಮ್ಮನ ಜ್ಞಾನ**

ಮನುಷ್ಯ ತನಗೆ ಸಂಪತ್ತು ಇತ್ಯಾದಿ ಇದ್ದಾಗ, ಒಂದು ರೀತಿ ಇಲ್ಲದಿದ್ದಾಗ ಒಂದು ರೀತಿ ಎಂಬ ಭಾವವಿದೆ.

ಹೀಗೆ ಒಡಿಗ ಸಮುದಾಯದವರೂ ಕೂಡ ತಮ್ಮ ದೈನಂದಿನ ಸಾಮಾಜಿಕ ಜೀವನದಲ್ಲಿ ಹಲವಾರು ಬಗೆಯ ಅನುಭವಗಳಿಂದ ಗಾದೆಗಳನ್ನು ಹುಟ್ಟುಹಾಕಿಕೊಂಡಿದ್ದಾರೆ. ಈ ಗಾದೆಗಳು ದಿನನಿತ್ಯದ ಜೀವನದಲ್ಲಿ ನಡೆಯುವ ಸಂಸಾರ ಸುಖ-ದುಃಖ ಆಚಾರ-ವಿಚಾರ, ನಂಬಿಕೆ, ವಿಧಿ-ನಿಷೇಧ ಹೀಗೆ ಹಲವಾರು ಸಂಗತಿಗಳನ್ನು ಒಳಗೊಂಡಿವೆ. ಜೀವನವು ಒಂದು ನಿಯಮವನ್ನು ದಾಟಿದರೆ, ಅದನ್ನು ನಿಯಂತ್ರಿಸಿ ಸುಗಮಗೊಳಿಸಲು ಗಾದೆಗಳು ನೆರವಾಗಿವೆ. ಒಡಿಗ ಸಮುದಾಯದಲ್ಲಿ ಕೆಲವು ಗಾದೆಗಳು ಸಮುದಾಯದ ಉಪಪಂಗಡಗಳನ್ನು ಕುರಿತಾಗಿ ಬಂದಿವೆ. ಉಳಿದಂತೆ ಕರ್ನಾಟಕದ ಇತರೆ ಭಾಗದಲ್ಲಿ ಇರುವಂತೆ ಸಾಮಾನ್ಯವಾದ ಗಾದೆಗಳಿವೆ. ಆದರೆ ಕೆಲವು ಗಾದೆಗಳು ಮಾತ್ರ ಪ್ರಸ್ತುತ ವಿಷಯಗಳನ್ನು ಪರ್ಯಾಯ ನೆಲೆಯಲ್ಲಿ ಹೇಳುತ್ತವೆ ಎನ್ನಬಹುದು.

**೬ : ೫ ಒಗಟುಗಳು**

ಮೌಖಿಕ ಪರಂಪರೆಯ ಸಾಹಿತ್ಯದಲ್ಲಿ ಒಗಟುಗಳು ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿವೆ. ಒಗಟು ಪ್ರಮುಖವಾಗಿ ಸಮುದಾಯಗಳ ಬುದ್ಧಿ ಪ್ರಧಾನವಾಗಿ ಜನಿಸಿದ ಹೇಳಿಕೆಗಳಾಗಿವೆ. ಬುದ್ಧಿಯ ಕೌಶಲ್ಯದೊಂದಿಗೆ ತಮ್ಮೊಂದಿಗಿನ

ಸಮಾಜದ ಹಲವಾರು ಸಂಗತಿಗಳನ್ನು, ವಸ್ತುಗಳನ್ನು ರಹಸ್ಯವೆಂಬಂತೆ ರಕ್ಷಿಸುತ್ತವೆ. ಒಗಟುಗಳು ಶಿಷ್ಟ ಸಾಹಿತ್ಯದಲ್ಲಿಯೂ ಜನಿಸಿವೆ. ಜೀವನದ ವೈವಿಧ್ಯತೆಯನ್ನು ಪ್ರಶ್ನೆಯ ಮೂಲಕವಾಗಿ, ರಹಸ್ಯದ ಮೂಲಕವಾಗಿ ಹಿಡಿದಿಟ್ಟಿರುತ್ತದೆ. ಗಣಿತ, ವಿನೋದ, ಟೀಕೆ, ರಹಸ್ಯ, ಗಂಭೀರ ಮುಂತಾದ ಗುಣಗಳು ಒಗಟಿನಲ್ಲಿ ಅಡಗಿಕೊಂಡಿರುತ್ತವೆ. ಜಗತ್ತಿನ ಎಲ್ಲಾ ಜನ ಸಮುದಾಯಗಳು ಒಗಟುಗಳನ್ನು ಸೃಷ್ಟಿಸಿಕೊಂಡಿವೆ. ಒಗಟು ಆಯಾ ಸಮುದಾಯದ ವ್ಯಾಪ್ತಿಗಿಂತ ಹೆಚ್ಚಾಗಿ ಸಾರ್ವತ್ರಿಕವಾಗಿರುವುದನ್ನು ಗಮನಿಸಬಹುದು. ಬುಡಕಟ್ಟು ಸಮುದಾಯಗಳಲ್ಲಿ ಒಗಟಿನ ಬಗೆ, ಸಂದರ್ಭ, ಬಹುಶಃ ಕೊಂಚ ಭಿನ್ನವಾಗಿರಬಹುದು. ಒಗಟಿನಲ್ಲಿ ಒಂದೊಂದು ಸಮುದಾಯದ ನೆಲೆ, ಜೀವನ ಪದ್ಧತಿ, ಸಮಕಾಲೀನ ವಸ್ತು, ಪ್ರಾಕೃತಿಕ ಸ್ಥಿತಿ, ಜೀವನ ಸಂಸ್ಕೃತಿಯು ಅಡಗಿರುತ್ತದೆಂಬುದನ್ನು ಗುರುತಿಸಬಹುದು. ಈ ದೃಷ್ಟಿಯಿಂದ ಒಗಟುಗಳು ಮಹತ್ವವನ್ನೊಂದಿವೆ. ಸಮುದಾಯದ ಸಾಂಪ್ರದಾಯಿಕ, ಸಾಮಾಜಿಕ, ರಾಜಕೀಯ, ಆರ್ಥಿಕ ಸ್ಥಿತಿಗತಿಯನ್ನು ವಿವರಿಸುವ ಒಗಟುಗಳು ಇವೆ. ಆಯಾ ಆಚರಣಾ ಸಂದರ್ಭ, ಹಬ್ಬ ಹರಿದಿನಗಳಲ್ಲಿ ಒಗಟುಗಳನ್ನು ಹೇಳುವುದು ಮತ್ತು ಒಗಟುಗಳನ್ನು ಬಿಡಿಸುವುದು ಒಂದು ಮನರಂಜನೆಯಾಗಿಯೂ ನಡೆಯುತ್ತದೆ. ಪ್ರಶ್ನೋತ್ತರ ಮಾದರಿಯೇ ಇವುಗಳ ಮೂಲ ಲಕ್ಷಣ. ಆ ಮೂಲಕ ಜೀವನದ ಮಾದರಿಗೆ ಮಾರ್ಗದರ್ಶಿಯಾಗಿಯೂ ಒಗಟುಗಳು ಕಾರ್ಯ ನಿರ್ವಹಿಸುತ್ತವೆ. ಇವುಗಳಲ್ಲಿ ಹಿರಿಯರಿಗೆ, ಕಿರಿಯರಿಗೆ ಪ್ರತ್ಯೇಕವಾಗಿ ಹುಟ್ಟಿಕೊಂಡ ಒಗಟುಗಳಿವೆ. ಹೀಗೆ ಸಾಮಾಜಿಕ ವ್ಯವಸ್ಥೆಯ ಬಹುಮುಖವನ್ನು ವಿವರಿಸುವ ಒಗಟುಗಳಿಗೆ ಅತ್ಯಂತ ಮಹತ್ವವಿದೆ.

ಒಡಿಗ ಸಮುದಾಯದಲ್ಲಿಯೂ ಹಲವಾರು ಒಗಟುಗಳು ಸೃಜನಗೊಂಡಿವೆ. ಈ ಒಗಟುಗಳು ಸಾಮಾಜಿಕ, ಸಾಂಸ್ಕೃತಿಕ ಅಂಶಗಳ ಅನುಭವದಲ್ಲಿ ಪರಿಪಕ್ವಗೊಂಡಂತವು. ಆ ಮೂಲಕ ಒಡಿಗರ ಮೌಖಿಕ ಸಾಹಿತ್ಯ ಸೃಷ್ಟಿಯ ಸಾಮರ್ಥ್ಯವನ್ನು ನಾವು ಗುರುತಿಸಲು ಸಾಧ್ಯವಿದೆ. ಒಡಿಗ ಸಮುದಾಯದ ಕೆಲವು ಒಗಟುಗಳನ್ನು ಈ ಕೆಳಗೆ ನೀಡಲಾಗಿದೆ.

೧ ಅಳುತ್ತದೆ, ಕೂಗುತ್ತದೆ ಮನೆಬಿಟ್ಟು ಹೋಗುವುದಿಲ್ಲ (ನಾಲಿಗೆ)

೨ ಅಡಿವಾರದ ಮೇಲೆ ಚಪ್ಪರ (ಚಾಣೆ ಗೆಣಸು)

೩ ಅಲ್ಲಿ ಗುಳು ಗುಳುಕು ಇಲ್ಲಿ ಗುಳು ಗುಳುಕು ದೇವರ ಮುಂದೆ ಗುಳು ಗುಳಕು (ತೆಂಗಿನಕಾಯಿ)

೪ ಅವೆಜಗರಿ ಹೊಟ್ಟೆಯಲ್ಲಿ ಹುಟ್ಟಿದವ ಮುತ್ತಿನ ಮಣಿ (ಹಲಸಿನ ಹಣ್ಣು)

೫ ಅಟ್ಟದ ಮೇಲೆ ಪುಟ್ಟ ಲಕ್ಷ್ಮಿ (ಕುಂಕುಮ)

೬ ಎತ್ತಬಾರದ ಹಲಗೆ ಎಣಿಸಬಾರದ ಗೆಜ್ಜೆ (ಆಕಾಶ -ನಕ್ಷತ್ರ)

೭ ಒಂದು ಕಾಲಿನ ಕೋಳಿ ಹೊಟ್ಟೆ ತುಂಬಾ ಮೊಟ್ಟೆ (ಅಡಿಕೆಮರ)

೮ ಕರಿಕಲ್ಲಿನ ಮೇಲೆ ಬಿಳಿ ರಂಗಯ್ಯನ ಬಿಡುತ್ತಾರೆ. (ದೋಸೆ ಹಾಕುವುದು)

೯ ಕುಳ್ಳಿನವ, ಹಸಿರುಕೊಟ್ಟು ಗಿರಿಜ ಮೀಸೆ ದೊಣ್ಣೆ ಹಿಡಿದು ನಿಂತಿರುತ್ತಾನೆ (ಮುಸುಕಿನ ಜೋಳ)

೧೦ ಕುದುರೆ ಓಡುತ್ತಿದೆ ಕುಂಕುಮ ಚೆಲ್ಲುತ್ತಿದೆ (ರಾಗಿ ಬೀಸುವ ಕಲ್ಲು, ಹಿಟ್ಟು)

೧೧ ಕುಳ್ಳಗವನಿಗೆ ಬೆಳ್ಳಿ ಕವಚ (ಬೆಳ್ಳುಳ್ಳಿ)

೧೨ ಚಿಕ್ಕಮನೆ ಚಿನ್ನದ ಅಡಿ (ಹಲ್ಲುಗಳು)

೧೩ ದೊಡ್ನ ಅರಳಿಮರ ದಡ್ಡಿನ ಬಿದ್ದರೆ ಎಲ್ಲಾ ಚಲ್ಲಾಪಿಲ್ಲಿ (ಸೂರ್ಯ)

೧೪ ನಮ್ಮ ಅಮ್ಮನಿಗೆ ವರ್ಷ ವರ್ಷ ಹೊಸ ಬಟ್ಟೆ ಬೇಕು (ಮನೆಗೆ ಹುಲ್ಲು ಹೊದಿಸುವುದು)

೧೫ ಬಿಳಿ ಎತ್ತಿಗೆ ಹಸಿರು ಬಾಲ (ಮೂಲಂಗಿ)

೧೬ ನೂರೊಂದು ಕೋಣನಿಗೆ ಒಂದೇ ಬಾಲ (ಬಾಳೆಗೊನೆ)

೧೭ ಮೂಡಲಿಂದ ಮೂರು ಆರತ್ತಿರು ಬರುತ್ತಾರೆ, ಅವರನ್ನು ಎಣಿಸಬಹುದು ಅವರ ನೆರಿಗೆ ಎಣಿಸೋಕಾಗಲ್ಲ (ಬಿಳಿ ಅಣಬೆ)

೧೮ ಸಾವಿರ ರೂಪಾಯಿನ ಹೋರಿ ನೂಲಿನ ಮೇಲೆ ಸವಾರಿ (ತಾಳಿ)

೧೯ ಹಗ್ಗ ಹಾಸಿದೆ, ಕೋಣ ಮಲಗಿದೆ (ಸೌದೆ)

೨೦ ಹಸಿರು ಮೇಡಮ್ಮು ಕೆಂಪು ಡಾಕ್ಟರು ಕರಿ ಗುಳಿಗೆ (ಪರಂಗಿಹಣ್ಣು)

೨೧ ಹಿಡಿದರೆ ಹಿಡಿ ತುಂಬಾ ಬಿಟ್ಟರೆ ನೂರು ಗಜ (ಮೀನು ಹಿಡಿಯುವ ಬಲೆ)

**೬ : ೬ ಕಲೆ ಕ್ರೀಡೆಗಳು**

ಬುಡಕಟ್ಟು ಸಮುದಾಯಗಳಲ್ಲಿ ಕಲೆಗೆ ಪ್ರಮುಖ ಸ್ಥಾನವಿದೆ. ಪರಂಪರಾಗತವಾಗಿ ಬೆಳೆದು ಬಂದಿರುವ ಕಲೆಗಳು ಅಸಂಖ್ಯಾತವಾಗಿವೆ. ಮೂಲತಃ ಕಾಡುವಾಸಿಗಳಾದ ಬುಡಕಟ್ಟು ಸಮುದಾಯಗಳು ತಮ್ಮ ದೈನಂದಿನ ಹಾಗೂ ವಿಶೇಷ ದಿನಮಾನಗಳಲ್ಲಿ ತಾವು ವಾಸಿಸುವ ಮನೆ ಗೋಡೆ, ನೆಲ, ಅಂಗಳ, ಬಾಗಿಲು, ಆವರಣಗಳಲ್ಲಿ ಅದರಂತೆ ಹಲವಾರು ವಸ್ತುಗಳ ಮೇಲೆ ಚಿತ್ರಗಳನ್ನು ಬಿಡಿಸಿದ್ದಾರೆ. ತಮ್ಮ ಸುತ್ತಣ ಕಂಡು ಬರುವ ಪ್ರಕೃತಿಯಲ್ಲಿನ ಮರ, ಗಿಡ, ಪಶು, ಪಕ್ಷಿ, ಪ್ರಾಣಿ ಅಲ್ಲದೇ ಮನುಷ್ಯ, ದೈವ ಹೀಗೆ ಅನೇಕ ಬಗೆ ಬಗೆಯ ಚಿತ್ರಗಳನ್ನು ಬಿಡಿಸಿದ್ದಾರೆ. ಇವರಿದೆ ನಿಸರ್ಗದತ್ತವಾದಂತಹ ಬಣ್ಣಗಳು ದೊರೆಯುವುದರಿಂದ ಕಟ್ಟಿಗೆಯ ಹಲಗೆ, ಬಟ್ಟೆ ಮುಂತಾದ ವಸ್ತುಗಳ ಮೇಲೆ ಚಿತ್ರಗಳನ್ನು ಬಿಡಿಸಿದ್ದಾರೆ. ಅದು ಅವರಿಗೆ ಮನರಂಜನೆಯಾಗಿಯೂ ತೋರಿರಬಹುದು. ಅಲ್ಲದೇ ಈ ಚಿತ್ರಗಳಿಂದ ಆಯಾ ಸಮುದಾಯದ ಕಲಾ ನೈಪುಣ್ಯತೆಯನ್ನು ಗುರುತಿಸಬಹುದು. ಶಿಷ್ಟ ಕಲೆಗಳಿಗಿಂತ ಅತ್ಯುತ್ತಮ ಕಲಾಕೃತಿಗಳಾಗುವಂತಹ ಈ ರೀತಿಯ ಜಾನಪದ ಕಲಾ ಪ್ರಕಾರದಿಂದ ಒಂದು ಪರಂಪರೆಯ ಶುದ್ಧ ಕಲಾಸಂಪತ್ತು ಮತ್ತು ಸಮಕಾಲೀನ ಸಂಸ್ಕೃತಿಯನ್ನು ತಿಳಿಯಲು ಸಾಧ್ಯವಿದೆ.

ಒಡಿಗ ಸಮುದಾಯವೂ ವೈವಿಧ್ಯಮಯವಾದಂತಹ ಕಲೆಯನ್ನು ರೂಢಿಸಿಕೊಂಡಿದ್ದರೂ ಇಂದು ಅವು ಉಳಿದಿಲ್ಲ. ಪರಂಪರೆಯಲ್ಲಿದ್ದ ಇವರ ಕಲೆಯ ಆಸಕ್ತಿಯನ್ನು ಮುಖ್ಯವಾಗಿ ಹೀಗೆ ಗುರುತಿಸಬಹುದು.




**೬ : ೬ : ೧ ಚಿತ್ರಕಲೆ**

ಪ್ರಕೃತಿಯ ಮಧ್ಯದಲ್ಲಿ ಜೀವಿಸುತ್ತಿರುವ ಒಡಿಗರು ತಮ್ಮದೇ ಆದಂತಹ ಚಿತ್ರಕಲೆಯನ್ನು ರೂಢಿಸಿಕೊಂಡಿದ್ದಾರೆ. ಇವರು ವಾಸಿಸುವ ಗುಡಿಸಲುಗಳ ಗೋಡೆಯ ಮೇಲೆ ಹಲವು ಬಗೆಯ ಚಿತ್ರಗಳು ಬರೆಯಲ್ಪಟ್ಟಿರುತ್ತವೆ. ಈ ಚಿತ್ರಗಳು ಹೆಚ್ಚಾಗಿ ತಮ್ಮ ಸುತ್ತಣ ಇರುವ ನವಿಲು, ಗಿಳಿ, ಹಕ್ಕಿ, ಪಕ್ಷಿಗಳು, ಹಲವು ಪ್ರಾಣಿಗಳಲ್ಲದೇ ಕೆಲವು ವೈವಿಧ್ಯಮಯವಾದ ರೇಖಾಚಿತ್ರಗಳಾಗಿವೆ. ಮದುವೆಯಂತಹ ಕಾರ್ಯಕ್ರಮಗಳಲ್ಲಿ ಕಡ್ಡಾಯವಾಗಿ ವಧು-ವರರು ವಧುವಿನ ಮನೆಯ ಗೋಡೆಯ ಮೇಲೆ ಬರೆಯುವ ಸಂಪ್ರದಾಯ ಹಿಂದೆ ಇತ್ತು. ಮದುವೆಯ ಸಂದರ್ಭದಲ್ಲಿ ವರನು ವಧುವಿನ ಮನೆಯ ಗೋಡೆಯ ಮೇಲೆ ಪಕ್ಷಿ, ಪ್ರಾಣಿಗಳ ಚಿತ್ರಗಳನ್ನು ಬಿಡಿಸುತ್ತಾನೆ. ಇದರಿಂದ ಇವರು ಪ್ರಾಚೀನ ಕಾಲದಲ್ಲಿ ಚಿತ್ರಕಲೆಯ ಮಾಧ್ಯಮಕ್ಕೆ ನೀಡಿದಂತಹ ಮಹತ್ವವನ್ನು ಗುರುತಿಸಬಹುದು. ವರನು ಈ ರೀತಿ ಚಿತ್ರ ಬರೆಯುವ ಸಂದರ್ಭವನ್ನು 'ಗೋಡೆಶಾಸ್ತ್ರ'ವೆಂದು ಕರೆಯುತ್ತಾರೆ.

**೬ : ೬ : ೧ : ೧ ಗೋಡೆ ಚಿತ್ರದ ಬಣ್ಣದ ತಯಾರಿಕೆ**

ಮದುವೆಯ ಸಂದರ್ಭದಲ್ಲಿ ಗೋಡೆಯ ಮೇಲೆ ವರನು ಬರೆಯುವ ಚಿತ್ರಕ್ಕೆ ವಧುವು ಬಣ್ಣವನ್ನು ತಯಾರಿಸಿ ಕೊಡುತ್ತಾಳೆ. ಅಕ್ಕಿಯ ಹಿಟ್ಟನ್ನು ತೆಗೆದುಕೊಂಡು ಅದರೊಂದಿಗೆ ಇದ್ದಿಲು ಪುಡಿಯನ್ನು ಬೆರೆಸಿ ಚೆನ್ನಾಗಿ ಕಲಿಸಿ ಬಣ್ಣವನ್ನು ತಯಾರಿಸುತ್ತಿದ್ದರು. ಇದು ದೇಸೀ ಬಣ್ಣದ ತಯಾರಿಕೆಯ ಮಹತ್ವವನ್ನು ಹೇಳುತ್ತದೆ. ಅಲ್ಲದೇ ಅಕ್ಕಿಯ ಹಿಟ್ಟಿನೊಂದಿಗೆ ಕೆಮ್ಮಣ್ಣು ಬೆರೆಸಿ ಬಣ್ಣ ತಯಾರಿಸಲಾಗುತ್ತಿತ್ತು.

**೬ : ೬ : ೧ : ೨ ಹಚ್ಚೆ ಕಲೆ**

ಹಚ್ಚೆಯು ಆದಿವಾಸಿ ಬುಡಕಟ್ಟು ಜನಾಂಗದಲ್ಲಿ ಉಳಿದುಕೊಂಡು ಬಂದಿರುವ ಒಂದು ವಿಶಿಷ್ಟವಾದಂತಹ ಕಲೆಯಾಗಿದೆ. ವ್ಯಕ್ತಿಗಳು ತಮ್ಮ ಕೈ, ಕಾಲು, ಮುಖಗಳ ಮೇಲೆ ಬಿಡಿಸಿಕೊಳ್ಳುವ ಚಿತ್ತಾರಗಳ ಒಂದು ವಿಶೇಷ ಕಲೆಯೇ ಹಚ್ಚೆ. ಇದು ನಾಶವಾಗದ ಕಲೆಯಾಗಿರುತ್ತದೆ. ಬುಡಕಟ್ಟು ಸಮುದಾಯಗಳು ಹಿಂದೆ ಮದುವೆ, ಮೈ ನೆರೆದಾಗ, ಕೆಲವು ವಿಶೇಷ ದಿನಾಚರಣೆಗಳಲ್ಲಿ ಹಚ್ಚೆಯನ್ನು ಹಾಕಿಸುತ್ತಿದ್ದರು. ಹೆಚ್ಚಾಗಿ ಹೆಂಗಸರೇ ಈ ಕಲೆಯನ್ನು ಹಾಕುತ್ತಾರೆ ಮತ್ತು ಹಚ್ಚೆಯನ್ನು ಹಾಕಿಸಿಕೊಳ್ಳುವವರಲ್ಲಿ ಹೆಂಗಸರೇ ಅಧಿಕ. ಗಂಡಸರು ಕೆಲವರು ಹಾಕಿಸುತ್ತಾರೆ.

ಹೀಗೆ ಹಲವಾರು ರೀತಿಯ ಕಲೆಗಳು ಈ ಹಿಂದೆ ಒಡಿಗ ಸಮುದಾಯದಲ್ಲಿದ್ದವು. ಪ್ರಸ್ತುತ ಆಧುನಿಕತೆಯ ಪ್ರಭಾವದಿಂದ ಇವು ಯಾವುವು ಇಲ್ಲದಂತಾಗಿವೆ. ಇಂದು ಕೇವಲ ಅಲ್ಲೊಂದು ಇಲ್ಲೊಂದರಂತೆ ಸಾಮಾಜಿಕ ನಾಟಕಗಳನ್ನು ಆಡುತ್ತಾರೆ. ಮಿಕ್ಕಂತೆ ಸಮೂಹ ಮಾಧ್ಯಮಗಳ ಪ್ರಭಾವಕ್ಕೆ ಒಳಗಾಗಿದ್ದಾರೆ.

**೬ : ೬ : ೩ ಕ್ರೀಡೆಗಳು**

ಮಾನವ ತನ್ನ ದೈನಂದಿನ ಬದುಕಿನಲ್ಲಿ ಉಲ್ಲಾಸದಿಂದಿರಲು ಹಾಗೂ ಅವರ ದೇಹ, ಮನಸ್ಸುಗಳು ಸಂತೋಷದಿಂದಿರಲು ಮನರಂಜನೆಯ ಮಾಧ್ಯಮವನ್ನು ಕಂಡುಕೊಂಡ. ಅವುಗಳಲ್ಲಿ ಆಟಗಳು ಸೇರಿವೆ. ಈ ಆಟಗಳಿಂದ ಮಾನಸಿಕ ಮತ್ತು ದೈಹಿಕ ಬೆಳವಣಿಗೆಯ ಜೊತೆಗೆ ಬುದ್ಧಿಯು ಉಲ್ಲಾಸದಿಂದಿರುತ್ತದೆ. ದೇಹಕ್ಕೆ ವ್ಯಾಯಾಮ ನೀಡುತ್ತದೆ. ಇದರಿಂದ ಸಾಮಾಜಿಕ ವ್ಯವಸ್ಥೆಯಲ್ಲಿ ಸಧೃಡ ಜೀವಿಗಳು ವಾಸಿಸಲು ಸಾಧ್ಯವಾಗುತ್ತದೆ. ಕೆಲವು ಆಟಗಳು ನಿಸರ್ಗದತ್ತವಾಗಿಯೂ, ಮತ್ತೆ ಕೆಲವು ಮನುಷ್ಯರ ಸಹಜ ರೂಪಿಸುವಿಕೆಯಿಂದ ಬಂದಿವೆ. ಬುಡಕಟ್ಟು ಸಮುದಾಯಗಳು ಹಲವು ರೀತಿಯ ಆಟೋಟಗಳನ್ನು ರೂಢಿಸಿಕೊಂಡಿದ್ದಾರೆ. ಇವು ನಾಗರಿಕ ಸಮಾಜದ ಕ್ರೀಡೆಗಿಂತ ಭಿನ್ನವಾಗಿರುತ್ತವೆ. ನಾಗರಿಕ ಸಮುದಾಯವು ಕ್ರೀಡೆಗೆ ಹಣ ಮತ್ತು ಸಮಯ ವ್ಯಯ ಮಾಡಿದಂತೆ ಇವರು ಮಾಡಲಾರರು. ಬದಲಾಗಿ ಇವರು ತಮ್ಮ ದೈನಂದಿನ ದೈಹಿಕ ಶ್ರಮವನ್ನು ನೀಗಿಸಿಕೊಳ್ಳುವ ದೃಷ್ಟಿಯಿಂದ ಕೆಲವಾರು ಆಟಗಳನ್ನು ರೂಢಿಸಿಕೊಂಡಿದ್ದಾರೆ. ಅರಣ್ಯ ಪ್ರದೇಶದಲ್ಲಿನ ಈ ಸಮುದಾಯದಲ್ಲಿ ಕೆಲವು ವಿಶೇಷವಾದಂತಹ ಆಟಗಳು ಇರುತ್ತವೆ.

ಪ್ರಸ್ತುತ ಒಡಿಗ ಸಮುದಾಯದವರಲ್ಲಿ ಕೆಲವು ಆಟಗಳಿವೆ. ಇವರ ಹಲವಾರು ಆಟಗಳು ನಾಗರಿಕ ಸಮುದಾಯಗಳಲ್ಲಿದ್ದರೂ, ಕೆಲವು ವಿಶೇಷ ಆಟಗಳಿವೆ. ಈ ಸಮುದಾಯದ ಕ್ರೀಡೆಗಳನ್ನು ಹೀಗೆ ಗುರುತಿಸಬಹುದು.

**ಒಡಿಗರ ಕ್ರೀಡೆಗಳು**

**ಮಕ್ಕಳ ಆಟಗಳು**

೧ (೫ ರಿಂದ ೮ ವರ್ಷದವರು)

ಅ ಮುಟ್ಟಾಟ
ಆ ಕಣ್ಣಾಮುಚ್ಚಾಲೆ
ಇ ಮದುವೆಯಾಟ
ಈ ಅಡುಗೆಯಾಟ
ಉ ಬಂಡಿಗಾಲಿ ಆಟ

೨ (೮ ವರ್ಷ ಮೇಲ್ಪಟ್ಟವರು)

ಅ ಚೆಂಡಾಟ
ಆ ಗೋಲಿಯಾಟ
ಇ ಗುಡುಗಿನಾಟ
ಈ ಕುಂಟಾಟ
ಉ ಜೋಕಾಲಿ
ಊ ಕುಂಟಾಬಿಲ್ಲೆ

**ಗಂಡಸರ ಆಟಗಳು**

ಅ ಗುಡುಗಿನಾಟ (ಕಬಡ್ಡಿ)
ಆ ಕಾಯಿಕಸಿಯುವ ಆಟ
ಇ ಆನೆಘಟ್ಟ
ಈ ಕೋಲಾಟ

**ಹೆಂಗಸರ ಆಟಗಳು**

ಅ ಅಳಿಗುಳಿಮನೆಯಾಟ
ಆ ಚನ್ನಮಣೆಯಾಟ
ಇ ಚೌಕಾಭಾರ

೬ : ೬ : ೩ : ೧ ಮಕ್ಕಳ ಆಟಗಳು

ಒಡಿಗರ ಸಮುದಾಯದ ಮಕ್ಕಳು ಬಹು ಸಂಭ್ರಮದಿಂದ ಆಟಗಳನ್ನು ಆಡುತ್ತಾರೆ. ಮುಗ್ಧ ಮನಸ್ಸಿನ ಇವರು ತಮ್ಮ ದೈಹಿಕ ಶ್ರಮದ ಕೆಲವು ಆಟಗಳು ಆಡುವಂತೆ ಕೆಲವು ಚಮತ್ಕಾರದ ಆಟಗಳನ್ನು ಆಡುತ್ತಾರೆ.

೧ ಮುಟ್ಟಾಟ

ಇದು ಮಕ್ಕಳಿಗೆ ಪ್ರಿಯವಾದ ಆಟ. ಇದರಲ್ಲಿ ಐದಕ್ಕಿಂತ ಹೆಚ್ಚು ಮಂದಿ ಭಾಗವಹಿಸುತ್ತಾರೆ. ಆಟವಾಡುವ ಸ್ಥಳ ಮನೆಯ ಮುಂದಿನ ಅಂಗಳ ಅಥವಾ ಬಯಲು ಸಮುದಾಯದ ಒಬ್ಬ ಹಿರಿಯ ಮಕ್ಕಳಿಗೆ ಮಾಹಿತಿಯನ್ನು ನೀಡುತ್ತಾನೆ. ಬಯಲಿನಲ್ಲಿ ಒಂದು ಕಂಬ ನೆಡುತ್ತಾರೆ. ಐದಾರು ಮಕ್ಕಳು ಸಾಲಾಗಿ ನಿಲ್ಲುತ್ತಾರೆ. ಸಮುದಾಯದ ಹಿರಿಯನು 'ಜೂಟ್' ಎನ್ನುತ್ತಾನೆ. ಮಕ್ಕಳೆಲ್ಲಾ ಓಡಿ ಹೋಗಿ ಕಂಬವನ್ನು ಮುಟ್ಟಬೇಕು. ಮೊದಲು ಕಂಬವನ್ನು ಮುಟ್ಟಿದವರು ಗೆಲ್ಲುತ್ತಾರೆ.

೨ ಕಣ್ಣುಮುಚ್ಚಾಲೆ

ಇದು ಸಾಮೂಹಿಕ ಆಟ. ಐದಕ್ಕಿಂತ ಹೆಚ್ಚು ಮಕ್ಕಳು ಭಾಗವಹಿಸುತ್ತಾರೆ. ಒಬ್ಬ ಹಿರಿಯರು ಈ ಆಟದಲ್ಲಿರುತ್ತಾರೆ. ಸಾಲಾಗಿ ನಿಂತ ಮಕ್ಕಳಿಗೆ ಹಿರಿಯ ಅಜ್ಜಿ ಅಥವಾ ಅಜ್ಜ **''ಕಣ್ಣಾಮುಚ್ಚೆ ಕಾಡೇ ಗೂಡೇ ಉದ್ದಿನ ಮೂಟೆ, ಉರುಳೇ ಹೋಯ್ತು ನಮ್ಮ ಹಕ್ಕಿ ನಿಮ್ಮ ಹಕ್ಕಿ ಬಿಟ್ಬೆ ಬಿಟ್ಬೆ ಜೂಟ್''** ಎಂದು ಕಳ್ಳಿಯ ಕಣ್ಣನ್ನು ಮುಚ್ಚಿ ಹೇಳುತ್ತಾರೆ. ಉಳಿದ ಮಕ್ಕಳು ಸಂದಿ-ಗೊಂದಿಯ ಮರೆಯಲ್ಲಿ ಅಡಗಿರುತ್ತಾರೆ. ಅಜ್ಜಿಯು ಕಳ್ಳಿಯ ಕಣ್ಣನ್ನು ಬಿಟ್ಟ ತಕ್ಷಣ ಹುಡುಕಲು ಹೊರಡುತ್ತಾಳೆ. ಅವಿತುಕೊಂಡ ಮಕ್ಕಳು ಅಜ್ಜಿಯನ್ನು ಮುಟ್ಟಬೇಕು. ಇಲ್ಲವಾದರೆ ಮೊದಲು ಕಂಡವರನ್ನು ಕಳ್ಳಿಯಾಗಿ ಗುರುತಿಸಿದರೆ ಅವರು ಕಳ್ಳಿಯಾಗ ಬೇಕಾಗುತ್ತದೆ. ಇದೊಂದು ಮನರಂಜನೀಯ ಆಟ.

೩ ಮದುವೆಯಾಟ

ಇದು ದಿಟದ ಮದುವೆಯನ್ನು ಅನುಕರಿಸಿ ಆಡುವ ಮಕ್ಕಳ ಆಟ. ಎರಡು ಗುಂಪುಗಳಲ್ಲಿ ಹುಡುಗರು ಸೇರಿ ಹೆಣ್ಣಿನ ಕಡೆ, ಗಂಡಿನ ಕಡೆಯೆಂಬುದಾಗಿ ಮಾಡಿಕೊಂಡು, ಅಲ್ಲಿ ದೊರೆಯುವ ಕಾಡಿನ ಎಲೆ, ಕಾಯಿ ಮುಂತಾದುವುಗಳೊಂದಿಗೆ ಆಟವಾಡುತ್ತಾರೆ. ತಾಳಿ, ತಾಳ, ಮೇಳ, ಮಂತ್ರ, ಊಟ, ಸಂಭ್ರಮ ಎಲ್ಲವನ್ನು ಅನುಕರಿಸಿ ಈ ಆಟವನ್ನಾಡುತ್ತಾರೆ.

೪ ಅಡುಗೆಯಾಟ

ಕೆಲವಾರು ಮಕ್ಕಳು ಸೇರಿ ಮನೆಯಿಂದ ತಂದ ತಿಂಡಿ- ತಿನಿಸನ್ನು ತಮ್ಮ ಆಟಿಗೆ ಸಾಮಾನಿನಲ್ಲಿರಿಸಿ, ಕುಟುಂಬದಂತೆ ಒಂದಾಗಿ, ಹೊಲ, ಗದ್ದೆಗೆ ಹೋಗಿ ಬರುವಂತೆ ಕೆಲವು ಮಕ್ಕಳು ನಟಿಸುತ್ತಾರೆ. ಅಲ್ಲಿಂದ ಬಂದು ಊಟಕ್ಕೆ ತಯಾರಾಗುತ್ತಾರೆ. ಎಲ್ಲರೂ ಸೇರಿ ಸಾಮೂಹಿಕ ಭೋಜನವೆಂಬ ರೀತಿಯಲ್ಲಿ ತಿಂಡಿಯನ್ನು ತಿನ್ನುತ್ತಾರೆ. ಈ ಆಟದಲ್ಲಿ ಹೆಣ್ಣುಮಕ್ಕಳೇ ಹೆಚ್ಚು ಪ್ರಧಾನವಾಗಿರುತ್ತಾರೆ.

೫ ಬಂಡಿಗಾಲಿ ಆಟ

ಅರಣ್ಯದಲ್ಲಿ ದೊರೆಯುವ ಮರದಿಂದ ಒಂದು ಗಾಲಿಯನ್ನು ತಯಾರಿಸಿ, ಅದಕ್ಕೆ ಬಿದಿರಿನ ಕಡ್ಡಿಯನ್ನು ಸೀಳಿ, ಜೋಡಿಸಿ ತಿರುಗುವಂತೆ ಮಾಡುತ್ತಾರೆ. ಜೋಡಿಸಿದ ಬಿದಿರಿನ ಸೀಳನ್ನು ಹಿಡಿಯಲು ಅನುಕೂಲವಾಗುವಂತೆ ಹಿಡಿಕೆಯನ್ನು ನುಣುಪಾಗಿ ಮಾಡಿರುತ್ತಾರೆ. ಇದರಿಂದ ಮಕ್ಕಳು ಗಾಲಿಯನ್ನು ಓಡಿಸುತ್ತಾ ಆಡುತ್ತಾರೆ.

೬ ಚೆಂಡಾಟ

ಇದು ಬಯಲಿನಲ್ಲಿ ಆಡುವ ಸಾಮೂಹಿಕ ಆಟ. ಮನೆಯಲ್ಲಿನ ಹಳೆಯ ಬಟ್ಟೆಗಳಿಂದ ಚೆಂಡನ್ನು ತಯಾರಿಸುತ್ತಾರೆ. ಮಕ್ಕಳೊಂದಿಗೆ ದೊಡ್ಡವರು ಈ ಆಟದಲ್ಲಿ ಪಾಲ್ಗೊಳ್ಳುತ್ತಾರೆ. ಚೆಂಡಾಟದಲ್ಲಿ ಕೆಲವು ಬಗೆಗಳಿವೆ.

ಅ ಎಸೆಚೆಂಡು

ಕೆಲವಾರು ಹುಡುಗರು ಸೇರಿ ಈ ಆಟವಾಡುತ್ತಾರೆ. ಒಬ್ಬ ಚೆಂಡನ್ನು ಮೇಲಕ್ಕೆ ಎಸೆಯುತ್ತಾನೆ. ಆಗ ಉಳಿದವರು ದೂರವಿರುತ್ತಾರೆ. ಚೆಂಡು ಮೂರು ಬಾರಿ ನೆಲಕ್ಕೆ ಬಿದ್ದ ಮೇಲೆ ಅದನ್ನು ಸಿಕ್ಕವರು ಮತ್ತೊಬ್ಬರಿಗೆ ಎಸೆಯುವುದು, ಹತ್ತಿರ ಇರುವವರು ಚೆಂಡು ಇರುವವನನ್ನು ಮುಟ್ಟಿದರೆ ಅವರಿಗೆ ಹೊಡೆಯುವಂತಿಲ್ಲ. ಯಾರು ಯಾರಿಗೆ ಬೇಕಾದರೂ ಚೆಂಡಿನಿಂದ ಹೊಡೆಯುವುದೇ ಈ ಆಟ.

ಆ ಬೀಸೋ ಚೆಂಡು

ಏಳೆಂಟು ಮಂದಿ ಮಕ್ಕಳು ಸೇರಿ ಒಂದು ಬಯಲಿನಲ್ಲಿ ಈ ಆಟವನ್ನು ಆಡುತ್ತಾರೆ. ಚೆಂಡನ್ನು ಒಬ್ಬರ ನಂತರ ಒಬ್ಬರು ಎಸೆಯುತ್ತಾರೆ. ಯಾರು ಹೆಚ್ಚು ದೂರ ಎಸೆಯುತ್ತಾರೋ ಅವರು ಗೆದ್ದಂತೆ. ಯಾರು ಕಡಿಮೆ ದೂರ ಎಸೆದಿರುತ್ತಾರೋ ಅವರು ಗೆದ್ದ ವ್ಯಕ್ತಿಯ ಚೆಂಡಿನ ಸ್ಥಳದವರೆಗೆ ಕುಂಟುತ್ತಾ ಬರಬೇಕು. ಹಬ್ಬ ಹರಿದಿನಗಳಲ್ಲಿ ಚೆಂಡಾಟವನ್ನು ಹೆಚ್ಚಾಗಿ ಆಡುತ್ತಾರೆ.

೭ ಗೋಲಿ ಆಟ

ಗೋಲಿ ಆಟದಲ್ಲಿ ವೃತ್ತದಾಟ, ಗುರಿಯಾಟ, ಬಿಂದು ಮುಂತಾದ ಬಗೆಗಳಿವೆ. ನೆಲದ ಮೇಲೆ ಒಂದು ವೃತ್ತವನ್ನು ಹಾಕುತ್ತಾರೆ. ವೃತ್ತದಿಂದ ಎರಡು ಮೂರು ಅಡಿ ದೂರ ಒಂದು ಲಂಬರೇಖೆ ಮತ್ತೊಂದು ಅಡ್ಡವಾದ ರೇಖೆ (ಗೆರೆ) ಇರುತ್ತದೆ. ಗೆರೆಯಿಂದ ಸ್ವಲ್ಪ ದೂರನಿಂತು ಗೋಲಿಯನ್ನು ಎಸೆಯುತ್ತಾರೆ. ಯಾರ ಗೋಲಿ ಗೆರೆಯ ಹತ್ತಿರವಾಗಿರುತ್ತದೋ ಅವನು ಮೊದಲು ವೃತ್ತದೊಳಗೆ ಗೋಲಿಯನ್ನು ಎಸೆಯುತ್ತಾನೆ. ಉಳಿದವರು ಗೆರೆಯ ಸಮೀಪ ಇರುವಂತೆ ಕ್ರಮಾಂಕದಲ್ಲಿ ಇರುತ್ತಾರೆ. ವೃತ್ತಾಕಾರದಲ್ಲಿ ಬಿದ್ದಂತಹ ನಾಲ್ಕೈದು ಗೋಲಿಗಳಲ್ಲಿ ಒಂದನ್ನು ಆಯ್ಕೆ ಮಾಡುವವನು ಮತ್ತೊಬ್ಬನಿರುತ್ತಾನೆ. ತೋರಿಸಿದ ಗೋಲಿಯನ್ನು ಮತ್ತೊಂದು ಗೋಲಿಯಿಂದ ಹೊಡೆದಾಗ ವೃತ್ತದಿಂದ ಅದು ಹೊರಬಂದರೆ ಗೋಲಿ ಸ್ವಂತದ್ದಾಗುತ್ತದೆ. ನಂತರ ಬೇರೆ ಮಕ್ಕಳು ಗೋಲಿ ವೃತ್ತಕ್ಕೆ ಎಸೆಯುತ್ತಾರೆ. ಇದರಲ್ಲಿ

ಗುರಿಯಾಟ ಒಂದು ಬಗೆ. ಮೊದಲು ಗೋಲಿಯನ್ನು ಚಿಮ್ಮುತ್ತಾರೆ. ನಂತರ ಅದಕ್ಕೆ ಗುರಿಯಿಟ್ಟು ಹೊಡೆಯಬೇಕು. ಹೊಡೆದವನು ಗೋಲಿಯನ್ನು ಗೆದ್ದಂತೆ.

**೮ ಮರಕೋತಿ ಆಟ**

ಒಡಿಗ ಸಮುದಾಯದ ಮಕ್ಕಳಿಗೆ ಇದು ಪ್ರಿಯವಾದ ಆಟ. ಅರಣ್ಯದಲ್ಲಿ ವಾಸಮಾಡುವುದರಿಂದ ಇದು ಮೆಚ್ಚಿನ ಆಟವಾಗಿದೆ. ಎಂಟರಿಂದ ಇಪ್ಪತ್ತು ವಯಸ್ಸಿನವರು ಇದರಲ್ಲಿ ಭಾಗವಹಿಸುತ್ತಾರೆ. ಹುಡುಗರು ದನ ಮೇಯಿಸಲು ಹೋದಾಗ ಮನರಂಜನೆಗಾಗಿ ಆಡುತ್ತಾರೆ. ಎಂಟರಿಂದ ಹತ್ತು ಜನ ಈ ಆಟದಲ್ಲಿರುತ್ತಾರೆ. ಕೈ ಮೇಲೆ ಕೈಯಿಟ್ಟು ಎಗರಿಸುವ ಮೂಲಕ ಒಬ್ಬ ಕಳ್ಳನನ್ನು ಆಯ್ಕೆ ಮಾಡುತ್ತಾರೆ. ಒಂದು ವೃತ್ತವನ್ನು ಬರೆದು, ಅದರಲ್ಲಿ ಒಂದು ಕೋಲು ಇಡುತ್ತಾರೆ. ಗೆದ್ದವರಲ್ಲಿ ಒಬ್ಬ ಕೋಲನ್ನು ದೂರ ಎಸೆಯುತ್ತಾನೆ. ಕೋತಿಯಾದವನು (ಕಳ್ಳ, ಸೋತವನು) ಆ ಕೋಲನ್ನು ತಂದು ವೃತ್ತದಲ್ಲಿಡಬೇಕು. ಅಷ್ಟರಲ್ಲಿ ಗೆದ್ದವರು ಮರವನ್ನು ಹತ್ತಿರುತ್ತಾರೆ. ಅವರನ್ನು ಇವನು ಮುಟ್ಟಬೇಕು. ಮುಟ್ಟುವಷ್ಟರಲ್ಲಿ ಯಾರಾದರೂ ಬಂದು ಕೋಲನ್ನು ಮುಟ್ಟಿದರೆ ಮತ್ತೆ ಅವನೇ ಕೋತಿಯಾಗಬೇಕಾಗುತ್ತದೆ. ಕೋಲನ್ನು ಮುಟ್ಟದಂತೆ ಕಳ್ಳನಾದವನು ಎಚ್ಚರದಿಂದಿರುತ್ತಾನೆ. ಮರ ಹತ್ತಲು ಬಾರದವರು ಸೋಲುತ್ತಾರೆ. ಇದೊಂದು ಚುರುಕಿನ ಆಟವಾಗಿದೆ.

**೯ ಕುಂಟಾಟ**

ಇದು ಒಡಿಗರ ಹೆಣ್ಣು ಮಕ್ಕಳು ಆಡುವ ಮುಖ್ಯವಾದ ಆಟ. ಕೆಲವೊಮ್ಮೆ ಗಂಡುಮಕ್ಕಳು ಇದರಲ್ಲಿ ಭಾಗವಹಿಸುತ್ತಾರೆ. ಬಯಲಿನಲ್ಲಿ ಒಂದು ಗೆರೆಯನ್ನು ಹಾಕುತ್ತಾರೆ. ಒಬ್ಬ ಕಳ್ಳಿಯನ್ನು ಕೈ ಎಗರಿಸುವ ಮೂಲಕ ಆಯ್ಕೆ ಮಾಡಿ, ಗೆದ್ದವರು ಗೆರೆಯೊಳಗೆ ನಿಂತಿರುತ್ತಾರೆ. ಕಳ್ಳಿಯು ಜೂಟ್ ಎಂದು ಹೇಳುತ್ತಾ ಇವರನ್ನು ಮುಟ್ಟಲು ಕುಂಟುತ್ತಾ ಬರಬೇಕು. ಮುಟ್ಟಿಸಿಕೊಂಡವರು ಕಳ್ಳರಾಗುತ್ತಾರೆ. ಕುಂಟುವಾಗ ಕಾಲನ್ನು ಬದಲಾಯಿಸುವಂತಿಲ್ಲ. ಗೆರೆಯನ್ನು ದಾಟಿದವರು ಕಳ್ಳರಾಗುತ್ತಾರೆ. ಇದೊಂದು ಸೊಗಸಾದ ಆಟವಾಗಿರುತ್ತದೆ.

**೧೦ ಕುಂಟಾಬಿಲ್ಲೆ**

ಹೆಣ್ಣುಮಕ್ಕಳ ಪ್ರಮುಖವಾದ ಆಟ. ಮನೆಯ ಅಂಗಳದಲ್ಲಿ ನಾಲ್ಕೈದು ಮಕ್ಕಳು ಸೇರಿ ಸರದಿಯ ಪ್ರಕಾರ ಒಂದು ದುಂಡಾದ ಕಲ್ಲಿನ ಬಿಲ್ಲೆಯೊಂದಿಗೆ, ಎಂಟು ಚೌಕಾಕಾರದ ಮನೆಯನ್ನು ಬರೆಯುತ್ತಾರೆ. ಕಡೆಯ ನಾಲ್ಕನೇ ಮನೆಗೆ 'x' ಗುರುತನ್ನು ಹಾಕಿರುತ್ತಾರೆ. ಇದಕ್ಕೆ ''**ಪಾಂಡಿಮನೆ**'' ಎಂದು ಕರೆಯುತ್ತಾರೆ. ತಮ್ಮಲ್ಲಿ ಎರಡು ಗುಂಪು ಮಾಡಿಕೊಂಡು, ಒಂದು ಗುಂಪಿನವರು ಆಟ ಆರಂಭಿಸುತ್ತಾರೆ. ದುಂಡಾದ ಕಲ್ಲಿನ ಬಿಲ್ಲೆಯನ್ನು (ಬಿಚ್ಚೆ) ಬಾಯಿಗೆ ತಾಕಿಸಿಕೊಂಡು ಮೊದಲ ಮನೆಗೆ ಎಸೆದು ಕುಂಟುತ್ತಾ ಹೋಗುತ್ತಾಳೆ. ಪಾಂಡಿಮನೆಯಲ್ಲಿ ಕಾಲು ಬಿಡುತ್ತಾಳೆ. ಅಲ್ಲಿಂದ ಮತ್ತೆ ಕುಂಟುತ್ತಾ ಬಂದು ಮೊದಲು ಮನೆಯಲ್ಲಿನ ಬಿಚ್ಚೆಯನ್ನು ಕಾಲಿನಿಂದ ಹೊರಕ್ಕೆ ತಳ್ಳಿ ನಂತರ ಅದನ್ನು ತುಳಿಯುತ್ತಾಳೆ. ಇದರಂತೆ ಎಲ್ಲ ಮನೆಗಳಿಗೂ ಮುಂದುವರೆಯುತ್ತದೆ. ಬಿಚ್ಚೆ ಹಾಕುವಾಗ ಮನೆಯ ಹೊರಗೆ ಬಿದ್ದರೆ, ಕುಂಟುವಾಗ

ಗೆರೆಯನ್ನು ತುಳಿದರೆ ಆಟ ರದ್ದಾಗುತ್ತದೆ. ನಂತರ ಉಳಿದವರು ಆಡುತ್ತಾರೆ. ಹೀಗೆ ಎಂಟು ಮನೆಗೆ ಹಾಕಿದ ಮೇಲೆ ಅಂಗೈ, ಮುಂಗೈ, ತಲೆ, ಹಣೆ, ಕಾಲು ಹೀಗೆ ಬಿಚ್ಚೆಯನ್ನು ಇಟ್ಟುಕೊಂಡು ಕುಂಟುತ್ತಾ ಹೊರ ಬರಬೇಕು. ಕೊನೆಗೆ ಮನೆಗಳ ಹೊರ ನಿಂತು ಬಿಚ್ಚೆಯನ್ನು ಮನೆಗಳನ್ನು ದಾಟುವಂತೆ ಎಸೆಯಬೇಕು. ಕಣ್ಣುಮುಚ್ಚಿಕೊಂಡು ಗೆರೆಯನ್ನು ತುಳಿಯದೇ ''ಅಮರೆಟಾ''(I am right)ಎಂದು ಹೇಳುತ್ತಾ ನಡೆಯಬೇಕು. ಪಾಂಡಿಮನೆಯಲ್ಲಿ ಕಣ್ಣು ತೆಗೆದು, ಬಿಚ್ಚೆಯನ್ನು ತುಳಿದು ಅದನ್ನು ಮತ್ತೆ ಒಂದು ಮನೆಗೆ ಎಸೆಯಬೇಕು. ಅದು ಅವರ ಪಾಂಡಿಮನೆ. ಅಲ್ಲಿಗೆ ಗೆದ್ದಂತೆ ಉಳಿದವರು ಆಡುವಾಗ ಈ ಪಾಂಡಿಮನೆಯನ್ನು ತುಳಿಯುವಂತಿಲ್ಲ, ಕಾಲು ಬಿಡುವಂತಿಲ್ಲ. ಕೊನೆಗೆ ಯಾರು ಹೆಚ್ಚು 'ಪಾಂಡಿ' ಕಟ್ಟುತ್ತಾರೋ ಅವರು ಆಟದಲ್ಲಿ ಗೆಲ್ಲುತ್ತಾರೆ.

೧೧ ಜೋಕಾಲಿ

ಎರಡು ಮರಗಳಿಗೆ ಹಗ್ಗ ಕಟ್ಟಿ ಹಗ್ಗದ ನಡುವೆ ಹಲಗೆ ಇಲ್ಲವೇ ಹಳೆಯ ಬಟ್ಟೆಗಳನ್ನು ಇಟ್ಟು ಉಯ್ಯಾಲೆ ಆಡುತ್ತಾರೆ. ಕೆಲವರು ತೂಗುತ್ತಾರೆ. ಇದೊಂದು ಮನರಂಜನೆಯ ಆಟವಾಗಿರುತ್ತದೆ. ಗಂಡು-ಹೆಣ್ಣು ಎಲ್ಲರೂ ಈ ಆಟ ಆಡುತ್ತಾರೆ.

೧೨ ಆಣೆಕಲ್ಲು ಆಟ

ಹೆಣ್ಣುಮಕ್ಕಳ ಆಟವಿದು. ಐದು ಅಥವಾ ಹತ್ತು ದುಂಡನೆಯ ಸಣ್ಣ ಕಲ್ಲುಗಳನ್ನು ತೆಗೆದುಕೊಂಡು ಒಂದು ಕಲ್ಲನ್ನು ಮೇಲಕ್ಕೆ ತೂರಿ ಉಳಿದ ಕಲ್ಲುಗಳನ್ನು ಎತ್ತಿಕೊಳ್ಳಬೇಕು. ಮೇಲಕ್ಕೆಸೆದ ಕಲ್ಲನ್ನು ಹಾಗೆಯೇ ಹಿಡಿಯಬೇಕು. ಅದು ಕೆಳಗೆ ಬಿದ್ದರೆ ಆಟ ಮುಗಿದಂತೆ ನಂತರ ಇನ್ನೊಬ್ಬರು ಆಡುತ್ತಾರೆ.

೬ : ೬ : ೩ : ೨ ಗಂಡಸರ ಆಟಗಳು

ಒಡಿಗ ಸಮುದಾಯದ ಗಂಡಸರು ಕೆಲವೇ ಆಟಗಳನ್ನು ಆಡುತ್ತಾರೆ. ತಮ್ಮ ದಿನನಿತ್ಯದ ದೈಹಿಕ ಶ್ರಮವನ್ನು ಈ ಮೂಲಕ ನೀಗಿಸಿಕೊಂಡು ಮನರಂಜನೆ ಪಡೆಯುತ್ತಾರೆ.

ಅ ಗುಡುಗಿನಾಟ

ಇದನ್ನು 'ಕಬಡ್ಡಿ' ಎಂದು ಕರೆಯಬಹುದು. ಹಬ್ಬ, ಜಾತ್ರೆ ಮುಂತಾದ ವಿಶೇಷ ದಿನಮಾನಗಳಲ್ಲಿ ಆಡುತ್ತಾರೆ. ಎರಡು ಗುಂಪುಗಳಲ್ಲಿ ಏಳೆಂಟು ಜನರಿರುತ್ತಾರೆ. ಪ್ರತಿ ಗುಂಪಿಗೂ ನಾಯಕನಿರುತ್ತಾನೆ. ಬಯಲಿನಲ್ಲಿ ಎರಡು ಅಂಕಣ ಮಾಡಿಕೊಂಡು ಮಧ್ಯ ಒಂದು ಗೆರೆ ಎಳೆಯುತ್ತಾರೆ. ಒಂದೊಂದು ಗುಂಪಿನವರಲ್ಲಿ ಒಬ್ಬ ಗುಡುಗುತ್ತಾ ಬರಬೇಕು. ಅವನನ್ನು ಹಿಡಿಯಲು ಪ್ರತಿಗುಂಪಿನವರು ಹವಣಿಸುತ್ತಾರೆ. ಮುಟ್ಟಿಕೊಂಡು ಬಂದರೆ ಅವರು ಅಂಕಣದಿಂದ ಹೊರ ಹೋಗಬೇಕು. ಆ ಗುಂಪಿನವರು ಗುಡುಗುವವನನ್ನು ಹಿಡಿದು ಉಸಿರು ನಿಲ್ಲಿಸಿದರೆ ಇವನೇ ಹೊರ ಹೋಗಬೇಕು. ಹೀಗೆ ಪರಸ್ಪರ ಗುಂಪಿನವರು ಗುಡುಗುತ್ತಾ ಆಡುತ್ತಾರೆ. ಯಾವ ಗುಂಪಿನವರು ಅಂಕಣದಿಂದ ಖಾಲಿಯಾಗುತ್ತಾರೋ ಅವರು ಸೋಲುತ್ತಾರೆ.

## ಆ ಕೋಲಾಟ

ಮದುವೆ, ಹಲವಾರು ವಿಶೇಷ ದಿನಗಳಲ್ಲಿ ಕಾಲಿಗೆ ಗೆಜ್ಜೆಯನ್ನು ಕಟ್ಟಿಕೊಂಡು ಕೈಯಲ್ಲಿ ಎರಡು ಬಣ್ಣದ ಕೋಲನ್ನು ಹಿಡಿದು ಹಾಡು ಹೇಳುತ್ತಾ, ಗುಂಪಾಗಿ ಕೋಲನ್ನು ಬಡಿಯುತ್ತಾ ಕುಣಿಯುವ ಮನೋಹರವಾದ ಆಟವಿದು. ಇದಕ್ಕೆ ಒಬ್ಬ ಹಿರಿಯನಿರುತ್ತಾನೆ. ಅವನು ಹೇಳಿದಂತೆ ಹಾಡು ಹೇಳುತ್ತಾ, ವಿವಿಧ ಭಂಗಿಯಲ್ಲಿ ಕುಣಿಯುತ್ತಾರೆ. ಬೆಳದಿಂಗಳ ಬೆಳಕಿನಲ್ಲಿ ರಮ್ಯವಾಗಿ ಕುಣಿಯುತ್ತಾರೆ. ಇದರಿಂದ ಮನರಂಜನೆ ಪಡೆಯುತ್ತಾರೆ.

## ಇ ಕಾಯಿ ಕಸಿಯುವ ಆಟ

ಕಾಯಿ ಕಸಿಯುವ ಆಟವು ಹಿಂದೆ ಮದುವೆಯ ಸಮಯದಲ್ಲಿ ಆಡುತ್ತಿದ್ದಂತಹ ಆಟ. ಸಮುದಾಯದ ಮುಖ್ಯಸ್ಥನು ನಿಂತು ತನ್ನ ಸಮ್ಮುಖದಲ್ಲಿ ಈ ಆಟವನ್ನು ಆಡಿಸುತ್ತಿದ್ದನು. ಮೊದಲು ಒಂದು ತೆಂಗಿನಕಾಯಿಯನ್ನು ತೆಗೆನುಕೊಂಡು ಮೇಲಿನ ನಾರನ್ನು ಸಂಪೂರ್ಣವಾಗಿ ತೆಗೆದುಹಾಕಬೇಕು. ಕಾಯಿಯನ್ನು ದುಂಡಾಕಾರವಾಗಿ ಮಾಡಿ ಅದಕ್ಕೆ, ಎಣ್ಣೆ ಅಥವಾ ತುಪ್ಪವನ್ನು ಬಳಿಯುತ್ತಾರೆ. ಸಮುದಾಯದ ಕೆಲವು ಪ್ರಮುಖ ಮನೆತನದಲ್ಲಿನ ಗಟ್ಟಿಮುಟ್ಟಾಗಿರುವವರು ಆಟಕ್ಕೆ ನಿಲ್ಲುತ್ತಾರೆ. ಮೊದಲೆ ಒಂದು ಸ್ಥಳವನ್ನು ನಿಗದಿಪಡಿಸಿ ಆ ಸ್ಥಳಕ್ಕೆ ಯಾರು ಮೊದಲು ತೆಂಗಿನಕಾಯಿಯನ್ನು ತಂದು ಹೊಡೆಯುತ್ತಾರೋ ಅವರ ಮನೆತನದ ಹಿರಿಮೆ ಸಮುದಾಯದಲೆಲ್ಲಾ ಪ್ರಚಲಿತವಾಗುತ್ತದೆ. ಆಟಕ್ಕೆ ಮೊದಲು ತೆಂಗಿನಕಾಯಿಯನ್ನು ಒಂದು ಕಡೆ ಇಟ್ಟು ಮುಖ್ಯಸ್ಥನು ಕಟ್ಟುಮಸ್ತಾಗಿರುವ ಒಬ್ಬ ವ್ಯಕ್ತಿಗೆ ಕಾಯಿಯನ್ನು ಹಿಡಿಯಲು ಹೇಳುತ್ತಾನೆ. ಉಳಿದವರು ಅವನಿಂದ ಕಾಯಿಯನ್ನು ಕಸಿಯಲು ಅವನ ಹಿಂದೇ ಬೀಳುತ್ತಾರೆ. ಮೊದಲು ಹಿಡಿದವನು ಬಹಳ ಹೊತ್ತು ಯಾರ ಕೈಗೆ ಸಿಗದಂತೆ ಅತ್ತಿತ್ತ ತಿರುಗಿಸುತ್ತಿರುತ್ತಾನೆ. ಅವನನ್ನು ಹಿಡಿದಾಗ ಎಷ್ಟೇ ಬಲವಾಗಿ ಎಳೆದರೂ ತನ್ನ ಮುಷ್ಠಿಯನ್ನು ಸಡಿಲಗೊಳಿಸದೆ ತೆಂಗಿನಕಾಯಿಯನ್ನು ಬಿಗಿಯಾಗಿ ಹಿಡಿದಿರುತ್ತಾನೆ. ಅವನಿಗೆ ಸುಸ್ತಾದಾಗ ತನ್ನ ಮನೆತನದ ಇನ್ನೊಬ್ಬ ವ್ಯಕ್ತಿಗೆ ಹಸ್ತಾಂತರಿಸಬೇಕು. ಇದು ಚುರುಕಿನ ಕಾರ್ಯವಾಗಿರುತ್ತದೆ. ಆಗ ಉಳಿದವರು ಅವನೆಡೆಗೆ ಧಾವಿಸಿ ಮುನ್ನುಗ್ಗುತ್ತಾರೆ. ಅವನು ಸಹ ಅವರ ಕೈಯಿಂದ ತಪ್ಪಿಸಿಕೊಂಡು ಎಷ್ಟೇ ಬಲವಾಗಿ ಎಳೆದರೂ ಮುಷ್ಟಿಯನ್ನು ಬಿಡದೆ ತೆಂಗಿನಕಾಯಿಯನ್ನು ತೆಗೆದುಕೊಂಡು ಹೋಗಿ ನಿಗದಿತ ಸ್ಥಳದಲ್ಲಿ ಹೊಡೆಯಬೇಕು. ತೆಂಗಿನ ಕಾಯಿಯನ್ನು ಹೊಡೆದ ವ್ಯಕ್ತಿಗೆ ಹಾಗೂ ಆ ಮನೆತನದ ಹಿರಿಯ ವ್ಯಕ್ತಿಗೆ ಹೂಮಾಲೆಯನ್ನು ಹಾಕಿ ಜಯಕಾರವನ್ನು ಕೂಗುತ್ತಾರೆ. ತೆಂಗಿನಕಾಯಿ ಕಸಿಯುವ ಆಟದಲ್ಲಿ ಇಂತಹ ಮನೆತನದವರೆ ಕಾಯಿ ಕಸಿದುಕೊಂಡು ಹೋಗಿ ಹೊಡೆಯಬೇಕೆಂಬ ನಿಯಮವಿದೆ. ಇದು ಮದುವೆ ಮಾಡುವ ಮನೆಗಳ ಮನೆತನಕ್ಕೆ ಸಂಬಂಧ ಪಟ್ಟಿರುತ್ತದೆ. ಇದು ಆ ಮನೆತನಗಳ ಗೌರವದ ಪ್ರಶ್ನೆಯಾಗಿರುತ್ತದೆ. ಆ ಮನೆತನದವರನ್ನು ಬಿಟ್ಟು ಬೇರೆ ಮನೆತನದವರು ಕಾಯಿಯನ್ನು ಹೊಡೆದರೆ ಅವರಿಗೆ ಅದು ತುಂಬಾ ಅಪಮಾನದ ಪ್ರಸಂಗವೆನಿಸುತ್ತದೆ. ಕೆಲವು ಸಂದರ್ಭಗಳಲ್ಲಿ ಈ ಆಟವನ್ನು ಆಡುವಾಗ ಜಗಳ, ಹೊಡೆದಾಟಗಳು ನಡೆಯುತ್ತವೆ. ಕಾಯಿ ಕಸಿಯುವ ಆಟವನ್ನು ಹೆಚ್ಚಾಗಿ ಮದುವೆ ಸಂದರ್ಭದಲ್ಲಿ ಮಾತ್ರ ಆಡುತ್ತಿದ್ದರು. ಆದರೆ ಇಂದು ಈ ಆಟವು ಸಂಪೂರ್ಣ ಕಣ್ಮರೆಯಾದಂತೆ ಕಂಡುಬರುತ್ತದೆ.

## ಈ ಆನೆಘಟ್ಟ

ಇದೊಂದು ತುಂಬಾ ಚಮತ್ಕಾರದ ಆಟ. ಇದನ್ನು ಆನೆಘಟ್ಟ, ಹುಲಿಗಟ್ಟ (ಹುಲಿ ಕುರಿ ಆಟ) ಹುಲಿ ಹಸುವಿನ ಆಟ ಎಂಬ ಹೆಸರುಗಳಿಂದಲೂ ಕರೆಯುತ್ತಾರೆ. ದನಕರುಗಳನ್ನು ಕಾಯಲು ಹೋದಾಗ ಅಥವಾ ಕೆಲಸವಿಲ್ಲದ ಬಿಡುವಿನ ಸಮಯದಲ್ಲಿ ತಮ್ಮ ಬೇಸರಿಕೆಯನ್ನು ಕಳೆಯಲು ಇಬ್ಬರು ಮರಗಳ ಕೆಳಗೂ ಮನೆಯ ಮುಂದಿನ ಹಜಾರದಲ್ಲಿಯೂ ಕುಳಿತು ಆನೆಘಟ್ಟ ಆಟವನ್ನು ಆಡುತ್ತಾರೆ. ಗಟ್ಟಿಗಳನ್ನು ಬರೆದು ಎದಿರು-ಬದಿರು ಕುಳಿತು ಆನೆ-ಕುರಿ ಎಂದು ಕಾಯಿಗಳನ್ನು ನಡೆಸುತ್ತಾ ಆಡುವ ಆಟವೇ ಆನೆಘಟ್ಟ ಅಥವಾ ಹುಲಿಗಟ್ಟ ಕುರಿಯನ್ನು ಕೊಂದು ತಿನ್ನುವ ಆಟ ಹುಲಿಗಟ್ಟ ಎಂದು ಎರಡು ರೀತಿಯಾಗಿಯು ಹೇಳುತ್ತಾರೆ.

ಮೊದಲು ಒಂದು ದೊಡ್ಡ ತ್ರಿಕೋನವನ್ನು ರಚಿಸುತ್ತಾರೆ. ಮಧ್ಯೆ ಗೆರೆಯನ್ನು ಎಳೆದು ಎರಡು ಲಂಬಕೋನ ತ್ರಿಕೋನಗಳನ್ನು ರಚಿಸುತ್ತಾರೆ. ಮೇಲಿನಿಂದ ಮೂರು ಅಂಗುಲ ಮತ್ತು ಕೆಳಗಿನಿಂದ ಮೂರು ಅಂಗುಲ ಜಾಗಬಿಟ್ಟು ಆ ತ್ರಿಕೋನಗಳಿಗೆ ಎರಡು ಅಡ್ಡ ಗೆರೆಗಳನ್ನು ಎಳೆಯುತ್ತಾರೆ. ಸಮಾಂತರವಾಗಿ ಎಳೆದ ಆ ಎರಡು ಗೆರೆಗಳನ್ನು ಭೇದಿಸುವಂತಹ ತ್ರಿಕೋನಗಳಿಂದ ಹೊರಗೆ ಎರಡು ಕಡೆಗಳಲ್ಲಿಯೂ ಒಂದೊಂದು ಗೆರೆಯನ್ನು ಎಳೆಯುವರು. ಅಡ್ಡಗೆರೆ ಮತ್ತು ಉದ್ದಗೆರೆಗಳೆರಡರಲ್ಲೂ ಉದ್ದವಾಗಿದ್ದು ಮೊದಲು ತ್ರಿಕೋನಗಳು ಹೊರಗಿದ್ದು ಮೂರು ಮೂರು ಅಂಗುಲ ಹೊರಗಿರುವಂತೆ ಅವುಗಳನ್ನು ಸೇರಿಸಿ ಎರಡು ಬದಿಗಳಲ್ಲಿಯೂ ಎರಡೆರಡು ಚಿಕ್ಕ ಲಂಬಕೋನ ಬರುವಂತೆ ತ್ರಿಕೋನಗಳನ್ನು ರಚಿಸುತ್ತಾರೆ. ಇದು ಆನೆಘಟ್ಟದ ಆಟದ ಸಿದ್ಧತೆಯಾಗಿರುತ್ತದೆ.

ಇಬ್ಬರು ಎದುರು-ಬದುರು ಕುಳಿತುಕೊಂಡು ಆಡಲು ಪ್ರಾರಂಭಿಸುತ್ತಾರೆ. ಅವರ ಎರಡು ಕಡೆ ಇವರನ್ನು ಹುರಿದುಂಬಿಸಲು ಸಾಕಷ್ಟು ಜನ ಕುಳಿತಿರುತ್ತಾರೆ. ಇಬ್ಬರ ಮಧ್ಯೆ ನಡೆಯುವ ರೋಚಕ ಆಟವಿದು. ಆನೆಗಳಿಗೆ ಸ್ವಲ್ಪ ದೊಡ್ಡ ಕಲ್ಲುಗಳು, ಕುರಿಗಳಿಗೆ ಸಣ್ಣ ಕಲ್ಲುಗಳನ್ನು ತೆಗೆದುಕೊಳ್ಳುವರು. ಒಬ್ಬರು ಆನೆಗಳನ್ನು ನಡೆಸಿದರೆ, ಮತ್ತೊಬ್ಬರು ಕುರಿಗಳನ್ನು ನಡೆಸುವರು. ಆನೆ ನಡೆಸುವವರು ಎರಡು ಗೆರೆಗಳು ಕೂಡುವ ಜಾಗದಲ್ಲಿ ಇಟ್ಟು ಬಿಡುತ್ತಾರೆ. ನಂತರ ಕುರಿ ನಡೆಸುವವರು ಆನೆಯಿಂದ ಸಾಕಷ್ಟು ದೂರವಿರುವಂತೆ ಕುರಿಗಳನ್ನು ಒಂದೊಂದು ಇಡುತ್ತಿರುತ್ತಾರೆ. ಆನೆಯಿರುವ ಪಕ್ಕದಲ್ಲಿ ಕುರಿಯಿದ್ದು ಮುಂದಿನ ಮನೆ ಖಾಲಿ ಇದ್ದರೆ ಆನೆ ಕುರಿಯನ್ನು ತುಳಿದು ಸಾಯಿಸಿತು ಎಂದು ಆನೆ ನಡೆಸುವವನು ತನ್ನ ಬಳಿ ಕಾಯಿಯನ್ನು ಎತ್ತಿಟ್ಟುಕೊಳ್ಳುತ್ತಾನೆ. ಆನೆ ಚಲಿಸದಂತೆ ಅಕ್ಕಪಕ್ಕದ ಎರಡು ಮನೆಗಳಲ್ಲಿಯೂ ಕುರಿಗಳಿದ್ದರೆ ಆನೆ ಚಲಿಸದಂತೆ ಕಟ್ಟಿದ್ದೇನೆ ಎನ್ನುತ್ತಾನೆ. ಅಲ್ಲಿಗೆ ಒಂದು ಆನೆಯ ಆಟ ಸಂಪೂರ್ಣವಾಗಿ ಸ್ಥಗಿತಗೊಳ್ಳುತ್ತದೆ. ತನ್ನ ಬಳಿಯಿರುವ ಹದಿನಾರು ಕುರಿಗಳಿಂದ ಆನೆಗಳನ್ನು ಕಟ್ಟಿ ಹಾಕಲು ಸಾಧ್ಯವಾದಷ್ಟು ಯೋಚಿಸಿ ಕುರಿಗಳನ್ನು ಇಡುತ್ತಿರುತ್ತಾನೆ. ಹದಿನಾರು ಕುರಿಗಳು ಮುಗಿದು ಹೋಗುವಷ್ಟರಲ್ಲಿಯೇ ನಾಲ್ಕು ಆನೆಗಳನ್ನು ಕಟ್ಟಿ ಹಾಕುವ ಜಾಣರಿದ್ದಾರೆ. ನಾಲ್ಕು ಆನೆಗಳಿಂದಲೇ ಕುರಿಗಳನ್ನು ಇಡುತ್ತಿದ್ದಂತೆಯೇ ಎಲ್ಲವನ್ನು ಸಾಯಿಸಿಬಿಟ್ಟು ಆಟವನ್ನು ಗೆಲ್ಲುವ ಚತುರರು ಇದ್ದಾರೆ. ನಾಲ್ಕು ಆನೆಗಳನ್ನು ಕಟ್ಟಿಹಾಕಿ, ಅಥವಾ ಕುರಿಗಳನೆಲ್ಲಾ ಸಾಯಿಸಿ ಆಟ ಮುಗಿಸಬಹುದು. ಆನೆ ನಡೆಸುವವನಿಗಿಂತ ಕುರಿ ನಡೆಸುವ ವ್ಯಕ್ತಿ ಬಹಳ ಜಾಗರೂಕನಾಗಿರಬೇಕಾಗುತ್ತದೆ. ಇದೊಂದು ಸೊಗಸಾದ ಆಟ. ಈ ಆಟ ಪ್ರಾಣಿ, ಪ್ರಾಣಿಗಳ ನಡುವಿನ ಬೇಟೆಯ ಚಿತ್ರಣವನ್ನು ಸಾಂಕೇತಿಕವಾಗಿ ಪ್ರತಿನಿಧಿಸುವಂತಿದೆ.

### ೬ : ೬ : ೩ : ೩ ಹೆಂಗಸರ ಆಟಗಳು

ಈ ಸಮುದಾಯದ ಮಹಿಳೆಯರು ಹೊರಗೆ ಹೋಗಿ ಹೊಲಗದ್ದೆಗಳಲ್ಲಿ ದುಡಿದು ಮತ್ತೆ ಮನೆಯಲ್ಲಿ ದಿನನಿತ್ಯದ ಕೆಲಸ ಕಾರ್ಯಗಳನ್ನು ಮಾಡುವುದರಲ್ಲೇ ನಿರತರಾಗಿರುತ್ತಾರೆ. ಬಿಡುವಿನ ಸಮಯದಲ್ಲಿ ಮನೆಯಲ್ಲಿಯೇ ಒಳಾಂಗಣದ ಆಟಗಳನ್ನು ಆಡುತ್ತಾರೆ. ಅವಕಾಶ ಸಿಕ್ಕರೆ ಚೌಕಬಾರ, ಚನ್ನೆಮಣೆಯಾಟ ಮುಂತಾದ ಆಟಗಳಿಂದ ತಮ್ಮ ಬೇಸರಿಕೆಗಳನ್ನು ಕಳೆದುಕೊಳ್ಳುತ್ತಾರೆ.

ಅ ಚೌಕಬಾರ

ಇದು ಮನೆಯ ಜಗಲಿಯ ಮೇಲೆ ಅಥವಾ ಮನೆಯ ಒಳಗೆ ಹೆಂಗಸರು ಕೂಡಿ ಆಡುವಂತಹ ಆಟ. ಕೆಲವು ಸಾರಿ ಹೆಂಗಸರ ಜೊತೆಗೆ ಗಂಡಸರು, ಮಕ್ಕಳು ಕುಳಿತು ಆಡುತ್ತಾರೆ. ಈ ಆಟವನ್ನು ನಾಲ್ಕು ಜನರು ಅಥವಾ ಇಬ್ಬರು ಕುಳಿತು ಆಡಬಹುದು. ಚೌಕಬಾರದ ಆಟದಲ್ಲಿ ಐದು ಮನೆಯ ಆಟ ಹಾಗೂ ಏಳು ಮನೆಯ ಆಟ ಎಂಬುದಾಗಿ ಎರಡು ರೀತಿಯಲ್ಲಿ ಆಡುತ್ತಾರೆ. ಐದು ಮನೆಯ ಆಟದ ಮೂಲೆಗಳಲ್ಲಿ ಘಟ್ಟದ ಮನೆಗಳು ನಾಲ್ಕು ಇರುತ್ತವೆ. ಜೊತೆಗೆ ಮತ್ತೊಂದು ಮಧ್ಯದಲ್ಲಿ ಹಣ್ಣಿನ ಮನೆ ಇರುತ್ತದೆ. ಹಾಗೆಯೇ ಏಳು ಮನೆಯ ಆಟದಲ್ಲಿ ಒಳಭಾಗಕ್ಕೆ ನಾಲ್ಕು ಘಟ್ಟದ ಮನೆಗಳಿರುತ್ತವೆ. ಹೊರಭಾಗಕ್ಕೆ ಎಂಟು ಘಟ್ಟದ ಮನೆಗಳಿರುತ್ತವೆ. ಮಧ್ಯದಲ್ಲಿ ಒಂದು ಹಣ್ಣಿನ ಘಟ್ಟ ಇರುತ್ತದೆ. ಐದು ಮನೆಯ ಚೌಕಬಾರದ ಆಟದಲ್ಲಿ ಕಾಯಿಗಳನ್ನು ಒಂದು ಸುತ್ತು ತಂದು ಹಣ್ಣು ಮಾಡಿದರೆ, ಏಳು ಮನೆಯ ಆಟದಲ್ಲಿ ಕಾಯಿಗಳನ್ನು ಎರಡು ಸುತ್ತು ತಂದು ಹಣ್ಣು ಮಾಡಬೇಕಾಗುತ್ತದೆ. ಆಟದಲ್ಲಿ ನಾಲ್ಕು ಜನ ಕುಳಿತರೆ ಮೊದಲಿನ ಸಾಲಿನ ಮಧ್ಯದ ನಾಲ್ಕು ಘಟ್ಟದ ಮನೆಗೆ ನಾಲ್ಕು ಕಾಲುಗಳಂತೆ ಕಾಯಿಗಳನ್ನು ಇಟ್ಟುಕೊಳ್ಳುತ್ತಾರೆ. ಕಲ್ಲುಗಳು, ಕಡ್ಡಿಗಳು, ಬೇಳೆಕಾಳುಗಳನ್ನು ಕಾಯಿಗಳಾಗಿ ಇಟ್ಟುಕೊಳ್ಳುತ್ತಾರೆ. ಏಳನೆಯ ಮನೆಯ ಆಟಕ್ಕೆ ಆರು ಕಾಯಿಗಳನ್ನು ಇಟ್ಟುಕೊಳ್ಳುವರು. ನಾಲ್ಕು ಜನ ಆಡಿದರೆ ಜೋಡಿಯಾಗಿ ಆಡಿದರೆ, ಎರಡೇ ಕಡೇ ಬೇರೆ ಬೇರೆಯಾಗಿ ಆಡಿದರೆ ನಾಲ್ಕು ಕಡೆಗಳಲ್ಲಿಯೂ ಕಾಯಿಗಳನ್ನು ಇಟ್ಟುಕೊಳ್ಳುವರು. ಐದನೆಯ ಮನೆಯ ಆಟಕ್ಕೆ ನಾಲ್ಕು ಚೌಕಗಳು ಬೇಕು. ಏಳನೆಯ ಮನೆಯ ಆಟಕ್ಕೆ ಆರು ಚೌಕಗಳು ಬೇಕು. 'ಚೌಕ'ವನ್ನು ಹುಣುಸೇಬೀಜವನ್ನು ನೆಲಕ್ಕೆ ತೀಡಿ ಮಾಡಿರುತ್ತಾರೆ ಅಥವಾ ಕವಡೆಗಳನ್ನು ಬಳಸುತ್ತಾರೆ.

ಆಟವನ್ನು ಆಡುವಾಗ ಚೌಕಗಳು ಬಿದ್ದಂತೆ ಕಾಯಿಗಳನ್ನು ನಡೆಸುತ್ತಾ ಬರುತ್ತಾರೆ. ಕಾಯಿಗಳನ್ನು ಬಲಭಾಗದಿಂದ ನಡೆಸುತ್ತಾ ಎದುರಾಳಿಯು ತನ್ನ ಕಾಯಿಯನ್ನು ಹೊಡೆಯದಂತೆ ನೋಡಿಕೊಳ್ಳಬೇಕು. ಘಟ್ಟಗಳಲ್ಲಿದ್ದರೆ ಕಾಯಿಗಳನ್ನು ಹೊಡೆಯುವಂತಿಲ್ಲ. ಮೊದಲು ಕಾಯಿಯನ್ನು ಹೊಡೆದು ನಂತರ ಒಳಪ್ರವೇಶಿಸುವರು. ಅಲ್ಲಿಯೂ ಹೊಡೆತಕ್ಕೆ ಸಿಕ್ಕದಂತೆ ಜಾಗರೂಕರಾಗಿ ಆಡುತ್ತಾ ಕಾಯಿಯನ್ನು ಹಣ್ಣು ಮಾಡಬೇಕು. ಎಲ್ಲಾ ಕಾಯಿಗಳನ್ನು ಒಳತಂದು ಹಣ್ಣು ಮಾಡಿದರೆ ಅವರ ಆಟ ಗೆದ್ದಂತೆ. ಇದೇ ರೀತಿಯಲ್ಲಿಯೇ ಏಳು ಮನೆಯ ಆಟವನ್ನು ಆಡುತ್ತಾರೆ. ಅಲ್ಲಿ ಎರಡು ಸುತ್ತು ಬಳಸಿ ಬಂದು ಕಾಯಿಗಳನ್ನು ಹಣ್ಣು ಮಾಡಬೇಕು. ಐದು ಮನೆಯ ಆಟದಲ್ಲಿ ನಾಲ್ಕು ಕವಡೆಗಳು ಮೇಲ್ಮುಖವಾಗಿ ಬಿದ್ದರೆ ಚೌಕವೆಂದು, ಕೆಳಮುಖವಾಗಿ ಬಿದ್ದರೆ ಬಾರ ಎನ್ನುತ್ತಾರೆ. ಹೆಸರೇ ಸೂಚಿಸುವಂತೆ ಚೌಕ-

ನಾಲ್ಕು, ಬಾರ-ಎಂಟು ಎಂದು ಎಣಿಸುತ್ತಾರೆ. ಕವಡೆಗಳು ಮೇಲ್ಮುಖವಾಗಿ ಬಿದ್ದಂತಹ ಸಂಖ್ಯೆ ಆಟದಲ್ಲಿ ತೆಗೆದುಕೊಳ್ಳುತ್ತಾರೆ. ಏಳನೆ ಮನೆಯ ಆಟದಲ್ಲಾದರೆ ಚೌಕಕ್ಕೆ ಆರು ಎಂದು ಬಾರಕ್ಕೆ ಹನ್ನೆರಡು ಮನೆಗಳಿಗೆ ಕಾಯಿ ನಡೆಸಬಹುದು. ಆಟದಲ್ಲಿ ಎದುರಾಳಿಯ ಕಾಯಿಯನ್ನು ಮೊದಲು ಕೊಲ್ಲಬೇಕು. ಇಲ್ಲದಿದ್ದರೆ ಹಣ್ಣು ಮಾಡುವಂತಿಲ್ಲ. ಇದು ಆಟಗಾರನ ಬುದ್ಧಿವಂತಿಕೆಯನ್ನು ತೋರಿಸುತ್ತದೆ.

**ಆ ಚನ್ನೆಮಣೆ ಆಟ**

ಇದಕ್ಕೆ 'ಅಳಿಗುಳಿ ಮನೆಯಾಟ' ಎಂದು ಸಹ ಕರೆಯುತ್ತಾರೆ. ಒಂದು ಸಾರಿ ಇಬ್ಬರು ಮಾತ್ರ ಆಡಬಹುದಾದ ಆಟವಿದು. ಇದಕ್ಕೆ ಅಳಿಗುಳಿ, ಚೆಂದದ ಮಣೆ, ಚನ್ನೆಮಣೆ ಮುಂತಾದ ಹೆಸರುಗಳು ಇವೆ. ಒಂದೇ ಮಣೆಯಲ್ಲಿ ಎರಡು ಕಡೆಯು ಏಳು ಮನೆಗಳ ಸಾಲುಗಳಿರುತ್ತವೆ. ಇವನ್ನು ಕಾಡಿನಲ್ಲಿ ಸಿಗುವ ಮರದ ಹಲಗೆಯಿಂದ ತಯಾರಿಸುತ್ತಾರೆ. ಆಟಕ್ಕೆ, ಕಾಡಿನಲ್ಲಿ ಸಿಗುವ ಗುಲಗಂಜಿ, ಅವಡೆ ಅಥವಾ ಹುಣಸೇಬೀಜಗಳನ್ನು ಬಳಸುತ್ತಾರೆ. ಪ್ರತಿಯೊಂದು ಗುಳಿಗಳಿಗೂ ಹನ್ನೆರಡು ಬೀಜಗಳನ್ನು ಹಾಕುತ್ತಾರೆ. ಮಧ್ಯದಲ್ಲಿ ಎರಡು ಕಡೆಯ ಗುಳಿಗಳಿಗೂ ಒಂದೊಂದು ಹುಣುಸೇ ಬೀಜವನ್ನು ಹಾಕಿ ಇದು ಕಾಶಿಮನೆ ಆಟವೆಂದು ಹೇಳುತ್ತಾರೆ. ಇಬ್ಬರು ಒಂದೊಂದು ಕಡೆ ಕುಳಿತುಕೊಂಡು ಆಟವನ್ನು ಪ್ರಾರಂಭಿಸುತ್ತಾರೆ. ಆಟವನ್ನು ಆಡುವಾಗ ತಮ್ಮ ಸಾಲಿನ ಒಂದು ಮನೆಯ ಹುಣುಸೇಬೀಜಗಳನ್ನು ತೆಗೆದುಕೊಂಡು ಬಲಬದಿಯಿಂದ ಗುಳಿಗಳಿಗೆ ಹಾಕುತ್ತಾ ಹೋಗುವರು. ಕೊನೆಯ ಕಾಳು ಹಾಕಿದ ಮನೆಬಿಟ್ಟು ಮುಂದಿನ ಮನೆಯ ಕಾಳುಗಳನ್ನು ತೆಗೆದುಕೊಂಡು ಮತ್ತೆ ಅದೇ ರೀತಿಯಾಗಿ ಕಾಳುಗಳನ್ನು ಮನೆಗಳಿಗೆ ಹಾಕುತ್ತಾ ಹೋಗಬೇಕು. ಹೀಗೆ ಎರಡು ಮೂರು ಸುತ್ತು ಬರುವ ಹೊತ್ತಿಗೆ ಕೊನೆಯ ಕಾಳು ಹಾಕಿದ ಪಕ್ಕದಲ್ಲಿ ಗುಳಿ ಖಾಲಿ ಇದ್ದರೆ, ಅದನ್ನು ಮುಟ್ಟಿ ಅದರ ಮುಂದಿನ ಮನೆಯ ಕಾಳುಗಳನ್ನು ತೆಗೆದುಕೊಳ್ಳಬೇಕು. ಇದಕ್ಕೆ 'ಪಂತ' ಅಥವಾ 'ಕೊಂತ' ಎಂದು ಹೇಳುತ್ತಾರೆ. ಕಾಳು ಎತ್ತಿದ ಮನೆಗಳಲ್ಲಿ ಆರು ಕಾಳುಗಳು ಸೇರಿದಾಗ 'ಕರು' ಎಂದು ಅದನ್ನು ತೆಗೆದುಕೊಳ್ಳುತ್ತಾರೆ. ಆಟವಾಡುವಾಗ ಕಾಶಿಯ ಮನೆಯ ಹಿಂದಿನ ಮನೆಗೆ ಕಾಳು ಹಾಕಿದ್ದು ಕೊನೆಯಾದರೆ ಆಗ 'ಕಾಶಿ ಕೈ ತಡೆಯಿತು' ಎಂದು ಎದುರಾಳಿಗೆ ಆಟವನ್ನು ಬಿಡಬೇಕು. ಕಡೆಗೆ ಕಾಶಿಯು ಯಾರಿಗೆ ಬಂತೆಂದು ನಿರ್ಧರಿಸಿಕೊಳ್ಳುತ್ತಾರೆ. ಯಾರಿಗೂ ಬರದಿದ್ದರೆ ಇಬ್ಬರು ಸಮಭಾಗವಾಗಿ ಹಂಚಿಕೊಳ್ಳುತ್ತಾರೆ. ಕೆಲವು ಸಂದರ್ಭಗಳಲ್ಲಿ ಒಬ್ಬರಿಗೆ ಎರಡು ಕಾಶಿಗಳು ಬರುತ್ತವೆ. ಕಡೆಗೆ ಯಾರು ಕಡಿಮೆ ಕಾಳುಗಳಿದ್ದು ಖಾಲಿ ಮನೆಗಳಿರುತ್ತವೆಯೊ ಅದಕ್ಕೆ 'ಪಿಗ್ಗಿ' ಎಂದು ಕರೆಯುತ್ತಾರೆ. ಅದಕ್ಕೆ ಕಲ್ಲು, ಕಡ್ಡಿಯನ್ನು ಹಾಕಿ ಮುಂದಿನ ಆಟದಿಂದ ಆ ಮನೆಗಳಿಗೆ ಕಾಳುಗಳನ್ನು ಹಾಕುವಂತಿಲ್ಲ. ಗೆದ್ದವರು ಆಟವನ್ನು ಮೊದಲು ಆಡುತ್ತಾರೆ. ಯಾರು ಎಲ್ಲ ಕಾಳುಗಳು ಸೋತು ಹೆಚ್ಚು 'ಪಿಗ್ಗಿ' ಬೀಳುತ್ತಾರೋ ಅವರು ಆಟದಲ್ಲಿ ಸೋತಂತೆ. ಇದು ಬಹಳ ಹಿಂದಿನಿಂದಲೂ ಬಹು ಜನಪ್ರಿಯವಾದ ಆಟವೆಂದು ಹೇಳುತ್ತಾರೆ. ಆಟವನ್ನು ಹೆಚ್ಚು ಕಲಿತವರು ಯಾವ ಮನೆಯ ಕಾಳುಗಳನ್ನು ತೆಗೆದರೆ ಹೆಚ್ಚು ಕಾಳು ಬರುತ್ತದೆ ಎಂದು ತಿಳಿದುಕೊಂಡಿರುತ್ತಾರೆ. ಹೊಸದಾಗಿ ಆಡುವವರಿಗೆ ಆಟದಲ್ಲಿನ ಒಳ ತಿರುಳುಗಳ ಬಗ್ಗೆ ಅರಿತಿರುವುದಿಲ್ಲವಾದ್ದರಿಂದ ಆಟದಲ್ಲಿ ಸೋಲಬೇಕಾಗುತ್ತದೆ. ಮನೆಯಲ್ಲಿನ ಹೆಂಗಸರು, ಮುದುಕಿಯರ ಅಚ್ಚುಮೆಚ್ಚಿನ ಆಟವಾಗಿದೆ. ಜೊತೆಗೆ ಹುಡುಗರು, ಹುಡುಗಿಯರು, ಗಂಡಸರು ಎಲ್ಲರೂ ಸೇರಿ ಆಡುತ್ತಾರೆ.

ಆಟಗಳು ಸರ್ವರಿಗೂ ಸಂತೋಷವನ್ನುಂಟು ಮಾಡುವುದರಿಂದ ವಯೋಮಾನದ ಅಂತರವಿಲ್ಲದೆ, ಸರ್ವರೂ ಆಟಗಳಲ್ಲಿ ಭಾಗವಹಿಸುತ್ತಾರೆ. ದೈನಂದಿನ ಬದುಕಿನಲ್ಲಿ ಕೆಲವೊಮ್ಮೆ ಯಾತನೆಯ ಬದುಕಿನ ವಾಸ್ತವತೆಯನ್ನು ಮರೆಯಲು ಇವು ತುಂಬಾ ಸಹಕಾರಿಯಾಗುತ್ತವೆ. ಆಟವಾಡದಿರುವ ಮಕ್ಕಳೇ ಇಲ್ಲ. ಮಕ್ಕಳ ಪ್ರಥಮ ಪಾಠವು ಆಟವೇ ಆದ್ದರಿಂದ ಅವುಗಳಿಗೆ ಮನೆಗಿಂತ ಬಯಲೇ ಹೆಚ್ಚು ಜನಪ್ರಿಯವಾಗಿರುತ್ತದೆ. ಆಟಗಳು ಮಕ್ಕಳಿಗೆ ಚೇತನವನ್ನು ನೀಡುತ್ತವೆ. ಆಟಗಳನ್ನು ಆಡುವುದರಿಂದ ಅವರಿಗೆ ಅರಿವಿಲ್ಲದಂತೆಯೇ ಮಾನಸಿಕವಾಗಿ, ದೈಹಿಕವಾಗಿ ಬೆಳವಣಿಗೆಯನ್ನು ಹೊಂದುತ್ತಾರೆ. ಆಟಗಳು ನಾಗರಿಕರಿಗೆ, ಬುಡಕಟ್ಟು ಸಮುದಾಯಗಳಿಗೆ, ಜನಾಂಗಗಳಿಗೆ, ಪ್ರಾಣಿಗಳಿಗೆ, ಪಕ್ಷಿಗಳಿಗೆ ಚೇತನ ನೀಡುತ್ತವೆ. ಒಟ್ಟಾರೆ ಇವು ಮನರಂಜನಾ ಮಾಧ್ಯಮದಂತಿರುತ್ತವೆ.

ಒಡಿಗ ಬುಡಕಟ್ಟು ಸಮುದಾಯದಲ್ಲಿ ಇಂದು ಹಿಂದೆ ಇದ್ದಂತಹ ಕಲಾತ್ಮಕ ಆಟಗಳು ಹಾಗೂ ಬುಡಕಟ್ಟಿನೊಳಗೆ ಇದ್ದಂತಹ ಸಾಂಪ್ರದಾಯಿಕ ಆಟಗಳು ಹೆಚ್ಚಾಗಿ ಕಂಡು ಬರುವುದಿಲ್ಲ. ಯುವ ಪೀಳಿಗೆಯವರು ಇದರಲ್ಲಿ ಆಸಕ್ತಿ ತೋರದೆ ಇರುವುದು ಬಹುಮುಖ್ಯ ಕಾರಣವಾಗಿರಬಹುದು. ತನ್ನ ಸಮುದಾಯಕ್ಕೆ ನಾಗರಿಕತೆಯ ಅರಿವು ಹೊಳೆಯಂತೆ ಹರಿದು ಬರುತ್ತಿರುವುದರಿಂದ ಇವರು ಅದನ್ನೇ ಬೆನ್ನತ್ತಿ ಹೊರಟು ತಮ್ಮ ಕಲಾತ್ಮಕ ಹಾಗೂ ಸಾಂಪ್ರದಾಯಿಕ ಆಟಗಳನ್ನು ಮರೆತು ನಾಗರಿಕರ ಆಟಗಳ ಕಡೆಗೆ ಮನಸ್ಸು ಹರಿಸುತ್ತಿದ್ದಾರೆ. ಇದರಿಂದ ಸಮುದಾಯಕ್ಕೆ ಸಂಬಂಧಿಸಿದ ಸಾಂಪ್ರದಾಯಿಕ ಆಟಗಳು ಕಣ್ಮರೆಯ ಹಂತವನ್ನು ತಲುಪಿವೆ.

**ಅಡಿ ಟಿಪ್ಪಣಿಗಳು**

೧ ಕರಿಶೆಟ್ಟಿರುದ್ರಪ್ಪ : ಮ್ಯಾಸನಾಯಕರು : ಒಂದು ಜನಾಂಗಿಕ ಅಧ್ಯಯನ : ಕನ್ನಡ ಸಾಹಿತ್ಯ ಪರಿಷತ್ತು : ಬೆಂಗಳೂರು: ೧೯೯೫.

## ಅಧ್ಯಾಯ - ೭

# ಸಾಮಾಜಿಕ ಪರಿವರ್ತನೆಗಳು

**ಪ್ರವೇಶ**

೭ : ೧ ಭೌಗೋಳಿಕ

೭ : ೨ ಸಾಂಸ್ಕೃತಿಕ

೭ : ೩ ರಾಜಕೀಯ

೭ : ೪ ಆರ್ಥಿಕ

೭ : ೫ ಶೈಕ್ಷಣಿಕ

೭ : ೬ ಸಾಮಾಜಿಕ

೭ : ೭ ಸಮಸ್ಯೆಗಳು ಮತ್ತು ಪರಿಹಾರಗಳು ಅಥವಾ ಅಭಿವೃದ್ಧಿ ಕಾರ್ಯಗಳು

೭ : ೮ ಸರ್ಕಾರೇತರ ಸಂಸ್ಥೆಗಳ ಪಾತ್ರ

## ಪ್ರವೇಶ

ಬುಡಕಟ್ಟು ಸಮುದಾಯಗಳು ಸಾಮಾನ್ಯವಾಗಿ ಬೆಟ್ಟಗುಡ್ಡಗಳಲ್ಲಿ ವಾಸಿಸುತ್ತಾರೆ. ಈ ಸಮುದಾಯಗಳು ಆರಂಭದಿಂದಲೂ ಆಯ್ಕೆ ಮಾಡಿಕೊಂಡದ್ದು ಈ ಬಗೆಯ ಜನರಹಿತ ನೆಲೆಗಳು ಎಂಬುದನ್ನು ಮುಖ್ಯವಾಗಿ ಗಮನಿಸಿದರೆ ಈ ಆಯ್ಕೆಯ ಹಿನ್ನೆಲೆಯನ್ನು ಗುರುತಿಸಿಕೊಳ್ಳುವ ಅಗತ್ಯವಿದೆ. ಈ ಪ್ರತ್ಯೇಕ ನೆಲೆಸುವಿಕೆಯಿಂದ ಬುಡಕಟ್ಟು ಸಮುದಾಯಗಳ ಸಂಸ್ಕೃತಿಯು ಮೂಲ ಸಾಂಸ್ಕೃತಿಕ ಪಳೆಯುಳಿಕೆಗಳನ್ನು ಸಂರಕ್ಷಿಸಿಕೊಂಡು ಬರಲು ಸಾಧ್ಯವಾಗಿದೆ. ಆದರೆ ನಾಗರಿಕ ಸಮಾಜ ಅನುಭವಿಸುತ್ತಿರುವ ಜೀವನಶೈಲಿಯನ್ನು ಕಾಡುವಾಸಿಗಳು ಅನುಭವಿಸದಿದ್ದರೂ, ಪಾರಂಪರಿಕ ಜ್ಞಾನ, ಪಾರಂಪರಿಕ ಸಾಮಾಜಿಕ ಮಾದರಿಯಿಂದ ಸತ್ವವನ್ನು ಉಳಿಸಿಕೊಂಡಿವೆ. ಸಾಮಾಜಿಕ ಪರಿವರ್ತನೆಯೆನ್ನುವುದು ಈ ಬಗೆಯ ಕೆಲವು ಪಾರಂಪರಿಕ ಜ್ಞಾನ ಶಿಸ್ತುಗಳಿಂದ ಮತ್ತು ಕೆಲವು ಆಧುನಿಕ ಶೈಲಿಯ ಶಿಸ್ತುಗಳಿಂದ ಪ್ರಭಾವಿತವಾಗುತ್ತಿರುತ್ತದೆ. ಯಾವುದೇ ಸಮುದಾಯವು ಒಂದು ಜೀವನ ಮಾದರಿಯಲ್ಲಿ ಸಿದ್ಧಗೊಂಡ ನಂಬಿಕೆ, ಸಂಪ್ರದಾಯ, ಆಚರಣೆಗಳು ಹಾಗೆಯೇ ಉಳಿಯಲು ಸಾಧ್ಯವಿಲ್ಲ. ಹೀಗೆ ಅವರ ಸಾಮಾಜಿಕ ಜೀವನ ವಿಧಾನವೂ ಕೂಡ. ಕಾಲಕ್ರಮೇಣ ಆಯಾ ಭೌಗೋಳಿಕ ವಲಯದಲ್ಲಿ ವ್ಯವಸ್ಥೆಯೆಂಬುದು ಬದಲಾವಣೆ ಕ್ರಿಯೆಗೆ ಯಾವಾಗಲೂ ತನ್ನನ್ನು ಒಡ್ಡಿಕೊಳ್ಳುತ್ತಿರುತ್ತದೆ. ಆದರೆ ಈ ಬದಲಾವಣೆಯ ಪ್ರಮಾಣ ಆಯಾ ಸಮುದಾಯವನ್ನು ಅವಲಂಬಿಸಿರುತ್ತದೆ. ಭಾರತದಲ್ಲಿ ಬದುಕುವ ಅನೇಕ ಬುಡಕಟ್ಟು ಸಮುದಾಯಗಳು ಇನ್ನೂ ನಾಗರಿಕ ಜಗತ್ತಿನ ಸಂಪರ್ಕದಿಂದ ದೂರವೇ ಉಳಿದಿರುವುದನ್ನು ಗಮನಿಸಿದರೆ ಬದಲಿಕೆಯ ಪ್ರಮಾಣ ನಿಧಾನಗತಿಯಲ್ಲಿ ಚಲಿಸುತ್ತಿರುವುದನ್ನು ಗುರುತಿಸಬಹುದು.

ಒಡಿಗ ಸಮುದಾಯವೂ ಕಾಡುವಾಸಿಗಳಾಗಿ, ತಮ್ಮ ಭೌತಿಕ ಮತ್ತು ಬೌದ್ಧಿಕ ವಲಯದಲ್ಲಿ ಕೆಲವಾರು ಮಾರ್ಪಾಡುಗಳನ್ನು ಪಡೆದುಕೊಂಡಿದೆ. ಅಂದರೆ ಆಧುನಿಕತೆಯ ಪ್ರಭಾವ ತೀವ್ರಗತಿಯಲ್ಲಿ ಆಗಿದೆ. ಆದರೂ ಪೂರ್ಣ ಪ್ರಮಾಣದಲ್ಲಿ ಪ್ರಭಾವಕ್ಕೆ ಒಳಗಾಗಿಲ್ಲ. ಬದಲಾಗಿ ಪಾರಂಪರಿಕ ಮೌಲ್ಯಗಳೊಂದಿಗೆ ಆಧುನಿಕತೆಯ ಪ್ರಭಾವದ ಮೂಲಕ ಮುಖಾಮುಖಿಯಾಗುವ ಪ್ರಾಥಮಿಕ ಹಂತವನ್ನು ಮೀರಿ ಆ ಮೂಲಕ ನಾಗರಿಕ ಜೀವನದೊಂದಿಗೆ ಸಂಘರ್ಷಕ್ಕೆ ಇಳಿಯುವ ಹಾದಿಯಲ್ಲಿ ಒಡಿಗರು ಇದ್ದಾರೆ. ಒಡಿಗರು ವಾಸಿಸುವ ನೆಲ, ಆಚರಿಸುವ ಸಂಪ್ರದಾಯ, ಜೀವನ ಮಾದರಿ, ಆರ್ಥಿಕ, ಸಾಮಾಜಿಕ ಮೌಲ್ಯ ಹೀಗೆ ಹಲವಾರು ಸಂಗತಿಗಳು ಪರಿವರ್ತನೆಯ ಹಂತದಲ್ಲಿದ್ದು ನಾಗರಿಕ ಜೀವನಕ್ಕೆ ಹತ್ತಿರವಾಗುತ್ತಿದ್ದಾರೆ. ಅಂತಹ ಹಲವು ಅಂಶಗಳನ್ನು ಈ ಅಧ್ಯಾಯದಲ್ಲಿ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

### ೭ : ೧ ಭೌಗೋಳಿಕ

ಒಡಿಗ ಸಮುದಾಯವು ಚಿತ್ರದುರ್ಗ ಪರಿಸರದಿಂದ ಕಾರಣಾಂತರಗಳಿಂದ ಬಂದು ಕರ್ನಾಟಕದ ಮೈಸೂರು ಜಿಲ್ಲೆ ಹಾಗೂ ಕೇರಳದ ವೈನಾಡು ಜಿಲ್ಲೆಯ ಗಡಿಭಾಗದ ಪರಿಸರದಲ್ಲಿ ವಾಸಿಸುತ್ತಿದೆ. ಈ ಪರಿಸರವು ಮುಖ್ಯವಾಗಿ ಕಾಕನಕೋಟೆ ಅರಣ್ಯ ಪ್ರದೇಶದಿಂದ ಸುತ್ತುವರಿಯಲ್ಪಟ್ಟಿದೆ. ಬುಡಕಟ್ಟು ಜನಸಮುದಾಯವು ಮೂಲತಃ ಕಾಡುವಾಸಿಗಳಾಗಿದ್ದುದರಿಂದಾಗಿ ಅವರು ನಾಡಿನ ಸಂಪರ್ಕವನ್ನು ಅಷ್ಟಾಗಿ ಹೊಂದಿಲ್ಲ. ಮೂಲತಃ ಚಿತ್ರದುರ್ಗ ಪರಿಸರವು ಬಯಲು ಪ್ರದೇಶದಿಂದ ಕೂಡಿದ್ದಾಗಿದೆ. ಇಲ್ಲಿಂದ ವಲಸೆಹೋದ ಒಡಿಗರು ಆರಂಭದ ತಲೆಮಾರಿನಲ್ಲಿ

ನಾಡುವಾಸಿಗಳೆನ್ನಬಹುದೇ? ಎಂಬ ಬಗ್ಗೆ ಆತಂಕಗಳಿವೆ. ಅದೇನೇ ಇದ್ದರೂ ಇಂದು ಕಾಕನಕೋಟೆ ಅರಣ್ಯ ಪ್ರದೇಶದ ದಟ್ಟವಾದ ಕಾಡಿನಲ್ಲಿ ಒಡಿಗರು ನೆಲೆಯೂರಿದ್ದಾರೆ. ಈ ತಲೆಮಾರುಗಳು ಬುಡಕಟ್ಟು ಜೀವನ ಪದ್ಧತಿಯನ್ನೇ ಹೊಂದಿವೆ. ಇಂದಿಗೂ ಈ ಅರಣ್ಯದಲ್ಲಿ ಇವರು ವಾಸಮಾಡುತ್ತಿದ್ದಾರೆ. ತಮ್ಮ ಸಮುದಾಯ ಮಾತ್ರವೇ ಹಟ್ಟಿಗಳನ್ನು ಕಟ್ಟಿಕೊಂಡು ಗುಂಪು ಗುಂಪಾಗಿ ವಾಸಿಸುತ್ತಿದ್ದರು. ಆರಂಭದಲ್ಲಿ ವೃತ್ತಾಕಾರದ ಗುಡಿಸಲುಗಳಲ್ಲಿ ಜೀವಿಸುತ್ತಿದ್ದರು. ಅರಣ್ಯದಲ್ಲಿ ದೊರೆಯುವ ಕಟ್ಟಿಗೆ ಮತ್ತು ತಪ್ಪಲುಗಳೇ ಇವರ ಮನೆಯ ನಿರ್ಮಾಣದ ಆಕರಗಳಾಗಿದ್ದವು. ಇಂದಿಗೂ ಈ ವಸ್ತುಗಳಿಂದ ತಯಾರಾದ ಹಲವಾರು ಗುಡಿಸಲುಗಳಲ್ಲಿ ಒಡಿಗರು ಜೀವಿಸುತ್ತಿದ್ದಾರೆ. ಆಹಾರ ಪದ್ಧತಿಯಲ್ಲೂ ಕಾಡು ಇವರಿಗೆ ಮೂಲದ್ರವ್ಯವಾಗಿತ್ತು. ಇಲ್ಲಿನ ಗಿಡ-ಮರ, ಪ್ರಾಣಿ-ಪಕ್ಷಿಗಳ ನಡುವೆ ಬದುಕುತ್ತಿದ್ದ ಇವರಿಗೆ ವಿಪುಲವಾದ ನೈಸರ್ಗಿಕ ದತ್ತ ನಿರ್ಮಲ ವಾತಾವರಣ, ಆಹಾರಕ್ಕೆ ಬೇಟೆ, ಗಡ್ಡೆ ಗೆಣಸು ದೊರೆಯುತ್ತಿತ್ತು. ಇಂದಿಗೂ ಈ ಸೌಲಭ್ಯ ಇವರ ಜೀವನಕ್ಕೆ ಒದಗುತ್ತಿದೆ. ನಾಗರಿಕ ಹಾಗೂ ಆಧುನಿಕತೆಯ ದಟ್ಟವಾದ ಪ್ರಭಾವವಿರುವ ಸದ್ಯದ ಸ್ಥಿತಿಯಲ್ಲಿಯೂ ಇವರು ಕಾಡಿನಿಂದ ನಾಡಿನ ಕಡೆಗೆ ಬರುವುದರಲ್ಲಿ ನಿಧಾನಗತಿಯಲ್ಲಿದ್ದಾರೆ.

ಕಾಡನ್ನು ನಾಡಿಗರು ತಮ್ಮ ವೈಯಕ್ತಿಕ ಲಾಭ ಹಾಗೂ ಇನ್ನಿತರ ಯೋಜನೆಗಳ ಅಡಿಯಲ್ಲಿ ಮರಗಳನ್ನು ಕಡಿಯುವ ಮೂಲಕ ಅರಣ್ಯವನ್ನು ಬಯಲುಮಾಡುತ್ತಿದ್ದಾರೆ. ಈ ಸಂದರ್ಭದಲ್ಲಿ ಕಾಡಿನ ಮಕ್ಕಳಾದ ಬುಡಕಟ್ಟು ಸಮುದಾಯವು ಈಗಾಗಲೇ ನಾಡಿನ ಸಂಪರ್ಕವನ್ನು ಹೊಂದಿರುವುದು ಕಂಡುಬರುತ್ತಿದೆ. ಒಂದು ಕಾಲದಲ್ಲಿ ಕೇವಲ ಒಡಿಗರು ಮಾತ್ರ ವಾಸಿಸುತ್ತಿದ್ದ ಭೌಗೋಳಿಕ ಪರಿಸರದಲ್ಲಿ ಇಂದು ಹಲವಾರು ಸಮುದಾಯದವರು ವಾಸಿಸುತ್ತಿದ್ದಾರೆ. ನಾಡಿನಿಂದ ಅತ್ಯಂತ ದೂರವಿದ್ದ ಸಮುದಾಯವು ಇಂದು ಗ್ರಾಮಗಳಿಗೆ ಹತ್ತಿರವಾಗಿ, ಗ್ರಾಮ, ನಗರ ಸಮಾಜದೊಂದಿಗೆ ಸಂಪರ್ಕ ಏರ್ಪಡಿಸಿಕೊಂಡು ಆ ಮೂಲಕ ನಾಡುಗಳಲ್ಲಿನ ಮನೆಯ ಮಾದರಿ, ಭೌಗೋಳಿಕ ಚಹರೆಯು ಕಂಡುಬರುವಂತ ತಮ್ಮ ನೆಲೆಗಳನ್ನು ರೂಪಿಸಿಕೊಂಡಿದ್ದಾರೆ. ಒಡಿಗರು ಸಂಪೂರ್ಣ ನಗರ, ಗ್ರಾಮ ಸಮಾಜಕ್ಕೆ ಹತ್ತಿರವಾಗಿಲ್ಲವಾದರೂ, ಆ ಮಾದರಿಯ ಹಲವಾರು ಸಂಗತಿಗಳಲ್ಲಿ ಒಂದು ಹಂತದವರೆಗೆ ಮುಟ್ಟಿದೆ. ಆ ಮುಖೇನ ಕಾಡು ಮತ್ತು ನಾಡಿನ ನಡುವಿನ ಭೌಗೋಳಿಕ ಅಂತರ್ ಸಂಬಂಧವನ್ನು ಬೆಸೆದಿದ್ದಾರೆ.

**೭ : ೨ ಸಾಂಸ್ಕೃತಿಕ**

ಒಡಿಗ ಬುಡಕಟ್ಟು ಸಮುದಾಯವು ತನ್ನ ಪಾರಂಪರಿಕ ಮೌಲ್ಯಗಳನ್ನು ಉಳಿಸಿಕೊಂಡು ಬರುವಲ್ಲಿ ಇಂದು ಕೆಳಮುಖ ಚಲನೆಯನ್ನು ಹೊಂದುತ್ತಿವೆ. ಅಂದರೆ ಪರಂಪರೆಯಿಂದ ಬಂದಂತಹ ಸಂಪ್ರದಾಯಗಳು, ನಂಬಿಕೆಗಳು, ಹಬ್ಬ ಆಚರಣೆ, ದೈವದ ನಂಬಿಕೆ, ಪೂಜಾ ವಿಧಾನಗಳು, ದೇವರ ಆರಾಧನೆ, ಸಾಹಿತ್ಯ, ಕಲೆ, ಕ್ರೀಡೆಯಲ್ಲಿ ಮೂಲ ಸೊಗಡನ್ನು ಉಳಿಸಿಕೊಂಡು ಬಂದಿಲ್ಲವೆನ್ನಬಹುದು. ಪರಂಪರೆಯಿಂದ ಬಂದ ಕೆಲವೇ ಸಾಂಸ್ಕೃತಿಕ ಅಂಶಗಳನ್ನು ಇವರು ಉಳಿಸಿಕೊಂಡಿದ್ದಾರೆ. ಬಹುಶಃ ಚಿತ್ರದುರ್ಗ ಪರಿಸರದ ನಾಗರಿಕ ಸಮಾಜದಿಂದ ಬೇರ್ಪಟ್ಟ ಈ ಸಮುದಾಯವು ಹೆಚ್ಚಾಗಿ ಕಾಡುವಾಸಿಗಳ ವಿಶಿಷ್ಟ ಸಂಸ್ಕೃತಿಯನ್ನು ಹಾಗೆಯೇ ಕಾಪಾಡುವಲ್ಲಿ ಹಿಂದೇಟು ಹಾಕಿದೆ. ಆದರೆ ತೀವ್ರ ತರವಾದಂತಹ ಆಧುನಿಕ ಅಥವಾ ಗ್ರಾಮಸಮಾಜಗಳ ಸಂಸ್ಕೃತಿಗಿಂತ ಭಿನ್ನವಾಗಿ ಇಲ್ಲವೆಂದಲ್ಲ. ಹಲವಾರು

ವಿಷಯಗಳಲ್ಲಿ ಈ ಸಮುದಾಯದ ಆಚರಣೆಗಳು ವೈಶಿಷ್ಟ್ಯತೆಯನ್ನು ಪಡೆದುಕೊಂಡಿವೆ. ಮಿತವಾದ ಜನಸಂಖ್ಯೆಯಿರುವುದರಿಂದಾಗಿ ಈ ಸಮುದಾಯವು ಅಷ್ಟಾಗಿ ತಮ್ಮದೇ ಆದಂತಹ ಸಾಹಿತ್ಯದ ಸೃಜನೆಗೆ ಮುಂದಾಗಿಲ್ಲ ಎಂಬುದನ್ನು ಗಮನಿಸಬಹುದು. ದೈವ-ಧರ್ಮ, ಸಾಹಿತ್ಯ, ಕಲೆ ಮುಂತಾದ ಕೆಲವು ಅಂಶಗಳೊಂದಿಗೆ ಒಡಿಗರು ಆಧುನಿಕತೆಯತ್ತ ಹೇಗೆ ಮುಖಾಮುಖಿಯಾಗುತ್ತಾರೆಂಬುದನ್ನು ಹೀಗೆ ಸಂಕ್ಷಿಪ್ತವಾಗಿ ಗುರುತಿಸಬಹುದು.

**೭ : ೨ : ೧ ಧಾರ್ಮಿಕತೆ**

ಧಾರ್ಮಿಕತೆಯಲ್ಲಿ ಮುಖ್ಯವಾಗಿ ದೈವದ ಅಸ್ತಿತ್ವ ಹಾಗೂ ದೈವದೊಂದಿಗೆ ಬೆಸೆದುಕೊಂಡ ಜಾತ್ರೆ, ಹಬ್ಬ, ಆಚರಣೆಗಳು ಎಡೆಪಡೆಯುತ್ತವೆ. ಒಡಿಗರು ಈ ಹಿಂದೆ ಹಲವಾರು ದೈವಗಳನ್ನು ಗಾಢವಾಗಿ ನಂಬಿದ್ದರು. ಕಾಡಿನಲ್ಲಿ ವಾಸ ಮಾಡುತ್ತಿದ್ದ ಇವರು ಅರಣ್ಯದ ನಿಸರ್ಗದತ್ತ ಕೆಲವು ವಿಸ್ಮಯಗಳಿಗೆ ಭಯಗೊಂಡು ಹಲವಾರು ದೈವಗಳನ್ನು ಪೂಜಿಸಿದರು. ಭಯದ ನೆಲೆಯಲ್ಲಿ ಭಕ್ತಿಯನ್ನು ರೂಢಿಸಿಕೊಂಡ ಈ ಸಮುದಾಯವು ಕೆಲವಾರು ದೇವರುಗಳಿಗೆ ಜಾತ್ರೆಯನ್ನು, ಬಲಿಯನ್ನು ಮಾಡುತ್ತಿದ್ದರು. ಆದರೆ ಇಂದು ನಗರದ ಅಥವಾ ನಾಗರಿಕತೆಯ ಪ್ರಭಾವ ಈ ಹಲವಾರು ಅಂಶಗಳಲ್ಲಿ ಅನೇಕ ಬದಲಾವಣೆಗಳು ಉಂಟಾಗುತ್ತಿವೆ.

೧ ಒಡಿಗರ ಕುಲದೈವ ಹಾಗೂ ಸಮುದಾಯ ದೈವಗಳಾದ ಕರಿಗಾಳಿತಾಯಿ, ಚಟ್ನಳ್ಳಿ ಚಾಮುಂಡಿ, ಗೋಸಳ್ಳಿ ಮಸನಿ, ಚಿಕ್ಕತಾಯಮ್ಮ, ಮಿರಿಕೆಮಾರೆಮ್ಮ, ಮರಳು ಪರೇತಾಯಿ, ದಾಸ್ತಮ್ಮ, ಮಾರಿ, ಹೊಸಕೆರೆ ಚಾಮುಂಡಿ, ಹಿರಪಟ್ಟು ಭೂದಾಡಿ ಮುಂತಾದ ಪ್ರಕೃತಿ ಮತ್ತು ಪ್ರಕೃತಿಯ ಉಪಾಂಗ ದೇವತೆಗಳು ಇವರ ದೈವಗಳಾಗಿದ್ದವು. ಶಕ್ತಿ ದೇವತೆಗಳೆಲ್ಲರೂ ಬಹುತೇಕ ಪ್ರಕೃತಿಯೊಂದಿಗೆ ಬೆಸೆದುಕೊಂಡಿರುವುದನ್ನು ಗುರುತಿಸಬಹುದು. ಈ ದೈವಗಳಲ್ಲಿ ಆರಂಭದಲ್ಲಿ ಕರಿಗಾಳಿತಾಯಿ, ಮಿರಿಕೆಮಾರೆಮ್ಮ, ಚಿಕ್ಕತಾಯಮ್ಮ, ಚಾಮುಂಡಿ, ದೈವಗಳಿಗೆ ಜಾತ್ರೆಯನ್ನು ಮಾಡಲಾಗುತ್ತಿತ್ತು.

ಆದರೆ ಇಂದು ಆಧುನಿಕತೆಯ ಪ್ರಭಾವ ಹಾಗೂ ಇನ್ನಿತರ ಕಾರಣಗಳಿಂದ ಜಾತ್ರೆಗಳು ನಿಂತುಹೋಗಿವೆ. ಈ ಜಾತ್ರೆಗಳೊಂದಿಗೆ ಅಲ್ಲಿ ನಡೆಯುತ್ತಿದ್ದ ಹಲವಾರು ಆಚರಣೆ, ನಂಬಿಕೆ, ಸಂಪ್ರದಾಯಗಳು ಮರೆಯಾಗಿವೆ. ಅಲ್ಲದೇ ಇಂದು ಕೆಲವರು ಗಾಯತ್ರಿ, ಲಕ್ಷ್ಮಿ, ಗೌರಿ ಮುಂತಾದ ದೇವರುಗಳನ್ನು ಪೂಜಿಸುತ್ತಾರೆ.

೨ ಒಡಿಗರ ಕುಲದೈವಗಳಾದ ತಿರುಪತಿ ವೆಂಕಟೇಶ್ವರ, ಮಲ್ಲೇಶಸ್ವಾಮಿ, ಬೊಮ್ಮಣ್ಣ, ಚೆಲುವನಾರಾಯಣ, ಮಂಜುನಾಥರನ್ನು ಪ್ರಾಚೀನ ಕಾಲದಿಂದಲೂ ಪೂಜಿಸುತ್ತಾ ಬಂದಿದ್ದಾರೆ. ಆದರೆ ಇಂದು ಇವರಲ್ಲಿ ಗಣೇಶ, ಅಯ್ಯಪ್ಪ ಮುಂತಾದ ದೇವರುಗಳು ಅಸ್ತಿತ್ವ ಪಡೆದಿವೆ.

೩ ಒಡಿಗರು ಆಚರಿಸುತ್ತಿದ್ದ ಹಬ್ಬಗಳಲ್ಲಿ ದೀಪಾವಳಿ ಅತ್ಯಂತ ಮುಖ್ಯವಾಗಿತ್ತು. ಆದರೆ ಇಂದು ನಾಗರಿಕ ಸಮಾಜ ಆಚರಿಸುವ ಹಲವಾರು ಹಬ್ಬಗಳನ್ನು ಆಚರಿಸುತ್ತಾರೆ. ಅಲ್ಲದೇ ಈ ಹಬ್ಬಗಳಲ್ಲಿ ಮಾಡುವ ಅಡುಗೆ, ಬೇಟೆ, ಆಚರಣೆ, ನಂಬಿಕೆಗಳಲ್ಲಿಯೂ ಹಲವಾರು ಬದಲಾವಣೆಗಳು ಕಂಡುಬರುತ್ತಿವೆ. ಓಣಂ, ಶಿವರಾತ್ರಿ, ಸೂರ್ಯಮಾನ

ಯುಗಾದಿಗಳಂತಹ ಹಬ್ಬಗಳು ಆಯಾ ಭೌಗೋಳಿಕ ಪರಿಸರದ ಪ್ರೇರಣೆಯಿಂದ ಇವರ ಮೇಲೂ ಪ್ರಭಾವ ಬೀರಿರುವುದು ಕಂಡುಬರುತ್ತದೆ.

೪ ಒಡಿಗರಿಗೆ ಮುಖ್ಯ ಧಾರ್ಮಿಕ ಕ್ಷೇತ್ರ ತಿರುಪತಿ, ಮೇಲುಕೋಟೆ, ಆದಂಡ, ತಿರುನಳ್ಳಿ, ಪುಲುಪಳ್ಳಿಗಳು. ಈ ಕ್ಷೇತ್ರಗಳನ್ನು ಅವರು ತಮ್ಮ ವಿವಾಹ, ಹಬ್ಬ ಮುಂತಾದ ಸಮಯದಲ್ಲಿ ದರ್ಶಿಸುತ್ತಾರೆ. ಇಂದು ಈ ಕ್ಷೇತ್ರಗಳೊಂದಿಗೆ ಹಲವಾರು ಕೇಂದ್ರಗಳಿಗೆ ಹೋಗುತ್ತಿದ್ದಾರೆ.

೫ ಒಡಿಗರು ತಮ್ಮ ಧರ್ಮವನ್ನು ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬರುತ್ತಿದ್ದಾರೆ. ಇಂದು ಈ ಸಂವಿಧಾನ ಬದ್ಧ ನಿಯಮದಿಂದ ಸ್ವಲ್ಪ ಪ್ರಮಾಣದ ಬದಲಾವಣೆ ಹೊಂದಿದ್ದಾರೆ ಎನ್ನಬಹುದು.

೭ : ೨ : ೨ ಸಾಹಿತ್ಯ

ಒಡಿಗರು ಅತ್ಯಂತ ಸೀಮಿತ ಜನಸಂಖ್ಯೆಯಿರುವುದರಿಂದಾಗಿ ಇವರ ಸಂಸ್ಕೃತಿ, ಧಾರ್ಮಿಕ ದೈವಗಳ ಕುರಿತಾದ ವಿಪುಲವಾದ ಸಾಹಿತ್ಯವು ಲಭ್ಯವಿರುವುದಿಲ್ಲ. ಲಿಖಿತ ಸಾಹಿತ್ಯವಂತೂ ದೊರೆಯುವುದೇ ಇಲ್ಲ. ಮೌಖಿಕ ಸಾಹಿತ್ಯವು ಕೊಂಚ ಮಟ್ಟಿಗೆ ಸೃಜನಗೊಂಡಿದೆ. ಒಡಿಗ ಸಮುದಾಯದ ಕುಲದೈವಗಳ ಮೇಲಾಗಲಿ, ಅವರ ವಿಶಿಷ್ಟ ಸಂಸ್ಕೃತಿಯ ಮೇಲಾಗಲಿ, ಮಹಾಕಾವ್ಯ, ಕಾವ್ಯ, ಕಥೆಗಳು ಹುಟ್ಟಿಕೊಂಡಿಲ್ಲ. ಇತ್ತೀಚಿನ ತಲೆಮಾರಿನಲ್ಲಿ ಕೆಲವು ಹಾಡುಗಳು, ಗಾದೆ, ಒಗಟು, ಕೋಲಾಟದ ಪದಗಳು, ರಂಗ ಗೀತೆಗಳು ದೊರೆಯುತ್ತಿವೆ. ಈ ಸಮುದಾಯ ಕುಲದೈವಗಳಾದ ಮಲ್ಲೇಶ್ವರ ಸ್ವಾಮಿಯ ಕುರಿತಾದ ಜೀವನ, ಬಾಲ್ಯ ಮುಂತಾದ ವಿವರವನ್ನು ನೀಡುವ ಮೌಖಿಕ ಹಾಡೊಂದನ್ನು ಕಟ್ಟಿಕೊಂಡಿದ್ದಾರೆ. ಅಲ್ಲದೇ ಕೆಲವು ಬಗೆಯ ಒಗಟು, ಗಾದೆಗಳು ನಾಗರಿಕ ಸಮಾಜದೊಂದಿಗೆ ನಂಟನ್ನು ಹೊಂದಿವೆ. ಇನ್ನು ಕೆಲವು ಇವರ ಸಂಸ್ಕೃತಿಯ ಭಾಗವಾಗಿ ಮೂಡಿಬಂದಿವೆ. ಅಲ್ಲದೇ ಮದುವೆಯ ಸಂಬಂಧಿ, ಸೋಬಾನ ಪದಗಳು, ಮೈನೆರೆಯುವ ಸಂದರ್ಭದ ಕೆಲವು ಹಾಡುಗಳು, ಸಾಮಾಜಿಕ ಜೀವನದ ಸಾಂಸಾರಿಕ ಪದ್ಯಗಳು ಮೌಖಿಕವಾಗಿ ಹಾಡುತ್ತಾರೆ. ಇದರ ಹೊರತಾಗಿ ಇವರು ವಿಶೇಷವಾದಂತಹ ಸಾಹಿತ್ಯವನ್ನು ಕಟ್ಟಿಕೊಂಡಿಲ್ಲವೆಂಬುದನ್ನು ಕ್ಷೇತ್ರಕಾರ್ಯದ ವಿಸ್ತಾರವಾದ ಅಧ್ಯಯನದಿಂದ ತಿಳಿಯಲಾಗಿದೆ. ಇತ್ತೀಚೆಗೆ ರಂಗಗೀತೆಗಳು, ಹೊಸ ಹೊಸ ಜಾನಪದ ಶೈಲಿಯ ಹಾಡುಗಳನ್ನು ರೂಢಿಸಿಕೊಂಡಿದ್ದಾರೆ. ದೂರದರ್ಶನ, ಆಕಾಶವಾಣಿ ಮುಂತಾದ ಸಮೂಹ ಮಾಧ್ಯಮಗಳ ಪ್ರಭಾವದಿಂದ ಹಲವಾರು ವೈವಿಧ್ಯಮಯ ಹಾಡುಗಳಿಗೆ ಪ್ರಭಾವಿತರಾಗಿದ್ದಾರೆ. ಮಾಸಾಲು, ಬರಗೂರು, ತಾವಟೆವಂಶದ ಕುರಿತಾದ ಕೆಲವು ಕಥೆಗಳು ಅಲ್ಲದೇ ದೈವದ ಕುರಿತಾದ ಕೆಲವು ಕಥೆಗಳು ಒಡಿಗರಲ್ಲಿವೆ. ಇತ್ತೀಚೆಗೆ ಹಲವಾರು ಹೊಸ ಕಥೆಗಳು ಹುಟ್ಟಿಕೊಂಡಿವೆ.

೭ : ೨ : ೩ ಕಲೆ

ಒಡಿಗರ ಕಲೆಯೆಂಬುದರಲ್ಲಿ ಮುಖ್ಯವಾಗಿ ಇವರಲ್ಲಿರುವ ಆಟಗಳು, ಕ್ರೀಡೆಗಳು, ರಂಗಪರಂಪರೆ, ಹಾಡುಗಾರರು, ಸಂಗೀತ, ಅಚ್ಚೆಕಲೆ, ಗೋಡೆ ಚಿತ್ರಗಳು, ರಂಗೋಲಿ ಮುಂತಾದುವು ಸೇರ್ಪಡೆಯಾಗುತ್ತವೆ. ಒಡಿಗರಲ್ಲಿ ಕುಂಟಾಟ,

ಕಬಡ್ಡಿ, ಗುಡುಗಿನ ಆಟ, ಆನೆಗಟ್ಟ, ಅಳಿಗುಳಿಮನೆಯಾಟ, ಕುಂಟಾಬಿಲ್ಲೆ, ಗೋಲಿ, ಚೆಂಡಾಟ ಮುಂತಾದುವನ್ನು ಆಡುತ್ತಾರೆ. ಇದರೊಂದಿಗೆ ಪ್ರಸಕ್ತ ತಲೆಮಾರು ಕ್ರಿಕೆಟ್, ಫುಟ್ಬಾಲ್ ಮುಂತಾದುವನ್ನು ರೂಢಿಸಿಕೊಂಡಿದ್ದಾರೆ.

ಈಜುವುದು, ಓಡುವುದು, ಬೇಟೆ ಮುಂತಾದ ಕ್ರೀಡೆಗಳು ಇವರಲ್ಲಿವೆ. ಅಲ್ಲದೇ ರಾಮಾಯಣ, ಮಹಾಭಾರತದ ಪ್ರಸಂಗಗಳೊಂದಿಗೆ ಇಂದು ನಾಟಕಗಳನ್ನು ಆಡುತ್ತಾರೆ.

ಕಾಳಮ್ಮ, ಮಲ್ಲೇಗೌಡ, ದೇವಮ್ಮ, ದೇವೇಶಗೌಡರಂತಹ ಹಾಡುಗಾರರು ಈ ಸಮುದಾಯದಲ್ಲಿದ್ದಾರೆ. ಇವರು ಮಹಾಕಾವ್ಯಗಳನ್ನೇನು ಹಾಡುವುದಿಲ್ಲವಾದರೂ ತಮ್ಮ ಸಮುದಾಯ ರೂಪಿಸಿದ ಈಚಿನ ಹಾಡುಗಳನ್ನು ಕಲಿತುಕೊಂಡಿದ್ದಾರೆ.

ಬುಡಕಟ್ಟು ಕಲೆಯ ವೈಶಿಷ್ಟ್ಯಗಳಾದ ಅಚ್ಚೆ ಕಲೆ, ಗೋಡೆ ಮೇಲೆ ಬಿಡಿಸುವ ಚಿತ್ರ ಚಿತ್ತಾರಗಳು ಒಡಿಗರಲ್ಲಿಯೂ ಈ ಹಿಂದೆ ಇದ್ದವು. ಇಂದು ಇವು ಸಂಪೂರ್ಣ ಇಲ್ಲದಾಗಿವೆಯೆಂಬುದನ್ನು ಗುರುತಿಸಬಹುದು. ಕೆಲವೊಬ್ಬರು ರಂಗೋಲಿಯಂತಹ ಚಿತ್ರಕಲೆಯನ್ನು ಹಾಕುತ್ತಾರೆ.

ಹೀಗೆ ಒಡಿಗ ಸಮುದಾಯವು ತಮ್ಮ ಸಂಸ್ಕೃತಿಯ ಅಂಶಗಳನ್ನು ತನ್ನ ಜನಸಂಖ್ಯೆಯ ವ್ಯಾಪ್ತಿಯಲ್ಲಿಯೇ ಕೆಲವು ವಿಶಿಷ್ಟತೆಗಳೊಂದಿಗೆ ಉಳಿಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಆದರೂ ಸಾಹಿತ್ಯ, ಕಲೆಗಳಂತಹ ಮಾಧ್ಯಮಗಳ ಮೂಲಕ ತಮ್ಮ ಸಂಸ್ಕೃತಿಯನ್ನು ಅಗಾಧವಾಗಿ ಕಟ್ಟಿಕೊಡುವ ಇಲ್ಲವೇ ಇರುವ ಸಾಹಿತ್ಯವನ್ನು ತಮ್ಮ ಸಂಸ್ಕೃತಿಯ ನೆಲೆಯಲ್ಲಿ ಕಟ್ಟಿಕೊಡುವ ಸಾಂಸ್ಕೃತಿಕ ಸವಾಲನ್ನು ಇವರು ಸ್ವೀಕರಿಸಿಲ್ಲ. ಇದಕ್ಕೆ ಅವರ ಜನಸಂಖ್ಯೆಯ ಮಿತಿ ಹಾಗೂ ಕಾಡುವಾಸದ ಅಲ್ಪ ಕಾಲಾವಧಿಯ ಮಿತಿಯೂ ಕಾರಣವಾಗಿರುವ ಸಾಧ್ಯತೆ ಇದೆ.

**೭ : ೩ ರಾಜಕೀಯ**

ಒಡಿಗರು ಈ ಹಿಂದೆ ಯಾವುದೇ ರಾಜಕೀಯ ಅಧಿಕಾರವನ್ನು ಹೊಂದಿರಲಿಲ್ಲ. ಇಂದು ಇವರು ನಾಗರಿಕ ಸಮಾಜದ ನಿಕಟ ಸಂಪರ್ಕದಿಂದಾಗಿ ತಕ್ಕಮಟ್ಟಿನ ರಾಜಕೀಯ ಅವಕಾಶಗಳನ್ನು ಪಡೆದಿದ್ದಾರೆ. ಅಲ್ಲದೇ ಪುರುಷರೊಂದಿಗೆ ಮಹಿಳೆಯರೂ ರಾಜಕೀಯ ರಂಗಕ್ಕೆ ಪ್ರವೇಶಿಸಿರುವುದು ಕಂಡುಬರುತ್ತದೆ. ಈವರೆಗೆ ಒಡಿಗರ ಒಟ್ಟು ೪೪೩೨ ಜನಸಂಖ್ಯೆಯಲ್ಲಿ ರಾಜಕೀಯದ ಅಧಿಕಾರವನ್ನು ಪಡೆದವರು ಕೇವಲ ಐದು ಮಂದಿ ಇದ್ದಾರೆ. ಅದರ ವಿವರ ಹೀಗಿದೆ.

| ಕ್ರಸಂ. | ಹೆಸರು | ರಾಜಕೀಯ ಹುದ್ದೆ | ಊರು | ಜಿಲ್ಲೆ |
|---|---|---|---|---|
| ೧ | ನಂಜೇಗೌಡ | ಗ್ರಾಮಪಂಚಾಯತಿ ಅಧ್ಯಕ್ಷ (ಮಾಜಿ) | ಮಚ್ಚೂರು | ಮೈಸೂರು ಜಿಲ್ಲೆ |
| ೨ | ತಿಮ್ಮೇಗೌಡ | ಗ್ರಾಮಪಂಚಾಯತಿ ಅಧ್ಯಕ್ಷ (ಹಾಲಿ) | ಮಚ್ಚೂರು | ಮೈಸೂರು ಜಿಲ್ಲೆ |
| ೩ | ವೆಂಕಟೇಗೌಡ | ಗ್ರಾಮಪಂಚಾಯತಿ ಸದಸ್ಯ | ದೊಡ್ಡ ಬೈರನಕುಪ್ಪೆ | ಮೈಸೂರು ಜಿಲ್ಲೆ |
| ೪ | ದೇವಮ್ಮ | ಗ್ರಾ.ಪಂ. ಸದಸ್ಯೆ (ಮಾಜಿ) | ಕಡೇಗದ್ದೆ | ಮೈಸೂರು ಜಿಲ್ಲೆ |
| ೫ | ನಂಜಮ್ಮ | ಗ್ರಾ.ಪಂ. ಸದಸ್ಯೆ (ಹಾಲಿ) | ವಡಕನ ಮೊಳ | ಮೈಸೂರು ಜಿಲ್ಲೆ |
| ೬ | ನಂಜೇಗೌಡ | ಗ್ರಾ.ಪಂ. ಸದಸ್ಯ (ಹಾಲಿ) | ಕಬ್ಬಿನಗೆರೆ | ವೈನಾಡು ಜಿಲ್ಲೆ |

ಮೇಲೆ ಹೆಸರಿಸಿದ ಪಟ್ಟಿಯಲ್ಲಿನ ರಾಜಕೀಯ ಅಧಿಕಾರಗಳು ೧೯೯೬ರ ಈಚಿನ ಕಾಲಾವಧಿಯಲ್ಲಿ ದೊರೆತಂತಹ

ಪ್ರಾತಿನಿಧ್ಯವಾಗಿದೆ. ಅಂದರೆ ಈ ಸಮುದಾಯವು ಈಚೆಗೆ ರಾಜಕೀಯ ರಂಗಕ್ಕೆ ಪ್ರಾಥಮಿಕ ಹೆಜ್ಜೆಯನ್ನು ಹಾಕುತ್ತಿದೆಯೆಂಬುದನ್ನು ಗುರುತಿಸಬಹುದು. ಆ ಮೂಲಕ ತಮ್ಮ ಸಮುದಾಯದ ರಾಜಕೀಯ ಪ್ರಾಬಲ್ಯವನ್ನು ಹೆಂಗಸರಿಗೂ ನೀಡಿರುವುದು ತಿಳಿಯುತ್ತದೆ. ಹೀಗೆ ಈ ಸಮುದಾಯ ಆಧುನಿಕವಾಗಿ ಕೆಲವು ಬದಲಾವಣೆಗೆ ಒಳಗಾಗಿದೆ. ೧೯೯೬ರ ಹಿಂದೆ ಈ ಸಮುದಾಯಕ್ಕೆ ಯಾವುದೇ ಬಗೆಯ ರಾಜಕೀಯ ಪ್ರಾತಿನಿಧ್ಯವಿರಲಿಲ್ಲವೆಂಬುದನ್ನು ಗಮನಿಸಿದರೆ, ಒಡಿಗರು ಈಚೆಗೆ ತಮ್ಮ ಮೂಲ ನೆಲೆಯಿಂದ ಹೇಗೆ ಸ್ಥಿತ್ಯಂತರವಾಗುತ್ತಿದ್ದಾರೆಂಬುದನ್ನು ತಿಳಿಯಬಹುದು.

**೭ : ೪ ಆರ್ಥಿಕ**

ಒಡಿಗರು ಆರ್ಥಿಕವಾಗಿ ದುರ್ಬಲರಾಗಿದ್ದಾರೆ. ಇವರ ಮುಖ್ಯ ವೃತ್ತಿ ಕೂಲಿ ಮತ್ತು ಕೃಷಿ. ಈ ಸಮುದಾಯವು ಒಂದರಿಂದ-ಮೂರು ಎಕರೆವರೆಗೆ ಜಮೀನನ್ನು ಹೊಂದಿದೆ. ಕೆಲವರು ಜಮೀನುರಹಿತರಿದ್ದಾರೆ. ಈ ಭೂಮಿಯಲ್ಲಿ ಹೆಚ್ಚಾಗಿ ಅರಣ್ಯ ಒತ್ತುವರಿಯಾಗಿದ್ದು, ಪಟ್ಟವಿಲ್ಲದ ಜಮೀನುಗಳನ್ನು ಕೆಲವರು ಹೊಂದಿದ್ದಾರೆ. ಅಲ್ಲದೇ ಕೇರಳದ ಗಡಿಭಾಗದಲ್ಲಿ ಕೆಲವರು ತೋಟಗಳಲ್ಲಿ, ಕಾರ್ಖಾನೆಗಳಲ್ಲಿ ಕಾರ್ಮಿಕರಾಗಿ ದುಡಿಯುತ್ತಾರೆ. ಇವರ ಪಾರಂಪರಿಕ ವೃತ್ತಿಯೇ ಕೃಷಿಯಾಗಿದ್ದು ಇದರಿಂದ ಉತ್ಪಾದನೆಯಾದ ವಸ್ತುಗಳಿಂದ ಜೀವನ ನಡೆಸುವುದು ದುರ್ಲಬ ಶೇಕಡಾ ೩೦% ಮಂದಿ ಒಂದರಿಂದ ಮೂರು ಎಕರೆ ಭೂಮಿಯನ್ನು ಹೊಂದಿದ್ದಾರೆ. ಇದು ಅರಣ್ಯದ ಭೂಮಿಯಾಗಿ ಒತ್ತುವರಿಗೊಂಡಿದೆ. ಮಳೆಯಾಧಾರಿತ ಕೃಷಿಯಾಗಿರುವುದರಿಂದ ಕೇವಲ ಒಂದು ಬೆಳೆಯನ್ನು ಬೆಳೆಯುತ್ತಾರೆ. ಶೇಕಡಾ ೮೦% ಮಂದಿ ಕೂಲಿ ಕಾರ್ಮಿಕರಾಗಿದ್ದು, ಕೂಲಿಗಾಗಿ ನೆರೆಯ ರಾಜ್ಯಗಳಿಗೆ ಹೋಗುತ್ತಾರೆ. ಕೆಲವರು (ಸುಮಾರು ೦೧%) ತಮ್ಮ ಭೂಮಿಯಲ್ಲಿ ಆಹಾರಧಾನ್ಯಗಳ ಜೊತೆಗೆ ವಾಣಿಜ್ಯ ಬೆಳೆಗಳಾದ ಶುಂಠಿ, ಮೆಣಸುಗಳನ್ನು ಬೆಳೆಯುತ್ತಾರೆ. ಇದರಿಂದ ಬರುವ ಆದಾಯವು ಅತ್ಯಲ್ಪವಾಗಿದೆ. ಅಲ್ಲದೇ ಇವರು ಬೆಳೆಯುವ ಬಾಳೆ ಮತ್ತು ಗೆಣಸಿನ ಉತ್ಪಾದನೆಗೆ ತಕ್ಕಷ್ಟು ಆದಾಯ ನೀಡುತ್ತದೆ. ಮಿಕ್ಕಂತೆ ಇವರಿಗೆ ಹೆಚ್ಚು ಆದಾಯವಿರುವ ಯಾವುದೇ ಮೂಲಗಳಿರುವುದಿಲ್ಲ. ಇಂದಿಗೂ ಇವರು ಆರ್ಥಿಕವಾಗಿ ಅಷ್ಟಾಗಿ ಸಬಲರಾಗಿಲ್ಲಯೆಂಬುದನ್ನು ಗಮನಿಸಬಹುದು. (ಪಟ್ಟಿ-೧, ಪಟ್ಟಿ-೨)

**೭ : ೫ ಶೈಕ್ಷಣಿಕ (ಶಿಕ್ಷಣ)**

ಪ್ರಾಥಮಿಕ ಶಾಲಾ ಶಿಕ್ಷಣವನ್ನು ಮುಗಿಸಿ ಮನೆಯಲ್ಲಿರುವವರ ಸಂಖ್ಯೆ ಕಂಡುಬರುತ್ತಿದೆ. ಪ್ರೌಢಶಾಲೆಯನ್ನು ಓದುವವರು ಕಡಿಮೆ. ಈ ಸಮುದಾಯದಲ್ಲಿ ಕೇವಲ ಮೂವರು ಮಾತ್ರ ಪದವೀಧರರಾಗಿದ್ದಾರೆ. ಹಾಗೂ ಒಬ್ಬನು ಎಂ.ಎ ಪದವಿಯನ್ನು ಮಾಡುತ್ತಿದ್ದಾನೆ. ಅಲ್ಲದೇ ಒಬ್ಬ ಪೊಲೀಸ್ ಪೇದೆ, ಮತ್ತೊಬ್ಬ ಶಾಲಾಮಾಸ್ತರು ಆಗಿ ಕಾರ್ಯಮಾಡುತ್ತಿದ್ದಾರೆ. ಇಂದಿಗೂ ಶಾಲೆಗೆ ಹೋಗುವ ಮಕ್ಕಳ ಸಂಖ್ಯೆ ಕಡಿಮೆ. ಆದರೂ ಒಡಿಗರು ಈಚೆಗೆ ಶಾಲೆಗೆ ಕಳಿಸುವ ಆಸಕ್ತಿ ಹೊಂದಿದ್ದಾರೆ. ಆ ಮೂಲಕ ಆಧುನಿಕ ಸಮಾಜಕ್ಕೆ ಈ ಸಮುದಾಯ ನಿಧಾನಗತಿಯಲ್ಲಿ ಅಕ್ಷರಸ್ಥರಾಗುವ ಸಾಹಸವನ್ನು ಮಾಡುತ್ತಿದ್ದಾರೆ. (ಪಟ್ಟಿ - ೩)

**ಪಟ್ಟಿ-೧**

**ಒಡಿಗರ ಆಸ್ತಿ ಒಡೆತನದ ವಿವರ**

| ಕ್ರ.ಸಂ. | ತಾಲ್ಲೂಕುಗಳು | ಜಮೀನುರಹಿತರ ಕುಟುಂಬಗಳು | ೧ ರಿಂದ ೩ ಎಕರೆ ಜಮೀನುವುಳ್ಳವರು | ೩ ರಿಂದ ೬ ಎಕರೆ ಜಮೀನುವುಳ್ಳವರು | ೬ ಎಕರೆಗಿಂತ ಹೆಚ್ಚು ಜಮೀನುವುಳ್ಳವರು | ಒಟ್ಟು ಕುಟುಂಬಗಳು |
|---|---|---|---|---|---|---|
| ೧ | ಹೆಗ್ಗಡದೇವನ ಕೋಟೆ | ೩೨೭ | ೨೫೦ | ೩೩ | ೭ | ೬೧೭ |
| ೨ | ಮಾನಾಂದವಾಡಿ | ೩೧ | ೨೦ | ೩ | ೩ | ೫೬ |
| ೩ | ಸುಲ್ತಾನ್ ಬತ್ತೇರಿ | ೧೧ | ೧೮ | ೭ | ೩ | ೪೦ |
| | ಮೂರು ತಾಲ್ಲೂಕಿನ ಒಟ್ಟು ಕುಟುಂಬಗಳು | ೩೬೯ | ೨೮೮ | ೪೩ | ೧೩ | ೭೧೩ |

ಒಡಿಗ ಸಮುದಾಯದಲ್ಲಿ ೩೬೯ ಕುಟುಂಬಗಳು ಜಮೀನು ರಹಿತರಾಗಿದ್ದು ಕೂಲಿ ಮಾಡಿಕೊಂಡು ಜೀವನ ನಡೆಸುತ್ತಿದ್ದಾರೆ. ಸಮುದಾಯದಲ್ಲಿ ೨೮೮ ಕುಟುಂಬಗಳು ಒಂದರಿಂದ ಮೂರು ಎಕರೆ ಜಮೀನು ಹೊಂದಿದ್ದಾರೆ. ಅಂತೆಯೇ ೪೩ ಕುಟುಂಬಗಳು ಮೂರರಿಂದ ಆರು ಎಕರೆ ಜಮೀನುವುಳ್ಳವರಾಗಿದ್ದಾರೆ. ಕೇವಲ ೧೩ ಕುಟುಂಬಗಳು ಮಾತ್ರ ಆರರಿಂದ ಹತ್ತು ಎಕರೆ ಜಮೀನು ಹೊಂದಿದ್ದಾರೆ.

**ಪಟ್ಟಿ-೨**

**ಒಡಿಗರ ಆರ್ಥಿಕ ಸ್ಥಿತಿಗತಿ**

| ಕ್ರ.ಸಂ. | ತಾಲ್ಲೂಕುಗಳು | ೫೦೦೦ಕ್ಕಿಂತ ಕಡಿಮೆ ವರಮಾನವುಳ್ಳವರು | ೫೦೦೦ ದಿಂದ ೧೦೦೦೦ವರೆಗೆ ವರಮಾನವುಳ್ಳವರು | ೧೦೦೦೦ ದಿಂದ ೨೦೦೦೦ವರೆಗೆ ವರಮಾನವುಳ್ಳವರು | ಒಟ್ಟು ಕುಟುಂಬಗಳು |
|---|---|---|---|---|---|
| ೧ | ಹೆಗ್ಗಡದೇವನ ಕೋಟೆ | ೫೮೨ | ೩೦ | ೫ | ೬೧೭ |
| ೨ | ಮಾನಾಂದವಾಡಿ | ೫೧ | ೩ | ೨ | ೫೬ |
| ೩ | ಸುಲ್ತಾನ್ ಬತ್ತೇರಿ | ೩೨ | ೫ | ೩ | ೪೦ |
| | ಮೂರು ತಾಲ್ಲೂಕಿನ ಒಟ್ಟು ಕುಟುಂಬಗಳು | ೬೬೫ | ೩೮ | ೧೦ | ೭೧೩ |

ಒಡಿಗರ ಆರ್ಥಿಕ ಸ್ಥಿತಿಗತಿಯು ತುಂಬಾ ಶೋಚನೀಯ ಸ್ಥಿತಿಯಿಂದ ಕೂಡಿದೆ. ೬೬೫ ಕುಟುಂಬಗಳು ಐದು ಸಾವಿರಕ್ಕಿಂತ ಕಡಿಮೆ ವಾರ್ಷಿಕ ವರಮಾನವುಳ್ಳವರಾಗಿದ್ದಾರೆ. ಅವರ ಜೀವನ ಮಟ್ಟವು ಬಡತನ ರೇಖೆಗಿಂತ ಕೆಳಮಟ್ಟದಲ್ಲಿದೆ. ದಿನಂಪ್ರತಿ ಜೀವನಕ್ಕಾಗಿ ಹೋರಾಟಮಯವಾದ ಬದುಕನ್ನು ನಡೆಸುತ್ತಿದ್ದಾರೆ. ಮೂವತ್ತೆಂಟು ಕುಟುಂಬಗಳು ಸಾದಾರಣವಾದ ಜೀವನ ನಡೆಸುತ್ತಿದ್ದಾರೆ ಹಾಗೂ ಕೇವಲ ಹತ್ತು ಕುಟುಂಬಗಳು ಮಾತ್ರ ಉತ್ತಮ ಮಟ್ಟದ ಜೀವನ ನಡೆಸುತ್ತಿದ್ದಾರೆ.

## ಪಟ್ಟಿ-೩

## ಒಡಿಗರ ಅಕ್ಷರಸ್ಥರ ಮತ್ತು ಅನಕ್ಷರಸ್ಥರ ಪಟ್ಟಿ

| ಕ್ರ.ಸಂ. | ತಾಲ್ಲೂಕುಗಳು | ಅವಿದ್ಯಾವಂತರ ಸಂಖ್ಯೆ | | ಪ್ರಾಥಮಿಕ | | ಮಾಧ್ಯಮಿಕ | | ಪ್ರೌಢಶಾಲಾ | | ಪಿ.ಯು.ಸಿ. | | ಪದವಿ | | ಸ್ನಾತಕೋತ್ತರ ಪದವಿ | |
|---|---|---|---|---|---|---|---|---|---|---|---|---|---|---|---|
| | | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು |
| ೧ | ಹೆಗ್ಗಡದೇವನ ಕೋಟೆ | ೭೪೫ | ೧೦೩೩ | ೪೭೮ | ೩೭೨ | ೨೧೬ | ೬೨ | ೮೮ | ೩೨ | ೭ | - | ೧ | - | ೧ | - |
| ೨ | ಮಾನಾಂದವಾಡಿ | ೫೮ | ೭೦ | ೪೩ | ೩೭ | ೧೯ | ೧೩ | ೯ | ೩ | - | - | ೧ | - | - | - |
| ೩ | ಸುಲ್ತಾನ್ ಬತ್ತೇರಿ | ೩೩ | ೫೬ | ೨೫ | ೩೨ | ೩೭ | ೧೫ | ೧೯ | ೮ | - | - | ೧ | - | - | - |
| | ಒಟ್ಟು | ೮೩೬ | ೧೧೫೯ | ೫೪೬ | ೪೫೧ | ೨೭೨ | ೧೧೦ | ೧೧೬ | ೪೩ | ೭ | - | ೩ | - | - | - |

ಒಡಿಗರು ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದವರಾಗಿದ್ದಾರೆ. ಈ ಸಮುದಾಯದ ೪೪೩೨ ರಲ್ಲಿ ೯೭೫ ಮಂದಿ ಇತ್ತೀಚೆಗೆ ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಮಹಿಳೆಯರಲ್ಲಿ ಹೆಚ್ಚು ಸಂಖ್ಯೆಯ ಅನಕ್ಷರಸ್ಥರಿದ್ದು ಇಂದು ಹೆಣ್ಣು ಮಕ್ಕಳನ್ನು ಶಾಲೆಗೆ ಕಳುಹಿಸುತ್ತಿದ್ದಾರೆ.

## ೭ : ೬ ಸಾಮಾಜಿಕ

ಒಡಿಗ ಸಮುದಾಯದವರು ಇಂದು ತಮ್ಮ ಮೂಲ ಜೀವನಕ್ರಮದ ಮಾದರಿಯಿಂದ ಕೊಂಚ ನಾಗರಿಕ ಜೀವನದೆಡೆಗೆ ಬಂದಿದ್ದಾರೆ. ಅಂದರೆ ಆಧುನಿಕ ಸಾಮಾಜಿಕ ಜೀವನಶೈಲಿಯು ಇವರ ಮೇಲೆ ಪ್ರಭಾವ ಬೀರಿದೆ. ಬಹುತೇಕ ಮಂದಿ ಇಂದಿನ ಪರಿಸರಕ್ಕೆ ತಕ್ಕಂತೆಯೇ ಬದುಕುತ್ತಿದ್ದಾರೆ. ವಿಜ್ಞಾನ ಮತ್ತು ತಂತ್ರಜ್ಞಾನಗಳ ಸೌಲಭ್ಯವೂ ಇವರಿಗೆ ತಲಪುತ್ತಿದೆ. ಈ ಸಮುದಾಯವು ನಾಗರಿಕ ಅಥವಾ ಗ್ರಾಮ, ನಗರ ಸಮಾಜದ ಹಲವಾರು ಸಂಗತಿಗಳನ್ನು ಕೆಲವಾರು ಸವಾಲುಗಳನ್ನು ಮುಖಾಮುಖಿಯಾಗಿಸಿಕೊಳ್ಳುವ ಮೂಲಕ ಸಾಮಾಜಿಕ ಪರಿವರ್ತನೆಗೆ ಕಾರಣವಾಗಿದ್ದಾರೆ. ಕೆಲವು ಮುಖ್ಯ ಅಂಶಗಳೊಂದಿಗೆ ಅದನ್ನು ಹೀಗೆ ಗುರುತಿಸಬಹುದು.

೧ ಒಡಿಗರು ಮೂಲತಃ ಕಾಡುವಾಸಿಗಳು, ಇವರು ಬುಡಕಟ್ಟು ವಾಸಿಗಳು. ಆದರೂ ಇವರನ್ನು ಬುಡಕಟ್ಟು ಎಂದು ಗುರುತಿಸಿಲ್ಲ. ತಮ್ಮ ಪರಂಪರೆಯ ಕೆಲವು ಅಂಶಗಳಿಂದ ಜೀವಿಸುತ್ತಿರುವ ಇವರು ಇಂದು ನಾಗರಿಕ ಸಮಾಜದೊಂದಿಗೆ ನಿಕಟ ಸಂಬಂಧವನ್ನು ಪಡೆಯುತ್ತಿದೆ.

೨ ಒಡಿಗರು ತಮ್ಮನ್ನು ತಾವು ಮೇಲ್ವರ್ಗದವರೆಂದು ಭಾವಿಸುತ್ತಾರೆ. ತಮ್ಮ ಕೆಳಗಿನ ಜಾತಿಗಳೆಂದು ಎರವರು. ಕ್ಷೌರಿಕರನ್ನು ಗುರುತಿಸಿ, ಅವರನ್ನು ಅಸ್ಪೃಶ್ಯರೆಂದೇ ಬಗೆಯುತ್ತಾರೆ. ಇವರಿಗೆ ದೇವಾಲಯ, ಮನೆಯ ಪ್ರವೇಶ ಇರುವುದಿಲ್ಲ. ಅಲ್ಲದೇ ಕಾಡು, ಜೇನು ಕುರುಬರನ್ನು, ತಮ್ಮ ಮನೆಗಳಿಗೆ ಬಿಟ್ಟುಕೊಳ್ಳಲಾರರು. ಇಂದು ಈ ಪದ್ಧತಿಯಲ್ಲಿ ಕೊಂಚ ಬದಲಾವಣೆಯಾಗಿದೆ.

೩ ಒಡಿಗರು ಮದುವೆಯನ್ನು ತಮ್ಮ ಜಾತಿಯ ವಿಭಿನ್ನ ಪಂಗಡಗಳಲ್ಲಿಯೇ ಮಾಡಿಕೊಳ್ಳಬೇಕು. ಅಲ್ಲದೇ ಅನೈತಿಕ ಸಂಬಂಧ ಹೊಂದಿದವರಿಗೆ ಶಿಕ್ಷೆಯಿರುತ್ತದೆಂಬ ನಿಯಮ ಬದ್ಧವಾಗಿತ್ತು. ಆದರೆ ಇಂದು ಅಂತರ್ಜಾತಿಯ ವಿವಾಹವೂ ಇವರಲ್ಲಿ ಆಗಿದೆಯೆಂಬುದನ್ನು (ಒಡಿಗನ ಜೊತೆ ಒಕ್ಕಲಿಗ ಹೆಂಗಸಿನ ಒಂದು ಮದುವೆಯಾಗಿದೆ). ಗಮನಿಸಿದರೆ ಇವರ ಸಾಮಾಜಿಕ ಸ್ಥಿತ್ಯಂತರಗಳನ್ನು ತಿಳಿಯಬಹುದು. ಅಲ್ಲದೇ ಅನೈತಿಕ ಸಂಬಂಧದಂತಹ ಕಾರ್ಯಗಳು ಇಂದು ಯುವಜನತೆಯಲ್ಲಿ ಕಂಡುಬರುತ್ತದೆ.

೪ ಒಡಿಗರು ತಮಗೆ ಬರುವಂತಹ ರೋಗ-ರುಜಿನಗಳಿಗೆ ಕಾಡಿನಲ್ಲಿ ದೊರೆಯುವ ಗಿಡಮೂಲಿಕೆಗಳಿಂದಲೇ ವೈದ್ಯ ಮಾಡುತ್ತಿದ್ದರು. ಇಂದು ಆಧುನಿಕ, ವೈಜ್ಞಾನಿಕ ವೈದ್ಯ ಪದ್ಧತಿಯನ್ನೇ ಅವಲಂಬಿಸುತ್ತಿದ್ದಾರೆ.

೫ ಇವರು ಕಲೆ, ಸಾಹಿತ್ಯ ಮುಂತಾದ ಅಂಶಗಳಲ್ಲಿ ಪರಂಪರೆಯಿಂದ ಆಧುನಿಕತೆಯ ಕಡೆಗೆ ಸ್ಥಿತ್ಯಂತರವಾಗಿದ್ದಾರೆ.

೬ ದೂರದರ್ಶನ, ಆಕಾಶವಾಣಿ, ಪತ್ರಿಕೆ ಮುಂತಾದ ವಿಜ್ಞಾನ ಮತ್ತು ತಂತ್ರಜ್ಞಾನದ ಸೌಲಭ್ಯ ಇವರಿಗೆ ಒದಗುತ್ತಿದೆ. ಈ ಕಾರಣದಿಂದ ಇವರ ಸಾಮಾಜಿಕ ಜೀವನ ಕೊಂಚ ವೇಗದಲ್ಲಿಯೇ ಆಧುನಿಕತೆಯತ್ತ ಸಾಗುತ್ತಿದೆ.

೭ ಮಹಿಳೆಯರಿಗೂ ಇಂದು ತಕ್ಕಮಟ್ಟಿನ ಶಿಕ್ಷಣ ಕೊಡಬೇಕೆಂಬ ಅರಿವು ಇವರಿಗೆ ಇತ್ತೀಚೆಗೆ ಮೂಡಿದೆ.

೮ ರಾಜಕೀಯ, ಆರ್ಥಿಕ ವಲಯಗಳಲ್ಲಿ ಪ್ರವೇಶಿಸುವ ನಿಟ್ಟಿನಲ್ಲಿ ಪ್ರಯತ್ನಿಸುತ್ತಿದ್ದಾರೆ.

## ೭ : ೭ ಸಮಸ್ಯೆ ಮತ್ತು ಪರಿಹಾರಗಳು ಅಥವಾ ಅಭಿವೃದ್ಧಿ ಕಾರ್ಯಗಳು

ಒಡಿಗ ಸಮುದಾಯದವರು ಆಧುನಿಕತೆಯತ್ತ ಧಾವಿಸಿ, ಹಲವಾರು ವಿಷಯಗಳಲ್ಲಿ ಸಾಮಾಜಿಕ ಸ್ಥಿತ್ಯಂತರಕ್ಕೆ ಒಳಗಾಗುತ್ತಿದ್ದರೂ, ಇವರಿಗೆ ಆರ್ಥಿಕ ದುರ್ಬಲತನ ಇರುವುದರಿಂದ ಹಲವಾರು ತೊಂದರೆಗಳಿಗೆ ಒಳಗಾಗಿದ್ದಾರೆ.

೧ ಬೆಳೆಗಳಿಗೆ ಕಾಡು ಪ್ರಾಣಿಗಳ ಹಾವಳಿಯಿದೆ.

೨ ಅರಣ್ಯದ ಒತ್ತುವರಿ ಭೂಮಿ ಇವರಿಗಿದ್ದು, ಅರಣ್ಯ ಅಧಿಕಾರಿಗಳಿಂದ ಈ ಬಗ್ಗೆ ತಕರಾರನ್ನು ಅನುಭವಿಸುತ್ತಾರೆ.

೩ ದನಕರುಗಳ ಆಹಾರಕ್ಕೆ, ಅರಣ್ಯ ಪ್ರದೇಶಕ್ಕೆ ನಿಷೇಧ ಮಾಡಲಾಗುತ್ತಿದೆ.

೪ ನೀರಾವರಿ ಭೂಮಿಯ ಕೊರತೆಯಿದೆ.

೫ ಶ್ರಮಕ್ಕೆ ತಕ್ಕ ಕೂಲಿಯು ಇವರಿಗೆ ದೊರೆಯುತ್ತಿಲ್ಲ.

೬ ಇವರ ವಾಸಕ್ಕೆ ಹತ್ತಿರವಾದ ಪ್ರೌಢಶಾಲೆಗಳು ಇಲ್ಲವಾದ್ದರಿಂದ, ಪ್ರೌಢಶಿಕ್ಷಣಕ್ಕೆ ಅತ್ಯಂತ ತೊಂದರೆಯಿದೆ.

೭ ವಿದ್ಯಾಭ್ಯಾಸಕ್ಕೆ ಜಾತಿ ಪ್ರಮಾಣಪತ್ರವನ್ನು ನೀಡುತ್ತಿಲ್ಲ. ಇದರಿಂದಾಗಿ ಇವರು ಯಾವ ಪಂಗಡಕ್ಕೆ ಸೇರುತ್ತಾರೆಂಬ ಗೊಂದಲಗಳಲ್ಲಿ ಇದ್ದಾರೆ.

೮ ಸರ್ಕಾರದ ವತಿಯಿಂದ ಬುಡಕಟ್ಟು ಜನರಿಗೆ ದೊರೆಯುವ ವಸತಿ ಸೌಲಭ್ಯ, ಸಾಲದ ಸೌಲಭ್ಯ, ವಿದ್ಯಾರ್ಥಿವೇತನ, ಭೂಮಿ ಹಂಚಿಕೆ ಈ ಬಗೆಯ ಯಾವುದೇ ಅಭಿವೃದ್ಧಿ ಕಾರ್ಯಗಳ ಫಲ ಇವರಿಗೆ ದೊರೆಯುತ್ತಿಲ್ಲ.

೯ ಮಹಿಳಾ ಶಿಕ್ಷಣಕ್ಕೆ ಸರ್ಕಾರದ ವತಿಯಿಂದ ಕೆಲವು ಸೌಲಭ್ಯಗಳ ಕೊರತೆಯಿದೆ. ಅಲ್ಲದೇ ಜಾತಿ ಪ್ರಮಾಣ ಪತ್ರದ ಕೊರತೆಯಿಂದ ಇವರಿಗೆ ಶಿಷ್ಯವೇತನದಂತಹ ಸೌಲಭ್ಯಗಳು ದೊರೆಯುತ್ತಿಲ್ಲ. ಇದರಿಂದ ಶಾಲೆಯಿಂದ ಮಕ್ಕಳು ದೂರವಾಗುತ್ತಿದ್ದಾರೆ.

೧೦ ಒಡಿಗರ ಸಮುದಾಯಕ್ಕೆ ರಾಜಕೀಯ ಪ್ರಾತಿನಿಧ್ಯ ಅತ್ಯಂತ ಕಡಿಮೆಯಿದೆ.

ಈ ಮೇಲಿನ ಎಲ್ಲಾ ಸಮಸ್ಯೆಗಳಿಗೆ ಸರ್ಕಾರವು ಸೂಕ್ತ ಕ್ರಮವನ್ನು ತೆಗೆದುಕೊಂಡು ಅವರ ಆರ್ಥಿಕ, ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಶ್ರೇಯೋಭಿವೃದ್ಧಿಗೆ ಮುಂದಾಗಬೇಕಿದೆ. ಇವರ ಒತ್ತುವರಿ ಭೂಮಿಯ ತಕರಾರು, ಜಾತಿ ಪ್ರಮಾಣ ಪತ್ರದ ತಕರಾರು ಮುಂತಾದ ಗಂಭೀರ ಸಮಸ್ಯೆಗಳಿಗೆ ಸರ್ಕಾರವು ತೀವ್ರವಾಗಿ ಪ್ರತಿಕ್ರಿಯಿಸಬೇಕಾಗಿದೆ. ಇವರನ್ನು ಬುಡಕಟ್ಟು ಜನರೆಂದು ಪರಿಗಣಿಸುವ ಅಗತ್ಯವಿದೆ.

## ೭ : ೮ ಸರ್ಕಾರೇತರ ಸಂಸ್ಥೆಗಳ ಪಾತ್ರ

ಒಡಿಗ ಸಮುದಾಯದವರಿಗೆ ಮೈರಾಡ (MYRADA) (Mysore rural area development agency) ಎಂಬ ಸರ್ಕಾರೇತರ ಸಂಸ್ಥೆಯು ವಸತಿ, ವೃದ್ಧಾಪ್ಯ ವೇತನ, ಸಾಲದ ಸೌಲಭ್ಯ ಒದಗಿಸುವುದು, ಮಕ್ಕಳ ಶಿಕ್ಷಣಕ್ಕೆ ಪ್ರೋತ್ಸಾಹ, ಮಹಿಳೆಯರಿಗೆ ಶಿಕ್ಷಣಕ್ಕೆ ಆಹ್ವಾನ, ಆರೋಗ್ಯದ ಬಗೆಗೆ ಶಿಕ್ಷಣ ನೀಡುವುದು ಇವರಿಗೆ ಆಧುನಿಕ ವೈದ್ಯದ ಔಷಧಿಗಳನ್ನು ಪೂರೈಸುವುದು ಮುಂತಾದ ಸಹಾಯವನ್ನು ಈ ಸಂಸ್ಥೆಯು ಮಾಡುತ್ತಿದೆ.

ಮೈರಾಡವನ್ನು ಹೊರತುಪಡಿಸಿದರೆ ಬೇರಾವ ಸರ್ಕಾರೇತರ ಸಂಸ್ಥೆಯು ಈ ಸಮುದಾಯದ ನೆರವಿಗೆ ಬಾರದಿರುವುದು ಕಂಡುಬರುತ್ತಿದೆ.

ಹೀಗೆ ಒಂದು ಕಾಲದಿಂದ ಪಾರಂಪರಿಕ ನಂಬಿಕೆ, ಆಚರಣೆ, ಸಂಪ್ರದಾಯಗಳಿಂದ ಬಂದಂತಹ ಒಡಿಗರ ಸಂಸ್ಕೃತಿಯು ಇಂದು ಕಾಲಮಾನಕ್ಕೆ ತಕ್ಕಂತೆ ಭೌತಿಕ ಹಾಗೂ ಬೌದ್ಧಿಕವಾಗಿ ಹಲವಾರು ಕಾರಣಗಳಿಂದಾಗಿ ಬದಲಾಗುತ್ತಿದೆ. ಈ ಬದಲಾಗುವ ಪ್ರಕ್ರಿಯೆಯು ಸಾಮಾನ್ಯವೇ ಆದರೂ, ಒಂದು ಸಂಸ್ಕೃತಿಯ ಮೂಲ ರೂಪಿಕೆಗಳು ಯಾವುದೇ ಒತ್ತಡ ಹಾಗೂ ಬಲವಂತದ ಕಾರಣಗಳಿಂದ ನಶಿಸಬಾರದು. ಆಧುನಿಕತೆ ಮತ್ತು ಜಾಗತೀಕರಣದಂತಹ ಪ್ರಬಲ ಕಾರಣಗಳ ಹಿನ್ನೆಲೆಯಲ್ಲಿ ಒಡಿಗ ಸಮಾಜವೂ ತನ್ನನ್ನು ತಾನು ಬದಲಾವಣೆಯ ಕ್ರಿಯೆಯಲ್ಲಿ ಅಪ್ರತ್ಯಕ್ಷವಾಗಿ ಒಡ್ಡಿಕೊಂಡಿದೆ. ಆ ಮೂಲಕ ಸಾಮಾಜಿಕ ಪರಿವರ್ತನೆಗೆ ಮುಂದಾಗುತ್ತಿದೆಯೆನ್ನಬಹುದು.

## ಅಧ್ಯಾಯ - ೮

# ಸಮಾರೋಪ

ಒಡಿಗರು ಬುಡಕಟ್ಟು ಸಮುದಾಯ ಎಂಬಲ್ಲಿ ಅನುಮಾನವಿಲ್ಲ. ಇವರನ್ನು ಕರ್ನಾಟಕದಲ್ಲಿ ಈವರೆಗೂ ಬುಡಕಟ್ಟು ಸಮುದಾಯವೆಂದು ಗುರುತಿಸಲಾಗಿಲ್ಲ. ಆದರೆ 'ಇತರೆ ಬುಡಕಟ್ಟು ಮತ್ತು ಜಾತಿ' ಎಂಬ ಹೆಸರಿನಲ್ಲಿ ಗೆಝೆಟಿಯರ್ ಸಂಪುಟ ಒಂದರಲ್ಲಿ ಉಲ್ಲೇಖಿಸಲಾಗಿದೆ. ಮೂಲತಃ ಒಡಿಗರು ಕಾಡುವಾಸಿಗಳೆಂಬುದಕ್ಕೆ ಅವರ ಸಂಸ್ಕೃತಿಯ ವೈವಿಧ್ಯತೆಯಿಂದಲೇ ಗುರುತಿಸಬಹುದಾಗಿದೆ. ಒಡಿಗರು ಬಹುಶಃ ಚಿತ್ರದುರ್ಗ ಪರಿಸರದಿಂದ ಬಂದು ಮೈಸೂರು ಭಾಗದ ಗಡಿಭಾಗದಲ್ಲಿ ವಾಸಿಸಿರುವುದಕ್ಕೆ ಕೆಲವು ಮೌಖಿಕ ಕಥಾನಕ ಮತ್ತು ಹೇಳಿಕೆಗಳ ಆಧಾರವಿದೆ. ಅಲ್ಲದೇ ಚಿತ್ರದುರ್ಗ ಪರಿಸರದಲ್ಲಿ ವಾಸಿಸುವ ಬೇಡ ಬುಡಕಟ್ಟು ಸಮುದಾಯದ ಒಂದು ಗುಂಪು ಎಂದು ತಾತ್ವಿಕವಾಗಿ ಗುರುತಿಸಲು ಲಿಖಿತ ಆಧಾರಗಳು ಇಲ್ಲ. ಆದರೂ ಇವರ ಸಂಪ್ರದಾಯ, ನಂಬಿಕೆ, ಜಾತ್ರೆ, ಉತ್ಸವ, ಕುಲ, ಬೆಡಗು ಆರಾಧಿಸುವ ದೈವ ಮುಂತಾದ ಸಾಂಸ್ಕೃತಿಕ ಅಂಶಗಳಲ್ಲಿ ಏಕತೆಯನ್ನು ಕಾಣಲು ಸಾಧ್ಯವಿದೆ. ಈ ಕಾರಣದಿಂದ ಒಡಿಗರು ಚಿತ್ರದುರ್ಗ ಪರಿಸರದ ಬೇಡರ ಒಂದು ಗುಂಪು ಎಂದು ಈ ಅಧ್ಯಯನ ಖಚಿತಪಡಿಸುವ ಸಂಗತಿಯಾಗಿದೆ. ಯಾವುದೇ ಸಮುದಾಯದ ಸಂಸ್ಕೃತಿಯ ಗುರುತಿಸುವಿಕೆಗೆ ಲಿಖಿತ ಆಧಾರಗಳೇ ಮುಖ್ಯವೆಂದು ಭಾವಿಸಬೇಕಾಗಿಲ್ಲ. ಅದರಲ್ಲಿಯೂ ಬುಡಕಟ್ಟು ಸಮುದಾಯಗಳಿಗೆ ಲಿಖಿತ ಆಧಾರಗಳ ಹಂಗಿರುವುದಿಲ್ಲ. ಬದಲಾಗಿ ಮೌಖಿಕ ಕಥಾನಕವೇ ಸಂಸ್ಕೃತಿಯ ಪ್ರತಿನಿಧಿಯಾಗಿರುತ್ತದೆ. ಈ ದೃಷ್ಟಿಯಿಂದ ಕರ್ನಾಟಕದ ಹಾಗೂ ಕೇರಳದ ಗಡಿಯಲ್ಲಿರುವ ಒಟ್ಟು ಒಡಿಗ ಸಮುದಾಯದ ಅಭಿಪ್ರಾಯವೂ 'ಬೇಡರೇ' ಎಂಬುದಾಗಿದೆ. ಈ ಕಾರಣದಿಂದ ''ಒಡಿಗರು'' ಎಂದು ಇತರೆ ಸಮುದಾಯಗಳಿಂದ ಗುರುತಿಸಿಕೊಳ್ಳುವ ಇವರು ಬೇಡರ ಒಂದು ಗುಂಪು ಎಂಬುದರಲ್ಲಿ ಅನುಮಾನವಿಲ್ಲ.

ಮೂಲತಃ ಬೇಡರ ಒಂದು ಗುಂಪು ಎಂಬುದಕ್ಕೆ ಹಲವಾರು ಚಾರಿತ್ರಿಕ ಸಂದರ್ಭಗಳನ್ನು ಈ ಸಮುದಾಯ ನೀಡುತ್ತದೆ. ಆಧುನಿಕ ಭಾರತದ ಇತಿಹಾಸದ ಸಮಯದಲ್ಲಿ ಚಿತ್ರದುರ್ಗದ ನಾಯಕರ ಐತಿಹಾಸಿಕ ಮಜಲುಗಳು ಅತ್ಯಂತ ರೋಚಕವಾಗಿದೆ. ಹದಿನೇಳನೆಯ ಶತಮಾನದಲ್ಲಿ ಮದಕರಿನಾಯಕನ ಮೇಲೆ ಆಕ್ರಮಣ ನಡೆಸಿದ ಹೈದರಾಲಿಯು ಆತನನ್ನು ಸೋಲಿಸಿ ಹದಿನಾರು ಸಾವಿರ ಬೇಡ ಸೈನಿಕರನ್ನು ಶ್ರೀರಂಗಪಟ್ಟಣಕ್ಕೆ ಕರೆದೊಯ್ದು, ಅವರಿಗೆ ಒಂದು ಹಳ್ಳಿಯನ್ನು ನಿರ್ಮಿಸುತ್ತಾನೆ. ಅದನ್ನೇ ಬೇಡರಹಳ್ಳಿ ಎಂದು ಕರೆಯಲಾಗುತ್ತಿದೆ. ಬಹುಶಃ ಈ ಸಂದರ್ಭವೇ ಬಹು ಮುಖ್ಯ ಚಾರಿತ್ರಿಕ ತಿರುವನ್ನು ಹೇಳುತ್ತದೆ. ಹೈದರಾಲಿಯ ತರುವಾಯ ಅವನ ಮಗ ಟಿಪ್ಪುಸುಲ್ತಾನನು

ಶ್ರೀರಂಗಪಟ್ಟಣದಿಂದಲೇ ಹಲವಾರು ರಾಜಕೀಯ ಒತ್ತಡಗಳನ್ನು ಚಿತ್ರದುರ್ಗದ ಮೇಲೆ ಹೇರಿದನು. ಈ ರಾಜಕೀಯ ಒತ್ತಡಗಳಿಗೆ ಮಣಿದು ಕೆಲವು ಮುಖ್ಯ ಬೇಡ ಸೈನಿಕರು ತಮ್ಮ ಕುಟುಂಬಗಳೊಂದಿಗೆ ವಿವಿಧ ಭೌಗೋಳಿಕ ವಲಯಕ್ಕೆ ವಲಸೆ ಹೋದರು. ಅಂಥವರಲ್ಲಿ ಇಂದಿನ ಬೀದರ್ ಜಿಲ್ಲೆಯಲ್ಲಿ ''ಬೇಡರವಾಡಿ''ಗಳೆಂಬ ಸ್ಥಳನಾಮಗಳಲ್ಲಿ ವಾಸಿಸುವ ಬೇಡರು ಒಬ್ಬರೆನ್ನಬಹುದು. ಇವರು ಹೆಚ್ಚಾಗಿ ಗುಡ್ಡಗಾಡಿನಲ್ಲಿ ವಾಸಿಸುತ್ತಿದ್ದಾರೆ. ಅಲ್ಲದೇ ಹೈದರಾಲಿಯ ಆಕ್ರಮಣದ ಸಂದರ್ಭದಲ್ಲಿಯೂ ಪ್ರಾಣ ರಕ್ಷಣೆಗೆಂದು ಓಡಿಹೋಗಿ ವಿವಿಧ ಪ್ರದೇಶಗಳಲ್ಲಿ ಆಶ್ರಯ ಪಡೆದಿರುವ ಸಾಧ್ಯತೆ ಇದೆ. ಇಂತಹ ಒಂದು ಗುಂಪು ಒಡಿಗರಾಗಿರಬಹುದು. ಈ ಕಾರಣದಿಂದ ಇವರನ್ನು ಬೇಡರ ಒಂದು ಗುಂಪೆಂದು ಗುರುತಿಸಲು ಸಾಧ್ಯವಿದೆ.

ಚಿತ್ರದುರ್ಗದ ಪರಿಸರದಲ್ಲಿರುವ ಬೇಡರಿಗೂ, ಮೈಸೂರು ಭಾಗದಲ್ಲಿರುವ ಒಡಿಗರಿಗೂ ಸಾಂಸ್ಕೃತಿಕವಾಗಿ ತೀರಾ ಹತ್ತಿರದ ಸಂಬಂಧವನ್ನು ಗುರುತಿಸಲು ಆಗುವುದಿಲ್ಲ. ಕೆಲವೇ ಸಾಂಸ್ಕೃತಿಕ ಸಂಗತಿಗಳು ಈ ಎರಡು ಸಮುದಾಯದಲ್ಲಿ ಏಕತೆಯನ್ನು ಹೇಳುತ್ತವೆ. ಚಿತ್ರದುರ್ಗದ ಪರಿಸರದಿಂದ ಹದಿನೇಳನೆಯ ಶತಮಾನದಲ್ಲಿ ವಲಸೆ ಬಂದ ಒಡಿಗರು ತಮ್ಮ ಮೂಲ ಸಂಸ್ಕೃತಿಯಿಂದ ಭಿನ್ನವಾಗಿ ಉಳಿಯಲು ಸಹಜವಾದ ಕಾರಣಗಳಿವೆ. ಮೂರುನೂರು ವರ್ಷಗಳ ಕಾಲಾವಧಿಯ ಅಂತರದಲ್ಲಿ ಸಮುದಾಯದ ತಲೆಮಾರುಗಳ ಸಂಘರ್ಷದಲ್ಲಿ ಸಾಂಸ್ಕೃತಿಕ ಕೊಡುಪಡೆಯಲ್ಲಿ ವೈವಿಧ್ಯತೆಯಾಗಿರಬಹುದು. ಅಲ್ಲದೇ ಭೌಗೋಳಿಕ ಪರಿಸರವೂ ಇದಕ್ಕೆ ಕಾರಣವಾಗಿದೆ. ಅರಣ್ಯದಲ್ಲಿ ವಾಸ ಮಾಡುತ್ತಿದ್ದುದರಿಂದ ಸ್ಥಳೀಯ ಬುಡಕಟ್ಟು ಸಮುದಾಯಗಳಾದ ಜೇನು ಕುರುಬ, ಕಾಡು ಕುರುಬ, ಎರವರು ಮುಂತಾದ ಬುಡಕಟ್ಟುಗಳ ಪ್ರೇರಣೆ ಕೇರಳದ ಪ್ರಾದೇಶಿಕ ಸಂಸ್ಕೃತಿಯ ಪ್ರಭಾವದ ಕಾರಣಗಳಿಂದ ಒಡಿಗರು ತಮ್ಮ ಮೂಲ ಬೇಡ ಸಂಸ್ಕೃತಿಯ ಕೆಲವು ಆಚರಣೆ, ವಿಧಿ-ವಿಧಾನಗಳಿಂದ ಬದಲಾವಣೆಗೊಂಡಿರಲು ಸಾಧ್ಯವಿದೆ. ಬೇಡ ಸಮುದಾಯ ಹಾಗೂ ಒಡಿಗ ಸಮುದಾಯದ ನಡುವಿನ ಕೆಲವು ಸಾಂಸ್ಕೃತಿಕ ಸಾಮ್ಯಗಳನ್ನು ಹೀಗೆ ಗುರುತಿಸಬಹುದು.

೧ 'ಬೇಡ-ಒಡಿಗ' ಎಂಬ ಎರಡು ಜಾತಿ ಸೂಚಕ ಪದಗಳಲ್ಲಿ ಸಾಮ್ಯತೆಯನ್ನು ಗುರುತಿಸಬಹುದು. ಬಹುಶಃ ಬೇಡರು ಜೀವ ರಕ್ಷಣೆಗೆಂದು ಮೈಸೂರು ಭಾಗಕ್ಕೆ ಬಂದು ತಮ್ಮ ಹೆಸರಿನ ಗೌಪ್ಯತೆಯನ್ನು ಕಾಪಾಡಲು ಬೇಡಿಗ>ಒಡಿಗ ಎಂದು ಕರೆದುಕೊಂಡಿರುವ ಸಾಧ್ಯತೆ ಇದೆ.

೨ ಕ್ರಿ.ಶ. ೧೯೫೯ರ ಶಾಲಾ ದಾಖಲಾತಿಯೊಂದರಲ್ಲಿ ಒಡಿಗರು ತಮ್ಮ ಜಾತಿಯನ್ನು ಬೇಡಿಗ, ಬ್ಯಾಡ, ಬೇಡರು, ಬೇಡಗೌಡ ಎಂದು ಹೇಳಿಕೊಂಡಿದ್ದಾರೆ.

೩ ಕ್ರಿ.ಶ. ೧೯೬೩ರ ಒಂದು ಭೂಮಿ ಸಂಬಂಧಿ ಲಿಖಿತ ಪತ್ರದಲ್ಲಿ ''ಬೇಡರ ಜಾತಿಗೆ ಸೇರಿದ ನಾನು ದೇವೇಶಿ ಗೌಡನಿಗೆ ಬರೆದು ಕೊಟ್ಟ ಪತ್ರ....'' ಎಂದು ಬರೆಯಲಾಗಿದೆ.

೪ ಒಡಿಗರು ''ಬೇಡರು'' ಎಂದು ಹೇಳಿ ಕೊಳ್ಳುತ್ತಾರೆ.

೫ ಕ್ರಿ.ಶ. ೧೯೨೯ರಲ್ಲಿ ಒಡಿಗರು ''ಲಕ್ಷ್ಮೀನಾರಾಯಣ ಬೇಡರ ಸಹಕಾರ ಸಂಘ'' ಎಂಬ ಖಾಸಗಿ ಸಂಸ್ಥೆಯನ್ನು ಸ್ಥಾಪಿಸಿಕೊಂಡಿದ್ದ ಬಗ್ಗೆ ದಾಖಲಾತಿಯಿದೆ.

೬ ಒಡಿಗರ ಬೆಡಗುಗಳಲ್ಲಿ ಒಂದು ಕಾಣಿಕೇರಿ ಮತ್ತೊಂದು ದಾಸರು ಎಂಬ ಎರಡು ಹೆಸರುಗಳು ಬೇಡ ಸಮುದಾಯದಲ್ಲಿಯೂ ಇವೆ.

೭ ಬೇಡರಲ್ಲಿ ''ಏಳುಕೇರಿ'' ಎಂಬ ಒಂದು ಪ್ರಾದೇಶಿಕ ವಾಚಿ ಗುಂಪಿದೆ. (ಹೊಸಪೇಟೆ ಬಳ್ಳಾರಿ ಜಿಲ್ಲೆ) ಅದರಂತೆ ಒಡಿಗರನ್ನು ''ಎಂಟಳ್ಳಿ''ಯವರೆಂದು ಗುರುತಿಸುತ್ತಾರೆ. ಒಡಿಗರಲ್ಲಿಯೂ ಆರಂಭದಲ್ಲಿ ಏಳು ಪಂಗಡಗಳಿದ್ದು ನಂತರ ''ಕಡಬೂರು'' ಮನೆತನ ಬಂದು ಸೇರಿಕೊಂಡಿದೆ.

೮ ಮಾರಮ್ಮ, ಬೊಮ್ಮಣ್ಣ, ಬೇಡರಕಣ್ಣಪ್ಪ, ತಿರುಪತಿ ವೆಂಕಟೇಶ್ವರ ದೈವಗಳನ್ನು ಬೇಡರು ಮತ್ತು ಒಡಿಗರು ಪೂಜಿಸುತ್ತಾರೆ. ಈ ಎರಡು ಸಮುದಾಯಗಳಲ್ಲಿಯೂ ಮಾರೆಮ್ಮ, ಬೊಮ್ಮಣ್ಣ, ಬೊಮ್ಮೇಗೌಡ, ವೆಂಕಟೇಶ, ವೆಂಕಟೇಗೌಡ ಮುಂತಾದ ವ್ಯಕ್ತಿನಾಮಗಳಿವೆ.

೯ ವಿವಾಹದ ಸಂದರ್ಭದಲ್ಲಿ ಬೇಡರು ಈ ಹಿಂದೆ ಬೇಡರಕಣ್ಣಪ್ಪನ ಪೂಜೆ ಮಾಡುತ್ತಿದ್ದರು. ಅದರಂತೆ, ಒಡಿಗರು 'ಅಸೆ ಜಗಳಿಶಾಸ್ತ್ರ'ದ ಮೂಲಕ ಬೇಡರಕಣ್ಣಪ್ಪನ ಪೂಜೆಯನ್ನು ಇಂದಿಗೂ ನಡೆಸುತ್ತಾರೆ.

೧೦ ಹೀಗೆ ಕೆಲವು ಅಂಶಗಳಲ್ಲಿ ಬೇಡ-ಒಡಿಗರಲ್ಲಿ ಸಾಮ್ಯತೆಯಿರುವುದನ್ನು ಗುರುತಿಸಬಹುದು. ಆದರೂ ಪ್ರಾದೇಶಿಕವಾಗಿ ಇವರ ಆಚರಣಾ ವಿಧಿಗಳಲ್ಲಿ ಸಾಕಷ್ಟು ವಿಭಿನ್ನತೆಯಿದೆ. ಮುಖ್ಯವಾಗಿ ಒಡಿಗರು ಅರಣ್ಯದಲ್ಲಿ ವಾಸಿಸುವ ಸಮುದಾಯವಾಗಿರುವುದರಿಂದ ಜೊತೆಗೆ ತಮ್ಮ ಪ್ರಾಣರಕ್ಷಣೆಯ ಗೌಪ್ಯತೆಯ ದೃಷ್ಟಿಯಿಂದ ತಮ್ಮೆಲ್ಲಾ ಬೆಡಗು, ಆಚರಣೆ, ಸಂಪ್ರದಾಯಗಳಲ್ಲಿ ಸಂಪೂರ್ಣ ಬದಲಾವಣೆಯನ್ನು ಕಂಡುಕೊಂಡಿದ್ದಾರೆ

೧೧ ಚಿತ್ರದುರ್ಗ ಪರಿಸರದಿಂದ ವಲಸೆ ಬಂದ ಒಡಿಗರು ಬಹುಶಃ ಯಾವುದೇ ವೈವಾಹಿಕ ಇನ್ನಿತರ ಸಾಂಸ್ಕೃತಿಕ ಸಂಬಂಧಗಳನ್ನು ತದನಂತರ ಚಿತ್ರದುರ್ಗ ಪರಿಸರದೊಂದಿಗೆ ಇರಿಸಿಕೊಂಡಿಲ್ಲವೆನಿಸುತ್ತದೆ. ವಲಸೆ ಹೋದ ಕೆಲವು ಕುಟುಂಬಗಳೇ ಆಯಾ ಊರುಗಳಲ್ಲಿ ನೆಲೆಸಿ, ಆಯಾ ಊರನ್ನೇ ಬೆಡಗು ಮಾಡಿಕೊಂಡು, ತಮ್ಮಲ್ಲಿಯೇ ವೈವಾಹಿಕ ಹಬ್ಬ, ಆಚರಣೆ ಮುಂತಾದ ಸಾಂಸ್ಕೃತಿಕ ಕೊಡುಪಡೆಯನ್ನು ಉಂಟುಮಾಡಿಕೊಂಡಿರಬೇಕು.

೧೨ ಹೀಗೆ ''ಎಂಟಳ್ಳಿ''ಯವರೆಂದು ಗುರುತಿಸಿಕೊಳ್ಳುವ ಒಡಿಗರು ಮೂರು ಶತಮಾನಗಳ ಕಾಲಾವಧಿಯಲ್ಲಿ ತಮ್ಮ ತಲೆಮಾರುಗಳ ಅಂತರದಲ್ಲಿ ಈ ಬಗೆಯ ಬದಲಾವಣೆಗೆ ಕಾರಣವಾಗಿರಬಹುದು. ಯಾವುದೇ ಒಂದು ಜನಸಮುದಾಯ ಇಂತಹ ಅಲ್ಪ ಕಾಲಾವಧಿಯಲ್ಲಿ ತನ್ನ ಮೂಲ ಸಂಸ್ಕೃತಿಯನ್ನು ಮರೆಮಾಚಿಕೊಂಡು ಜೀವಿಸಲಾರದು. ಆದರೂ ರಾಜಕೀಯ ಒತ್ತಡಗಳಿಗೆ ಒಳಗಾಗಿ ಹದಿನೇಳನೆಯ ಶತಮಾನದಲ್ಲಿಯೇ ಇಂತಹ ಸಂದರ್ಭಕ್ಕೆ ಮುಂದಾದ ಆರಂಭಿಕ ಕುಟುಂಬಗಳು ಸಂಸ್ಕೃತಿಯಿಂದ ಭಿನ್ನತೆಯನ್ನು ಕಂಡುಕೊಂಡಿರಬಹುದು.

೧೩. ಒಡಿಗರು ತಾವು ''ಬೇಡರು'' ಎಂದು ಕರೆದುಕೊಳ್ಳುವುದನ್ನು ಇಂದು ಗುರುತಿಸಬಹುದು. ತಮ್ಮ ಮೂಲ ಹೆಸರನ್ನು ಅವರು ಮರು ಹೇಳಿಕೊಳ್ಳಲು ಮುಂದಾಗಿರುತ್ತಾರೆ. ಒಂದು ವೇಳೆ ಅವರು ಬೇಡರಲ್ಲ ಎಂಬುದಾಗಿ ಹೇಳಿದ್ದರೆ, ಇದೊಂದು ಪ್ರತ್ಯೇಕ ಬುಡಕಟ್ಟು ಎಂದು ಗುರುತಿಸುವಷ್ಟು ವಿಭಿನ್ನ ಆಚರಣೆಗಳು ಇವರಲ್ಲಿವೆ.

ಮೇಲಿನ ಮುಖ್ಯ ಅಂಶಗಳಿಂದ ಒಡಿಗರ ಮೂಲ ಮತ್ತು ಅದಕ್ಕಿರುವ ಸಾಮ್ಯ-ವೈಷಮ್ಯದ ವಾದ, ಚರ್ಚೆಗಳು ತಿಳಿಯಬಹುದು. ಈ ಸಮುದಾಯ ವ್ಯಾಪಕವಾದ ಅಧ್ಯಯನಕ್ಕೆ ಈವರೆಗೆ ಒಳಗಾಗದೇ ಇರುವುದರಿಂದ ಸಂಸ್ಕೃತಿಯಲ್ಲಿ ಇವರ ಸ್ಥಾನಮಾನಗಳ ನೆಲೆಯನ್ನು ಗುರುತಿಸಲಾಗಿಲ್ಲ. ಇವರು ಯಾವ ಮೂಲದಿಂದ ಬಂದರು ಎಂಬುದನ್ನು ಈ ಮಹಾಪ್ರಬಂಧದಲ್ಲಿ ಕ್ಷೇತ್ರಕಾರ್ಯ ಮಾಹಿತಿ ಹಾಗೂ ಕೆಲವು ಚಾರಿತ್ರಿಕ ಸಂದರ್ಭಗಳು, ಮೌಖಿಕ ಚರಿತ್ರೆ, ಕಥನಗಳಿಂದಲೂ ಮತ್ತು ಆಧುನಿಕ ಕೆಲವು ದಾಖಲಾತಿ ಪತ್ರಗಳೊಂದಿಗೆ ಸ್ಪಷ್ಟಪಡಿಸಲಾಗಿದೆ. ಸಮುದಾಯದ ಸಾಂಸ್ಕೃತಿಕ ವೈಶಿಷ್ಟ್ಯಗಳು ಅದೆಷ್ಟೋ ವಿಭಿನ್ನವಾಗಿದ್ದರೂ ಸಾಮಾಜಿಕ ಆಯಾಮಗಳಲ್ಲಿ ಆರ್ಥಿಕ, ರಾಜಕೀಯ, ಸಾಂಸ್ಕೃತಿಕವಾಗಿ ಸಮುದಾಯಕ್ಕೊಂದು ನೆಲೆ ಮತ್ತು ಸ್ಥಿರತೆಯ ಅಗತ್ಯವಿದೆ. ಈ ದೃಷ್ಟಿಯಿಂದ 'ಒಡಿಗ' ಜನ ಸಮುದಾಯದ ಕೊಡುಗೆಯೂ ಕರ್ನಾಟಕ ಸಂಸ್ಕೃತಿಗೆ ಮಹತ್ತರವಾಗಿದೆ.

ಒಡಿಗ ಸಮುದಾಯ ಸೀಮಿತ ಭೌಗೋಳಿಕ ವ್ಯಾಪ್ತಿ ಹಾಗೂ ಮಿತ ಜನಸಂಖ್ಯೆಯಲ್ಲಿಯೇ ಒಂದು ವಿಶೇಷತೆಯೆನ್ನ ಬಹುದಾದ ಸಾಂಸ್ಕೃತಿಕ ಜಗತ್ತನ್ನು ನಿರ್ಮಿಸಿಕೊಂಡಿದೆ. ಅರಣ್ಯ, ಅರಣ್ಯಗಳ ಬದಿಯಲ್ಲಿ ವಾಸಿಸುವ ಇವರ ಗ್ರಾಮ ಸಮಾಜ ತನ್ನದೇ ಆದ ಸ್ವರೂಪವನ್ನು ಪಡೆದುಕೊಂಡಿದೆ. ಒಂದು ಕಡೆ ಕರ್ನಾಟಕ ಸಂಸ್ಕೃತಿ ಮತ್ತೊಂದು ಕಡೆ ಕೇರಳದ ಸಂಸ್ಕೃತಿಯ ಗಡಿಯಲ್ಲಿ ವಾಸಿಸುವ ಇವರು ಎರಡು ಭಿನ್ನ ದ್ರಾವಿಡ ಮೂಲ ಸಂಸ್ಕೃತಿಗಳ ಮುಖೇನ ದ್ವಿಭಾಷಿಕರಾಗಿ ಸಾಂಸ್ಕೃತಿಕ ಆಯಾಮಗಳನ್ನು ಗುರುತಿಸಿಕೊಂಡು ಅಲಕ್ಷ್ಯಕ್ಕೊಳಪಟ್ಟಿದ್ದಾರೆ. ಹೆಚ್ಚಾಗಿ ವಿಭಕ್ತ ಕುಟುಂಬ ಪದ್ಧತಿಯನ್ನೇ ಅನುಸರಿಸುವುದರಿಂದ ತಮ್ಮ ರಕ್ತ ಸಂಬಂಧಗಳಲ್ಲಿಯೇ ಹಲವು ನಿಷೇಧಗಳೊಂದಿಗೆ ವೈವಾಹಿಕ ಸಂಬಂಧವನ್ನೂ ಏರ್ಪಡಿಸಿಕೊಂಡಿದ್ದಾರೆ. ವ್ಯವಸ್ಥಿತ ಜೀವನ ಮಾದರಿಗಾಗಿ ನ್ಯಾಯಾಧೀಶನನ್ನು ಆಯ್ಕೆ ಮಾಡಿಕೊಂಡು ಆ ಮೂಲಕ ಬಾಂಧವ್ಯದಿಂದ ಬದುಕುತ್ತಿದ್ದಾರೆ. ಕಾನೂನು ಬಾಹಿರವಾಗಿ ಬದುಕುವ ಸಮುದಾಯದ ಸದಸ್ಯರಿಗೆ ಶಿಕ್ಷೆ ಮತ್ತು ದಂಡವಿರುತ್ತದೆ.

ಅಂತೆಯೇ ಇವರು ವಾಸಿಸುವ ವಸತಿಯ ಆಯ್ಕೆಯು ತನ್ನದೇ ಆದ ವಿಶಿಷ್ಟ ಆಚರಣೆಗಳಿಂದ ಕೂಡಿದೆ. ಆ ಮೂಲಕ ಅವರ ನೆಲೆಸುವಿಕೆಯು ಸುರಕ್ಷಿತವೆಂಬುದಾಗಿ ನಂಬಿದ್ದಾರೆ. ಇವರು ಧರಿಸುವ ಉಡುಗೆ-ತೊಡುಗೆಯೂ ಸಮುದಾಯದ ಸಂಸ್ಕೃತಿಯ ಪ್ರತಿನಿಧಿಯಾಗಿದೆ. ಜೀವನೋಪಾಯಕ್ಕಾಗಿ ಕೃಷಿಯ ಜೊತೆಗೆ ಕೆಲವು ಸಣ್ಣಪುಟ್ಟ ವೃತ್ತಿಗಳನ್ನು ಅವಲಂಬಿಸಿದ್ದಾರೆ. ಪಾರಂಪರಿಕ ಮತ್ತು ಆಧುನಿಕ ಈ ಎರಡರ ನಡುವೆಯೂ ವೃತ್ತಿಯ ನೆಲೆಯನ್ನು ಕಂಡುಕೊಂಡಿದ್ದಾರೆ.

ಒಡಿಗರು ಹಲವಾರು ಸಂಪ್ರದಾಯ, ವಿಧಿ- ನಿಷೇಧಗಳನ್ನು ತಮ್ಮ ದೈನಂದಿನ ಸಾಮಾಜಿಕ ಜೀವನದ ಮುಖ್ಯ ಅಂಗಗಳನ್ನಾಗಿ ಸ್ವೀಕರಿಸಿದ್ದಾರೆ. ಇವರು ಜನನ, ಬಾಲ್ಯ, ನಾಮಕರಣ, ಯೌವನ, ಮದುವೆ, ಸಾವು ಮುಂತಾದ ಕಾರ್ಯಕ್ರಮಗಳಲ್ಲಿ ಸಂಭ್ರಮ-ದುಃಖ ಹೀಗೆ ಆಯಾ ಕಾರ್ಯಕ್ಕೆ ತಕ್ಕಂತೆಯೇ ವ್ಯಕ್ತಪಡಿಸುತ್ತಾರೆ. ಈ ಎಲ್ಲ ಕಾರ್ಯಾಚರಣೆಗಳಲ್ಲಿ ಹಾಡು ಕೆಲವು ವಿಶೇಷಪೂಜೆ, ಆಚರಣೆಯನ್ನು ಮಾಡುತ್ತಾರೆ. ಜೊತೆಗೆ ಈ ಕಾರ್ಯಗಳಲ್ಲಿ ಯಾವುದೇ ಅನಿಷ್ಟ ಉಂಟಾಗಬಾರದೆಂಬ ಕಾರಣಕ್ಕೆ ಕೆಲವು ನಿಷೇಧಗಳನ್ನು ಮಾಡಿಕೊಂಡಿದ್ದಾರೆ. ಈ ಎಲ್ಲ ಸಾಮಾಜಿಕ ಬದುಕಿನೊಂದಿಗೆ ಆತ್ಮಾನು ಸಂಧಾನಕ್ಕೆ, ಆತ್ಮೋದ್ಧಾರಕ್ಕೆ ಆಧ್ಯಾತ್ಮಿಕತೆಯನ್ನು ಹೊಂದಿದ್ದಾರೆ. ತಮ್ಮದೇ ಆದ ಧರ್ಮವನ್ನು ಆಚರಿಸುವುದರೊಂದಿಗೆ ತಾವು ಸೃಷ್ಟಿಸಿಕೊಂಡ ದೇವರುಗಳನ್ನು ಪೂಜಿಸಿ ತೃಪ್ತಿಯಿಂದ ನೆಮ್ಮದಿಯನ್ನು ಹೊಂದುವವರಾಗಿದ್ದಾರೆ. ಆ ಮೂಲಕ ಜಾತ್ರೆ-ಉತ್ಸವಗಳಿಂದ ಸಮುದಾಯದ ಎಲ್ಲರೂ ಒಗ್ಗೂಡಿ ಸಂತೋಷ ಪಡುತ್ತಾರೆ.

ಒಡಿಗರು ತಮ್ಮ ದೈನಂದಿನ ಜೀವನದಲ್ಲಿ ಶ್ರಮ ಮೂಲದಿಂದ ಬೇಸತ್ತ ಮಾನಸಿಕ ಹಾಗೂ ದೈಹಿಕ ಉಲ್ಲಾಸಕ್ಕೆ ಸಾಹಿತ್ಯ-ಕಲೆ-ಕ್ರೀಡೆಗಳನ್ನು ರೂಢಿಸಿಕೊಂಡಿದ್ದಾರೆ. ತಮ್ಮ ಕುಲ, ದೈವ, ನೀತಿಯುತ ಜೀವನಕ್ಕಾಗಿ ಹಾಡು, ಕಥೆ, ಗಾದೆ, ಒಗಟುಗಳನ್ನು ಹೇಳುತ್ತಾರೆ. ದೈಹಿಕ ಚಟುವಟಿಕೆಯ ನೆಮ್ಮದಿಗಾಗಿ ಮಕ್ಕಳು-ಹೆಂಗಸರಾದಿಯಾಗಿ ಹಲವಾರು ಆಟಗಳನ್ನು, ಕಲಾವೈಶಿಷ್ಟ್ಯತೆಯನ್ನು ರೂಢಿಸಿಕೊಂಡಿದ್ದಾರೆ. ಇವೆಲ್ಲವೂ ಒಂದು ಸಮುದಾಯದ ಪಾರಂಪರಿಕ ಮೌಲ್ಯವನ್ನು ಉಳಿಸಿಕೊಂಡು ಬರುವಲ್ಲಿ ನೆರವಾಗಿವೆ. ಈ ಸಮುದಾಯವು ತಮ್ಮ ದೈಹಿಕ ಕುಂದು-ಕೊರತೆಗೆ ವೈದ್ಯ ಪದ್ಧತಿಯನ್ನು ತಮ್ಮದೇ ನೆಲೆಯಲ್ಲಿ ಕಂಡುಕೊಂಡಿದ್ದಾರೆ. ಇದು ಸಾಂಪ್ರದಾಯಿಕ ವೈದ್ಯ ಪದ್ಧತಿಯಾದರೂ ವೈಜ್ಞಾನಿಕ ತಳಹದಿಯನ್ನು ಇಲ್ಲಿ ಸ್ಪಷ್ಟವಾಗಿ ಗುರುತಿಸಬಹುದು.

ಇಂದು ಜಗತ್ತು ಆಧುನಿಕತೆಯತ್ತ ಅತ್ಯಂತ ತೀವ್ರವಾಗಿ ತನ್ನನ್ನು ಒಡ್ಡಿಕೊಳ್ಳುತ್ತಿದೆ. ಜಾಗತೀಕರಣದಂತಹ ಇವತ್ತಿನ ಸಂದರ್ಭ ದೇಸೀ ಸಂಸ್ಕೃತಿಯ, ಪರಂಪರೆಯ ಮೇಲೆಯೂ ಪರೋಕ್ಷ ನೆಲೆಯಲ್ಲಿಯಾದರೂ ತನ್ನ ಪ್ರಭಾವ ಬೀರುತ್ತಿದೆ. ಬುಡಕಟ್ಟು ಸಮುದಾಯಗಳು ಆಧುನಿಕ ವಿದ್ಯಮಾನಗಳಿಗೆ ಇಂದು ನಿಧಾನಗತಿಯಲ್ಲಿಯಾದರೂ ಒಳಗಾಗಿವೆ. ಒಡಿಗರು ಇಂತಹ ಆಧುನಿಕ ಪ್ರಕ್ರಿಯೆಗೆ ಒಳಗಾಗಿದ್ದಾರೆ. ಆ ಮೂಲಕ ಸಾಮಾಜಿಕ ನೆಲೆಯಲ್ಲಿ ಪರಿವರ್ತನೆಯ ಹಾದಿಯಲ್ಲಿದ್ದಾರೆ. ರಾಜಕೀಯ, ಆರ್ಥಿಕ, ಸಾಂಸ್ಕೃತಿಕವಾಗಿಯೂ ಆಧುನಿಕತೆಯ ವಲಯದಲ್ಲಿ ಪ್ರವೇಶಿಸುತ್ತಿದ್ದಾರೆ. ಆ ಮೂಲಕ ಪಾರಂಪರಿಕ ಭೌತಿಕ ಮತ್ತು ಬೌದ್ಧಿಕ ನೆಲೆಯು ಬದಲಾಗುತ್ತಿರುವುದನ್ನು ಕಾಣಬಹುದು. ಇದು ಆಯಾ ಕಾಲದ ಸಂದರ್ಭಕ್ಕೆ ಸಹಜವೇ ಆಗಿದೆ. ಆದರೆ ಸಾಂಸ್ಕೃತಿಕ ಮೌಲ್ಯಗಳಲ್ಲಿ ಆಧುನಿಕತೆಯ ದಾಳಿಯು ಸಂಘರ್ಷವನ್ನುಂಟು ಮಾಡುತ್ತಿದೆ. ಇದರಿಂದ ಸಾಂಸ್ಕೃತಿಕ ಪಳೆಯುಳಿಕೆಗಳಿಗೆ ಧಕ್ಕೆಯಾಗುತ್ತಿರುವುದು ಕಂಡುಬರುತ್ತಿದೆ. ಕಾರಣ ಸಮುದಾಯಗಳನ್ನು ಅಲಕ್ಷ್ಯಕ್ಕೆ ಒಳಪಡಿಸದೇ ಅವರ ಸರ್ವತೋಮುಖ ಪರಂಪರೆಯ ಮೌಲ್ಯಗಳನ್ನು ದಾಖಲಿಸುವ ಅಗತ್ಯವಿದೆ. ಅಂತಹ ಒಂದು ಪ್ರಯತ್ನವೇ ಒಡಿಗರ ಅಧ್ಯಯನವಾಗಿದೆ.

ಒಡಿಗ ಸಮುದಾಯದ ಅಧ್ಯಯನದಿಂದ ಮುಖ್ಯವಾಗಿ ಗುರುತಿಸಬಹುದಾದ ಮುಖ್ಯ ಫಲಿತಗಳನ್ನು ಆಯಾ ಅಧ್ಯಯನಗಳ ಅಡಿಯಲ್ಲಿ ಸಾಂದರ್ಭಿಕವಾಗಿ ಚರ್ಚೆಗೊಳಪಡಿಸಲಾಗಿದೆ. ಅವರ ಸಮಸ್ಯೆ ಮತ್ತು ನೀಡಬಹುದಾದ ಪರಿಹಾರಗಳನ್ನು ಸಾಮಾಜಿಕ ಪರಿವರ್ತನೆಯೆಂಬ ಅಧ್ಯಾಯದಲ್ಲಿ ವಿವರಿಸಲಾಗಿದೆ. ಆದರೂ ಕೆಲವು ಮುಖ್ಯ ಫಲಿತಗಳನ್ನು ಮತ್ತೊಮ್ಮೆ ಇಲ್ಲಿ ಗುರುತಿಸಲಾಗಿದೆ.

೧ ಒಡಿಗರು ಚಿತ್ರದುರ್ಗ ಪರಿಸರದ ಬೇಡರಿಂದ ಪ್ರತ್ಯೇಕವಾದಂತಹ ಒಂದು ಗುಂಪು.

೨ ಬೇಡರ ಸಾಂಸ್ಕೃತಿಕ ಅಂಶಗಳೊಂದಿಗೆ ಒಡಿಗರ ಸಂಸ್ಕೃತಿಯು ಕೆಲವೇ ಅಂಶಗಳಲ್ಲಿ ಸಾಮ್ಯತೆಯನ್ನು ಹೊಂದಿದೆ.

೩ ಒಡಿಗರು ಕರ್ನಾಟಕ, ಕೇರಳ ಎರಡು ರಾಜ್ಯಗಳ ಗಡಿಯಲ್ಲಿರುವುದರಿಂದ ಪರಸ್ಪರ ಎರಡು ಸಂಸ್ಕೃತಿಯ ಅಂಶಗಳಿಂದ ಪ್ರಭಾವಿತಗೊಂಡಿದೆ.

೪ ಒಡಿಗರು ಕನ್ನಡವನ್ನೇ ತಮ್ಮ ಮಾತೃಭಾಷೆಯನ್ನಾಗಿಸಿಕೊಂಡಿದ್ದಾರೆ. ಕೆಲವೇ ಜನರು ಮಲೆಯಾಳಿಯನ್ನು ಮಾತನಾಡುತ್ತಾರೆ. ಒಡಿಗರ ಕನ್ನಡವನ್ನು 'ಒಡಿಗ ಕನ್ನಡ' ಎಂದು ಸಾಮಾಜಿಕ ಪ್ರಬೇಧ ಭಾಷೆಯಾಗಿ ಸ್ವೀಕರಿಸಬಹುದು.

೫ ಒಡಿಗರಲ್ಲಿ ಲಿಖಿತ ಸಾಹಿತ್ಯವು ದೊರೆಯುವುದಿಲ್ಲ. ಈಚೆಗೆ ತಮ್ಮ ಸಂಸ್ಕೃತಿಗೆ ತಕ್ಕಂತೆ ಮೌಖಿಕ ಸಾಹಿತ್ಯವನ್ನು ಸೃಜಿಸಿಕೊಂಡಿದ್ದಾರೆ.

೬ ಒಡಿಗರ ಕಲೆ-ಕ್ರೀಡೆಗಳು ಅಷ್ಟಾಗಿ ಪರಂಪರೆಯನ್ನು ಹೊಂದಿಕೊಂಡಿಲ್ಲ. ಆದರೂ ಕೆಲವು ಎಳೆಗಳು ಪ್ರಾಚೀನತೆಯನ್ನು ಬಿಂಬಿಸುತ್ತವೆ.

೭ ಒಡಿಗರು ಹೆಚ್ಚಾಗಿ ಅನಕ್ಷರಸ್ಥರು. ಈಚೆಗೆ ಅಕ್ಷರ ಕಲಿಯುವ ಆಸಕ್ತಿ ತೋರುತ್ತಿದ್ದಾರೆ.

೮ ಆರ್ಥಿಕವಾಗಿ ಹಿಂದುಳಿದವರಾಗಿದ್ದು, ದೈನಂದಿನ ಜೀವನಕ್ಕೆ ಕೃಷಿ, ಕೂಲಿ ಕೆಲವು ಸಣ್ಣ ವೃತ್ತಿಗಳನ್ನು ಅವಲಂಬಿಸಿದ್ದಾರೆ.

೯ ಒಡಿಗರಿಗೆ ಅರಣ್ಯದ ಒತ್ತುವರಿ ಸ್ವಲ್ಪ ಭೂಮಿಯೇ ಜೀವನಾಧಾರವಾಗಿದೆ.

೧೦ ಒಡಿಗರು ಇತ್ತೀಚೆಗೆ ರಾಜಕೀಯ ವಲಯದಲ್ಲಿ ಪ್ರಾತಿನಿಧ್ಯ ಪಡೆದಿದ್ದಾರೆ. ಇದು ಗ್ರಾಮೀಣ ರಾಜಕೀಯ ರಂಗದಲ್ಲಿ ಮಾತ್ರ. ಮಹಿಳೆಯರು ಈ ವಿದ್ಯಾಮಾನದಲ್ಲಿ ಪ್ರವೇಶ ಪಡೆದುಕೊಂಡಿದ್ದಾರೆ.

೧೧ ಒಡಿಗರಿಗೆ ಯಾವುದೇ ಸಂಘಟನೆಗಳ ಸಹಕಾರ ಇಲ್ಲ. 'ಮೈರಾಡ' ಎಂಬ ಸರ್ಕಾರೇತರ ಸಂಸ್ಥೆಯು ಈಚೆಗೆ ಸಹಕರಿಸುತ್ತಿದೆ.

೧೨ ಒಡಿಗರ ಸರ್ವತೋಮುಖ ಅಭಿವೃದ್ಧಿಗೆ ಸರ್ಕಾರದ ಸೌಲಭ್ಯಗಳು ಕಾರ್ಯೋನ್ಮುಖವಾಗಿಲ್ಲ.

೧೩ ಒಡಿಗರಿಗೆ ತಮ್ಮದೇ ಆದ ಜಾತಿ ಪ್ರಮಾಣ ಪತ್ರ ನೀಡುವಲ್ಲಿ ಸರ್ಕಾರವು ದ್ವಂದ್ವತೆಯನ್ನು ಏರ್ಪಡಿಸುತ್ತಿದೆ.

೧೪ ಬುಡಕಟ್ಟು ಸಮುದಾಯಗಳ ಪಟ್ಟಿಯಲ್ಲಿ ಒಡಿಗರನ್ನು ಗುರುತಿಸುವ ಅಗತ್ಯವಿದೆ.

೧೫ ಆ ಮೂಲಕ ಒಡಿಗರಿಗೆ ಶಾಶ್ವತ ನೆಲೆಯನ್ನು ಕಲ್ಪಿಸಿ, ನಾಗರಿಕ ಸಮಾಜದೊಂದಿಗೆ ಈ ಸಮುದಾಯವೂ ಮುಖಾಮುಖಿಯಾಗಿಸುವ ಅಗತ್ಯವಿದೆ. ಅಲ್ಲದೇ ಇತರೆ ಬುಡಕಟ್ಟು ಸಮುದಾಯಗಳಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಒಡಿಗರಿಗೆ ದೊರಕಿಸಿ ಕೊಡುವ ಅಗತ್ಯವಿದೆ.

ಈ ಮೇಲಿನ ಮುಖ್ಯ ಅಂಶಗಳು ಒಡಿಗ ಸಮುದಾಯದ ಅಧ್ಯಯನದಿಂದ ತಿಳಿದು ಬಂದಿವೆ. ಹೀಗೆ ಈ ಸಮುದಾಯ ಈವರೆಗೆ ಅಲಕ್ಷ್ಯಕ್ಕೊಳಪಟ್ಟಿತ್ತು. ಕರ್ನಾಟಕ ಸಂಸ್ಕೃತಿಗೆ ಈ ಬಗೆಯ ಅಲಕ್ಷ್ಯ ಸಮುದಾಯಗಳ ಕೊಡುಗೆಯು ಬೆಳಕಿಗೆ ಬರುವ ಅಗತ್ಯವಿದೆ. ಈ ದೃಷ್ಟಿಯಿಂದ ಈ ಮಹಾಪ್ರಬಂಧ ಒಂದು ಪ್ರಯತ್ನವಾಗಿದೆ.



ಒಡಿಗ ಸಮುದಾಯದ ವಯೋ ವೃದ್ಧೆ



ಒಡಿಗ ಸಮುದಾಯದ ವಯೋ ವೃದ್ಧ



ಒಡಿಗ ಸಮುದಾಯದವರು ಧರಿಸುವ ಉಡುಗೆ ತೊಡುಗೆ



ಒಡಿಗ ಸಮುದಾಯದ ವಸತಿ



ಮೈರಾಡ ಸ್ವಯಂ ಸೇವಾ ಸಂಸ್ಥೆ ನಿರ್ಮಿಸಿ ಕೊಟ್ಟ ವಸತಿ



ದನದ ಕೊಟ್ಟಿಗೆ





ಕಾಡು ಪ್ರಾಣಿಗಳಿಂದ ಬೆಳೆ
ರಕ್ಷಿಸಲು ನಿರ್ಮಿಸಿ ಕೊಂಡ
ಕಾವಲು ವ್ಯವಸ್ಥೆ



ಕೃಷಿಯಲ್ಲಿ ನಿರತರಾದಒಡಿಗ ಸಮುದಾಯದ ಪುರುಷರು



ಕೃಷಿ ಕಾರ್ಯದಲ್ಲಿ ತೊಡಗಿರುವ ಸಮುದಾಯದ ಮಹಿಳೆಯರು





ಆಹಾರ ಸಂಗ್ರಹಿಸಲು ಬಳಸುವ
ಬಿದಿರಿನ ಕುಮ್ಮೆ





ಐಲ್ ಭತ್ತ ಅಳೆಯುವುದು



ಪೆಟ್ಟಿಗೆ ಬಂಗಾರದ ಶಾಸ್ತ್ರ





ಒಡಿಗ ಸಮುದಾಯದಲ್ಲಿ
ಉಗುರು ತೆಗೆಯುವ ಶಾಸ್ತ್ರ



ಒಡಿಗ ಸಮುದಾಯದ ಗೋಡೆ ಶಾಸ್ತ್ರ



ಸಮುದಾಯದ ಹಸೆ ಮಣೆ



ಮೇಲ್ಕಟ್ಟು ಕಟ್ಟುವುದು



ಮದುವೆ ಚಪ್ಪರದಲ್ಲಿ ನಡೆಯುವ ಬೇಡರ ಕಣ್ಣಪ್ಪನ ಪೂಜೆ



ಧಾರೆ ಶಾಸ್ತ್ರ



ಒಡಿಗ ಸಮುದಾಯದ
ನವ ವಧು-ವರರು



ವಿಶೇಷ ಅಡಿಗೆ ಅಣಿಗೊಳಿಸಲು ಬಳಸುವ ಪಾತ್ರೆಗಳು



ಶವ ಸಂಸ್ಕಾರದ ಪೂರ್ವ ಸಿದ್ಧತೆ



ಹದಿನಾರನೇ ದಿನದ ದೊಡ್ಡ ಕಾರ್ಯ



ಚಟ್ಟನ ಹಳ್ಳಿ ಚಾಮುಂಡಿ



ಮರಳು ಪರೆ ತಾಯಿ



ಚಾಮುಂಡಿದೇವಿ



ಬಸವೇಶ್ವರನ ದೇವಾಲಯ



ಬಸವೇಶ್ವರನ ಪ್ರತಿಮೆ





ಕೊಂಡ ಕೋಲು



ಮಲ್ಲೇಶಸ್ವಾಮಿ ಪೂಜೆಯ ನಂತರ ಪೇಯಿ ಬಡಿಸುವುದು



ಭೈರವೇಶ್ವರ ಜಾತ್ರೆಯಲ್ಲಿ ಹೋರಿ ಓಡಿಸುವುದು



ಭೈರವೇಶ್ವರ ಜಾತ್ರೆಯಲ್ಲಿ ಎರವರ ಕುಣಿತ



ಇತರೆ ಸಮುದಾಯದವರಿಂದ ಜಾತ್ರೆಯಲ್ಲಿ ಕರಗದ ಕುಣಿತ



... ಸಹಕಾರ ಸಂಘ, ಲಿಮಿಟೆಡ್.
(... ತಾಲ್ಲೂಕು)

№ 88 ತಾ|| ...

...ರೂ. ... ನಯಪೈ ...
...ಕಂಡ ಬಾಬುಗಳಿಗಾಗಿ ಜಮಾ ಬಂದಿದೆ.

| | | |
|---|---|---|
| ...ವೇಶ ಧನ | ...... | |
| ...ರು ಫೀ | ...... | |
| ...ರು ಧನ | ...... | |
| ...ಪಾಜಿಟ್ | ...... | |
| ...ಲ ವಾಪ್ಸು | ...... | 200-00 |
| ...ಡ್ಡಿ | ...... | 9-00 |
| ...ಸ್ತಿ ಬಡ್ಡಿ | ...... | |
| ...ತರ ಬಾಬುಗಳು | ...... | 2-00 |
| ಜುಮ್ಲಾ | ...... | 211-00 |

...ವತಿ ಮಾಡುವವರ ರುಜು. ಸೆಕ್ರೆಟರಿ

---

... ಸಹಕಾರ ಸಂಘ, ಲಿಮಿಟೆಡ್,
... ತಾಲ್ಲೂಕು.

ರಶೀತಿ № 034 ತಾ|| ...

ಮ|| ರಾ|| ...
ಯವರಿಂದ 265 ರೂ. ... ನಯಪೈ.
ಈ ಕೆಳಕಂಡ ಬಾಬುಗಳಿಗಾಗಿ ಜಮಾ ಬಂದಿದೆ.

| | | | | |
|---|---|---|---|---|
| 1. | ಪ್ರವೇಶ ಧನ | ...... | | |
| 2. | ಷೇರು ಫೀ | ...... | | |
| 3. | ಷೇರು ಧನ | ...... | | |
| 4. | ಡಿಪಾಜಿಟ್ | ...... | | |
| 5. | ಅಲ್ಪಾವಧಿ ಸಾಲ | ...... | 250 | |
| 6. | ಮಧ್ಯಮಾವಧಿ ಸಾಲ | ...... | | |
| 7. | ಬಡ್ಡಿ | ...... | 12 | 50 |
| 8. | ಸುಸ್ತಿ ಬಡ್ಡಿ | ...... | | |
| 9. | ಇತರೆ B.F | ...... | 2 | 50 |
| | ಜುಮ್ಲಾ | ...... | 265 | 00 |

ಹಣ ಪಾವತಿ ಮಾಡುವವರ ರುಜು. ಸೆಕ್ರೆಟರಿ

---

# മൂരി അബ്ബ ആഘോഷം ഇന്ന്

പുൽപള്ളി: പരമ്പരാഗത ആചാരാനുഷ്ഠാനങ്ങളോടെ ബൈരക്കുപ്പ നിവാസികൾ ഇന്ന് മൂരി അബ്ബ ആഘോഷിക്കും. ഓടറസ് ഗൗഡ സമുദായത്തിന്റെ ദേശീയോൽസവമാണിത്.

കർണാടകയിലെ ചിത്രദുർഗയിൽ നിന്ന് പതിറ്റാണ്ടുകൾക്ക് മുമ്പ് കബനീ തീരത്തേക്ക് പാലായനം ചെയ്ത ഗൗഡർമാർ ആരാധനാമൂർത്തികളായ ബസവേശ്വരൻ, ബൈരേശ്വരൻ എന്നിവരെ പ്രസാദിപ്പിക്കുന്നതിനും പോയവർഷം ലഭിച്ച അനുഗ്രഹങ്ങൾക്ക് നന്ദി പറയുന്നതിനുമാണ് മൂരി അബ്ബ ആഘോഷിക്കുന്നത്. മൂരി (കാള) കൾ ഇവരുടെ ആരാധനാമൂർത്തിയാണ്.

കാളകളെ കുളിപ്പിച്ച് കാലത്ത് തന്നെ മണിയും മാലകളും അണിയിച്ച് ബൈരക്കുപ്പയിൽ എത്തിക്കും. ആനമാളം, മച്ചൂർ, തിരുനെല്ലി, ഹൊസള്ളി, ബാവലി എന്നിവിടങ്ങളിൽ നിന്ന് ആഘോഷപൂർവം കാളകളെ ഇവിടെ എത്തിക്കും.

കാലത്ത് ... മണിയോടെ ബൈരേശ്വര ക്ഷേത്രത്തിൽ പൂജകൾ ആരംഭിക്കും. പിന്നെ കാളകളെ ക്ഷേത്ര സന്നിധിയിലെത്തിച്ച് പൂജ നടത്തിയ ശേഷം ബൈരേശ്വര ക്ഷേത്രത്തിലേക്ക് ഓടിക്കും. ഉടമ കാളപ്പുറത്ത് കയറിയിരുന്ന് കുതിരയെ പോലെയാണ് കാളകളെ ഓടിക്കുക. കാള ബൈരേശ്വര ക്ഷേത്രത്തിലെത്തുന്നതോടെ ഉൽസവം കഴിയും.

# ಪ್ರಶ್ನಾವಳಿ

1 ಹೆಸರು :
2 ವಯಸ್ಸು :
3 ಲಿಂಗ :
4 ಊರಿನ ಹೆಸರು :
5 ಸಮುದಾಯದ ಮೂಲ :
ಅ) ವಲಸೆಗೆ ಕಾರಣ :
ಪುರಾಣ, ಕಥೆ, ಐತಿಹ್ಯ :
ಧಾರ್ಮಿಕ ಪುರುಷರು, ಇತರೇ :
ಆ) ಒಡಿಗ ಪದದ ಅರ್ಥ :
6 ಕುಟುಂಬದ ವಿಧ ಅವಿಭಕ್ತ - ವಿಭಕ್ತ :
7 ಕುಲದೇವರು :
8 ಉಪ ಪಂಗಡಗಳು ಯಾವುವು :
9 ಬೆಡಗಗಳು ಯಾವುವು :
10 ಬೆಡಗುಗಳಲ್ಲಿನ ವೈವಾಹಿಕ ಸಂಬಂಧ :
11 ನ್ಯಾಯ ಪದ್ಧತಿಯ ವಿವರ :
ಅ) ನ್ಯಾಯಾದೀಶನ ಆಯ್ಕೆ :
ಆ) ನ್ಯಾಯ ತೀರ್ಮಾನ :
ಇ) ಶಿಕ್ಷೆಯ ವಿವರ :
12 ವೈದ್ಯ ಪದ್ಧತಿಯ ವಿಧಾನಗಳು :
ಅ) ಮನುಷ್ಯರಿಗೆ :
ಆ) ಪ್ರಾಣಿಗಳಿಗೆ :
13 ಕುಟುಂಬದ ಮೂಲ ಕಸುಬು :
ಅ) ಬೇಟೆ :
ಆ) ಬೇಟೆಯ ವಿಧಾನಗಳು :
ಇ) ಕೃಷಿ :
ಈ) ಭೂಮಿಯ ವಿವರ :
ಉ) ನೀರಾವರಿ : ಒಣಬೇಸಾಯ, ಬೇಸಾಯ ಪದ್ಧತಿ :
ಊ) ವಾಣಿಜ್ಯ ಬೆಳೆಗಳು, ಆಹಾರ ಬೆಳೆಗಳು :
ಋ) ಇತರೆ ಕಸುಬು :
14 ಮನೆಯ ವಿಧ, ಗುಡಿಸಲು : ಹೆಂಚಿನ : ಆರ್.ಸಿ.ಸಿ. :
ಅ) ಸ್ಥಳದ ಆಯ್ಕೆ :
ಆ) ವಸತಿ ನಿರ್ಮಾಣದ ವಿಧಾನಗಳು :
ಇ) ಗೃಹಪ್ರವೇಶ :
15 ಆಹಾರ ಪದ್ಧತಿ :
ಅ) ಸಸ್ಯಾಹಾರ : ಮಾಂಸಾಹಾರ :
ಆ) ದಿನನಿತ್ಯದ ಆಹಾರ :
ಇ) ಹಬ್ಬ ಹರಿದಿನಗಳಲ್ಲಿ :
ಈ) ಇತರೆ :
16 ಉಡುಗೆ - ತೊಡುಗೆಗಳು :
ಅ) ಪುರುಷರು, ಸ್ತ್ರೀಯರು, ಮಕ್ಕಳು :
ಆ) ಸಾಮಾನ್ಯ ದಿನಗಳಲ್ಲಿ :
ಇ) ಹಬ್ಬ ಹರಿದಿನಗಳಲ್ಲಿ :
ಈ) ಧರಿಸುವ ಆಭರಣಗಳು , ಪುರುಷ, ಸ್ತ್ರೀ

17 ಹುಟ್ಟಿನ ಆಚರಣೆಗಳು

ಅ) ಸೂತಕ :

ಆ) ನಾಮಕರಣ :

18 ಋತು ಶಾಸ್ತ್ರದ ಆಚರಣೆಗಳು :

ಅ) ಸೂತಕ

ಆ) ಒಸುಗೆ :

19 ಮದುವೆಯ ಬಗ್ಗೆ ಬುಡಕಟ್ಟಿನ ಅನಿಸಿಕೆಗಳು :

ಅ) ಮದುವೆಯ ವಯಸ್ಸು :

ಆ) ವಿವಾಹದ ಪದ್ದತಿಗಳು : ಗಂ / ಹೆಂ

ಇ) ಮದುವೆ ಸಂದರ್ಭದ ಆಚರಣಾವಿಧಿವಿಧಾನಗಳು :

20 ಸಾವಿನ ಬಗೆಗಿನ ಆಚರಣೆಗಳು , ಪುರುಷ , ಸ್ತ್ರೀ, ಮಕ್ಕಳು :

ಅ) ಅಂತ್ಯಕ್ರಿಯೆ ಮಾಡುವ ವಿಧಾನ :

ಆ) ಅಂತ್ಯಕ್ರಿಯೆ ನಂತರದ ವಿಧಿ ಆಚರಣೆಗಳು :

ಇ) ಸಾವು ಉಂಟಾದ ಮನೆಯವರಿಗೆ ಯಾವುದಾದರೂ ನಿರ್ಬಂಧಗಳಿವೆಯೇ

ಈ) ಸಮುದಾಯ ಈ ವಿಧಿ - ನಿಷೇಧಗಳು

21 ಪೂಜಿಸುವ ದೇವರುಗಳು, ಪವಿತ್ರ ಸ್ಥಳಗಳು :

ಅ) ಕೊಂಡ ಕೋಲಿನ ವಿಶೇಷತ :

ಆ) ಬಲಿ, ಹರಕೆಗಳು :

ಇ) ಆಚರಿಸುವ ಹಬ್ಬ, ಜಾತ್ರೆಗಳು :

ಈ) ಜಾತ್ರೆಯಲ್ಲಿನ ಮನರಂಜನಾ ಕಾರ್ಯಗಳು :
ಹೋರಿ ಓಡಿಸುವುದು, ಇತರೇ

22 ಭಾಷೆ :

ಅ) ಸಮುದಾಯದ ಮೂಲ ಭಾಷೆ :

ಆ) ಇತರೆ ಭಾಷೆ :

ಇ) ಸಮುದಾಯದ ಕುರಿತ ಕಥೆಗಳು :

ಈ) ಗಾದೆಗಳು :

ಉ) ಒಗಟುಗಳು :

23 ಸಮುದಾಯದ ಕಲೆಗಳು :

ಅ) ಕಸೂತಿ ಕಲೆ :

ಆ) ಹಚ್ಚೆ ಕಲೆ :

ಇ) ಚಿತ್ರ ಕಲೆ :

ಈ) ನಾಟಕ :

ಉ) ಯಕ್ಷಗಾನ :

ಊ) ಇತರೆ

24 ಸಮುದಾಯದಲ್ಲಿನ ಆಟಗಳು :

ಅ) ಮಕ್ಕಳಲ್ಲಿ , ಸ್ತ್ರೀಯರಲ್ಲಿ, ಪುರುಷರಲ್ಲಿ :

ಆ) ಸಾಮಾನ್ಯ ದಿನಗಳಲ್ಲಿ :

25 ಅ) ನಿಮ್ಮ ಅಭಿವೃದ್ಧಿಗಾಗಿ ಸರ್ಕಾರದ ಯೋಜನೆಗಳಿವೆಯೇ :

ಆ) ನಿಮ್ಮ ನೆರವಿಗಿರುವ ಸ್ವಯಂ ಸೇವಾ ಸಂಸ್ಥೆಗಳು ಯಾವುವು :

ಇ) ಸ್ವಯಂ ಸೇವಾ ಸಂಸ್ಥೆಗಳು ನಿಮ್ಮ ಅಭಿವೃದ್ಧಿಗಾಗಿ ಯಾವ ರೀತಿ ಸಹಕರಿಸಿವೆ :

ಈ) ನಿಮಗೆ ಶಿಕ್ಷಣ ದೊರೆಯುತ್ತಿದೆಯೇ :

ಉ) ನಿಮಗೆ ಶಿಕ್ಷಣ ಪಡೆಯಬೇಕಾದರೆ ಎದುರಿಸುವ ಸಮಸ್ಯೆಗಳಾವುವು :

ಊ) ನಿಮಗೆ ಸರ್ಕಾರದಿಂದ ಅಥವಾ ಸ್ವಯಂ ಸೇವಾ ಸಂಸ್ಥೆಗಳಿಂದ ವೈದ್ಯಕೀಯ ಸೌಲಭ್ಯವಿದೆಯೇ :

ಋ) ಸರ್ಕಾರದ "ಆದಿವಾಸಿಗಳ ಕಲ್ಯಾಣ ನಿಧಿಯಿಂದ " ಏನಾದರೂ ಸಹಾಯ ದೊರೆಯುತ್ತಿದೆಯೇ :

ಎ) ನೀವು ಸರ್ಕಾರದಿಂದ ಏನನ್ನು ಬಯಸುತ್ತೀರಾ ಹೇಗೆ :

ಸಂದರ್ಶನ ದಿನಾಂಕ
ಮನೆ ದೇವರು
ಬೆಡಗು
ಮನೆತನದ ಹೆಸರು

# ಬುಡಕಟ್ಟು ಅಧ್ಯಯನ ವಿಭಾಗ

## ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - 580 276.

## ಒಡಿಗ ಬುಡಕಟ್ಟು ಸಮುದಾಯದ ಒಂದು ಅಧ್ಯಯನ

ವಾಸಸ್ಥಾನ
ಹೋಬಳಿ
ತಾಲ್ಲೂಕು
ಜಿಲ್ಲೆ

| ಕ್ರ.ಸಂ. | ಕುಟುಂಬದ ಸದಸ್ಯರ ಹೆಸರುಗಳು | V T L | ಸಂಬಂಧ | ಲಿಂಗ | ವಯಸ್ಸು | ವೈವಾಹಿಕ ಸ್ಥಾನಮಾನ | ವಿವಾಹಿತಳ ಬೆಡಗು | ಶೈಕ್ಷಣಿಕ ಮಟ್ಟ | ಮುಖ್ಯ ಕಸುಬು | ಉಪ ಕಸುಬು | ಆದಾಯ | ಸಂಘ ಸಂಸ್ಥೆಗಳು ಹಾಗೂ ಸರ್ಕಾರಿ ಸೌಲಭ್ಯಗಳು | | | |
|---|---|---|---|---|---|---|---|---|---|---|---|---|---|---|---|
| | | | | | | | | | | | | ವಿಧವಾ | ಅಂಗವಿಕಲ | ವೃದ್ಧಾಪ್ಯ | ಶಿಷ್ಯ ವೇತನ |
| | | | | | | | | | | | | | | | |

ಇತರೆ ಮಾಹಿತಿಗಳು

ಅ) ಭೂ ಹಿಡುವಳಿ / ಎ - ಗು.ಗಳಲ್ಲಿ
1. ಒಣ
2. ನೀರಾವರಿ

ಆ) ಪಶುಗಳು
1. ಎತ್ತು
2. ಎಮ್ಮೆ
3. ಆಕಳು
4. ಕುರಿ/ ಮೇಕೆ
5. ಕೋಳಿ
ಇತರೆ

ಇ) ಮನೆ ಮಾದರಿ :
1. ಗುಡಾರ
2. ಗುಡಿಸಲು
3. ಟಿನ್ ಮನೆ
4. ಹೆಂಚಿನಮನೆ
ಇತರೆ

ಈ) ಸೌಲಭ್ಯಗಳು
1. ಪಡಿತರ ಚೀಟಿ
2. ಮನೆ/ನಿವೇಶನ
3. ಸಾಲ
4. ಭಾಗ್ಯ ಜ್ಯೋತಿ
5. ಬಂಡಿ
6. ಸೈಕಲ್/ ಸ್ಕೂಟರ್ / ಟ್ರಾಕ್ಟರ್
7. ಟಿ.ವಿ./ ರೇಡಿಯೋ/ ಟೇಪ್‌ರಿಕಾರ್ಡರ್
8. ಬಿಲ್ಲು ಬಾಣ
9. ಪಿಸ್ತೂಲು (Gun)
ಇತರೆ

... ಕೇಶವನ್ ಪ್ರಸಾದ್ ಎನ್. ಕೃಷ್ಣಮೂರ್ತಿ

L - Leproscopy
V - Vasectomy
T - Tubectomy

D/S - Day Scholar
H - Hostel
C - Cycle'

# ವಕ್ತೃಗಳ ಅಕಾರಾದಿ ಸೂಚಿ

| ಹೆಸರು | ವಯಸ್ಸು | ವೃತ್ತಿ | ಜಾತಿ | ಊರು | ತಾಲ್ಲೂಕು | ಜಿಲ್ಲೆ |
|---|---|---|---|---|---|---|
| ಅಜ್ಜೇಗೌಡ | ೪೮ | ಕೂಲಿ | ಒಡಿಗ | ಗುಂಡ್ರೆ | ಹೆಗ್ಗಡದೇವನಕೋಟೆ | ಮೈಸೂರು |
| ಅಜ್ಜೇಗೌಡ | ೫೨ | ಕೂಲಿ | ಒಡಿಗ | ತಿಮ್ಮನಿಹೊಸಹಳ್ಳಿ | ಎಚ್.ಡಿ. ಕೋಟೆ | ಮೈಸೂರು |
| ಇರುಗುಡಿ ನಂಜೇಗೌಡ | ೫೦ | ಕೃಷಿ/ಕೂಲಿ | ಒಡಿಗ | ದೊಡ್ಡಬೈರನ ಕುಪ್ಪೆ | ಹೆಗ್ಗಡದೇವನಕೋಟೆ | ಮೈಸೂರು |
| ಕಮಲಮ್ಮ | ೪೫ | ಕೂಲಿ | ಒಡಿಗ | ತಿಮ್ಮನಿಹೊಸಹಳ್ಳಿ | ಎಚ್.ಡಿ. ಕೋಟೆ | ಮೈಸೂರು |
| ಕರಿಬುಜ್ಜೇಗೌಡ | ೬೦ | ಕೂಲಿ | ಒಡಿಗ | ವಡಕನಮೊಳ | ಎಚ್.ಡಿ. ಕೋಟೆ | ಮೈಸೂರು |
| ಕಾಳಮ್ಮ | ೫೮ | ಗೃಹಿಣಿ | ಒಡಿಗ | ಗಂಡತ್ತೂರು | ಎಚ್.ಡಿ.ಕೋಟೆ | ಮೈಸೂರು |
| ಕಾಳೇಗೌಡ | ೫೮ | ಕೂಲಿ | ಒಡಿಗ | ವಡಕನಮೊಳ | ಎಚ್.ಡಿ. ಕೋಟೆ | ಮೈಸೂರು |
| ಕಾಳೇಗೌಡ | ೫೦ | ಕೂಲಿ | ಒಡಿಗ | ಕೋಟೇರು | ಮಾನಂದವಾಡಿ | ವೈನಾಡು/ ಕೇರಳ ರಾಜ್ಯ |
| ಕಾಳಜ್ಜೇಗೌಡ | ೮೦ | - | ಒಡಿಗ | ಕಡೇಗದ್ದೆ | ಎಚ್.ಡಿ. ಕೋಟೆ | ಮೈಸೂರು |
| ಕೊಂಡಿಗೌಡರು | ೯೫ | ವಯೋವೃದ್ಧ | ಒಡಿಗ | ಆನೆಮೊಳ | ಎಚ್.ಡಿ. ಕೋಟೆ | ಮೈಸೂರು |
| ಗಂಡುಗಲಿ | ೫೩ | - | ನಾಯಕ | ಚಿತ್ರದುರ್ಗ | ಚಿತ್ರದುರ್ಗ | ಚಿತ್ರದುರ್ಗ |
| ಚಲುವದಾಸಯ್ಯ | ೫೦ | ಗ್ರಾಮಲೆಕ್ಕಿಗರು | - | ಎಚ್.ಡಿ.ಕೋಟೆ | ಎಚ್.ಡಿ.ಕೋಟೆ | ಮೈಸೂರು |
| ಚಿಕ್ಕಮ್ಮ | ೪೫ | ಗೃಹಿಣಿ | ಒಡಿಗ | ಮಚ್ಚೂರು | ಎಚ್.ಡಿ.ಕೋಟೆ | ಮೈಸೂರು |
| ಚಿನ್ನಸ್ವಾಮಿ | ೪೫ | ಮೈರಾಡಪ್ಲಾನ್ | - | ಎಚ್.ಡಿ.ಕೋಟೆ | ಎಚ್.ಡಿ.ಕೋಟೆ | ಮೈಸೂರು |
| ಚೋಮ | ೫೦ | ಕೂಲಿ | ಎರವರು | ಬಾವಲಿ | ಎಚ್.ಡಿ.ಕೋಟೆ | ಮೈಸೂರು |
| ಜವರೇಗೌಡ | ೫೦ | ಕೃಷಿ/ಗೌಡಿಕೆ | ಒಡಿಗ | ಗಂಡತ್ತೂರು | ಎಚ್.ಡಿ. ಕೋಟೆ | ಮೈಸೂರು |
| ತಲೆಮಲೆ ಜವರೇಗೌಡ | ೬೦ | ಕೃಷಿ/ಕೂಲಿ | ಒಡಿಗ | ಗಂಡತ್ತೂರು | ಎಚ್.ಡಿ.ಕೋಟೆ | ಮೈಸೂರು |
| ತಿಮ್ಮೇಗೌಡ | ೪೦ | ಗ್ರಾ. ಪಂ. ಅಧ್ಯಕ್ಷ | ಒಡಿಗ | ಮಚ್ಚೂರು | ಎಚ್.ಡಿ.ಕೋಟೆ | ಮೈಸೂರು |
| ತಿಮ್ಮೇಗೌಡ | ೪೦ | ಕೃಷಿ | ಒಡಿಗ | ಆದಂಡ | ಮಾನಂದವಾಡಿ | ವೈನಾಡು/ಕೇರಳ |
| ತಿಮ್ಮೇಗೌಡ | ೫೮ | ಕೃಷಿ | ಒಡಿಗ | ಕೋಟೇರು | ಮಾನಂದವಾಡಿ | ವೈನಾಡು/ಕೇರಳ |

| ಹೆಸರು | ವಯಸ್ಸು | ವೃತ್ತಿ | ಜಾತಿ | ಊರು | ತಾಲ್ಲೂಕು | ಜಿಲ್ಲೆ |
|---|---|---|---|---|---|---|
| ದಂಡಿ ನಂಜೇಗೌಡ | ೬೦ | ಕೂಲಿ | ಒಡಿಗ | ದೊಡ್ಡಬೈರನಕುಪ್ಪೆ | ಎಚ್.ಡಿ. ಕೋಟೆ | ಮೈಸೂರು |
| ದಿನೇಶ್ | ೫೦ | ಪ್ರಾಚಾರ್ಯರು | ಬ್ರಾಹ್ಮಣ | ಬ್ಯಾಡರಹಳ್ಳಿ | ಪಾಂಡವಪುರ | ಮಂಡ್ಯ |
| ದೇವಮ್ಮ | ೪೦ | ಗೃಹಿಣಿ | ಒಡಿಗ | ಕಡೇಗದ್ದೆ | ಎಚ್.ಡಿ.ಕೋಟೆ | ಮೈಸೂರು |
| ದೇವಮ್ಮ | ೫೦ | ಗೃಹಿಣಿ | ಒಡಿಗ | ಹೊಸೂರು | ಎಚ್.ಡಿ. ಕೋಟೆ | ಮೈಸೂರು |
| ದೇವಶಿಗೌಡ | ೫೦ | ಕೃಷಿ | ಒಡಿಗ | ಗಂಡತ್ತೂರು | ಎಚ್.ಡಿ. ಕೋಟೆ | ಮೈಸೂರು |
| ದೇವಶಿಗೌಡ | ೬೦ | ಕೃಷಿ | ಒಡಿಗ | ಮಚ್ಚೂರು | ಎಚ್.ಡಿ.ಕೋಟೆ | ಮೈಸೂರು |
| ದೇವಶಿಗೌಡ | ೬೫ | ಕೃಷಿ | ಒಡಿಗ | ವಡಕನಮೊಳ | ಎಚ್.ಡಿ.ಕೋಟೆ | ಮೈಸೂರು |
| ನಂಜಮ್ಮ | ೫೮ | ಗ್ರಾ.ಪಂ. ಸದಸ್ಯೆ | ಒಡಿಗ | ವಡಕನಮೊಳ | ಎಚ್.ಡಿ. ಕೋಟೆ | ಮೈಸೂರು |
| ನಂಜಮ್ಮ | ೬೦ | ಗೃಹಿಣಿ | ಒಡಿಗ | ದೊಡ್ಡಬೈರನಕುಪ್ಪೆ | ಎಚ್.ಡಿ.ಕೋಟೆ | ಮೈಸೂರು |
| ನಂಜೇಗೌಡ | ೫೦ | ಕೂಲಿ | ಒಡಿಗ | ಸಣ್ಣಭತ್ತ ಕೂಲ್ಲಿ | ಎಚ್.ಡಿ.ಕೋಟೆ | ಮೈಸೂರು |
| ನಂಜೇಗೌಡ. ಎನ್ | ೫೦ | ಕೃಷಿ ಮಾಜಿ ಗ್ರಾ.ಪಂ. ಅಧ್ಯಕ್ಷ | ಒಡಿಗ | ಮಚ್ಚೂರು | ಎಚ್.ಡಿ.ಕೋಟೆ | ಮೈಸೂರು |
| ನಂಜೇಗೌಡ | ೬೦ | ಕೃಷಿ ಗ್ರಾ.ಪ. ಸದಸ್ಯ | ಒಡಿಗ | ಕಬ್ಬಿನಗೆರೆ | ಸುಲ್ತಾನ್ ಬತ್ತೇರಿ | ವೈನಾಡು/ಕೇರಳ |
| ನಂಜೇಗೌಡ | ೬೦ | ಕೂಲಿ | ಒಡಿಗ | ಗಂಡತ್ತೂರು | ಎಚ್.ಡಿ. ಕೋಟೆ | ಮೈಸೂರು |
| ನಾಗೇಶ್ | ೩೨ | ಶಿಕ್ಷಕರು | | ದೊಡ್ಡಬೈರನಕುಪ್ಪೆ | ಎಚ್.ಡಿ. ಕೋಟೆ | ಮೈಸೂರು |
| ಪುಟ್ಟರಾಜು | ೫೦ | ವ್ಯಾಪಾರಿ | ತೆಲಗುಶೆಟ್ಟಿ | ಮಚ್ಚೂರು | ಎಚ್.ಡಿ. ಕೋಟೆ | ಮೈಸೂರು |
| ಬೈರನಾಯಕ | ೫೦ | ಬ್ಯಾಂಕ್ ಉದ್ಯೋಗಿ | ನಾಯಕ | ಚಿತ್ರದುರ್ಗ | - | ಚಿತ್ರದುರ್ಗ |
| ಭೋಜ | ೬೦ | ಕೂಲಿ | ಎರವರು | ಬಾವಲಿ | ಎಚ್.ಡಿ. ಕೋಟೆ | ಮೈಸೂರು |
| ಬೊಮ್ಮೆಗೌಡ | ೫೮ | ಕೂಲಿ | ಒಡಿಗ | ಸಾಣಾಗಾಲ | ಮಾನಂದವಾಡಿ | ವೈನಾಡು/ಕೇರಳ |
| ಮಲ್ಲಮ್ಮ | ೫೦ | ಗೃಹಿಣಿ | ಒಡಿಗ | ತಿಮ್ಮನಿ ಹೊಸಹಳ್ಳಿ | ಎಚ್.ಡಿ.ಕೋಟೆ | ಮೈಸೂರು |
| ಮಲ್ಲಮ್ಮ | ೬೦ | ಗೃಹಿಣಿ | ಒಡಿಗ | ಚಿಕ್ಕಬೈರನಕುಪ್ಪೆ | ಎಚ್.ಡಿ. ಕೋಟೆ | ಮೈಸೂರು |
| ಮಲ್ಲಮ್ಮ | ೫೦ | ಗೃಹಿಣಿ | ಒಡಿಗ | ಕೋಟೇರು | ಮಾನಂದವಾಡಿ | ವೈನಾಡು-ಕೇರಳ |

| ಹೆಸರು | ವಯಸ್ಸು | ವೃತ್ತಿ | ಜಾತಿ | ಊರು | ತಾಲ್ಲೂಕು | ಜಿಲ್ಲೆ |
|---|---|---|---|---|---|---|
| ಮಲ್ಲೇಗೌಡ | ೩೫ | ಕೂಲಿ | ಒಡಿಗ | ವಡಕನಮೊಳ | ಎಚ್.ಡಿ. ಕೋಟೆ | ಮೈಸೂರು |
| ಮಲ್ಲೇಗೌಡ | ೬೦ | ಕೃಷಿ | ಒಡಿಗ | ವಡಕನಮೊಳ | ಎಚ್.ಡಿ.ಕೋಟೆ | ಮೈಸೂರು |
| ಮಹದೇವಪ್ಪ | ೭೦ | ನಿವೃತ್ತಶಿಕ್ಷಕರು | ಲಿಂಗಾಯತ | ಬ್ಯಾಡರಹಳ್ಳಿ | ಪಾಂಡವಪುರ | ಮಂಡ್ಯ |
| ಮಾದ | ೬೦ | ಕೂಲಿ | ಮಲೆ ಕುರುಬ | ಆದಂಡ | ಮಾನಂದವಾಡಿ | ವೈನಾಡು/ಕೇರಳ |
| ಮಾರ | ೫೦ | ಕೂಲಿ | ಎರವರು | ದೊಡ್ಡಬೈರನಕುಪ್ಪೆ | ಎಚ್.ಡಿ.ಕೋಟೆ | ಮೈಸೂರು |
| ಮಾಚಿದೇವಶಿಗೌಡ | ೩೮ | ಕೃಷಿ | ಒಡಿಗ | ವಡಕನಮೊಳ | ಎಚ್.ಡಿ. ಕೋಟೆ | ಮೈಸೂರು |
| ರಹೀಮ್‌ಕಾಕಾ | ೬೦ | ವ್ಯಾಪಾರಿ | ಮುಸ್ಲಿಂ | ವಡಕನಮೊಳ | ಎಚ್.ಡಿ.ಕೋಟೆ | ಮೈಸೂರು |
| ರಾಜಮ್ಮ | ೪೦ | ಗ್ರಾ. ಪಂ. ಸದಸ್ಯೆ | ತೆಲುಗುಶೆಟ್ಟಿ | ಮಚ್ಚೂರು | ಎಚ್.ಡಿ.ಕೋಟೆ | ಮೈಸೂರು |
| ರಾಜಮ್ಮ | ೪೦ | ಗೃಹಿಣಿ | - | ಗುಂಡ್ರೆ | ಎಚ್.ಡಿ. ಕೋಟೆ | ಮೈಸೂರು |
| ರಾಮಣ್ಣ | ೪೦ | ಅರಣ್ಯರಕ್ಷಕ | ಕಾಡುಕುರುಬ | ಹೊಸೂರು | ಎಚ್.ಡಿ.ಕೋಟೆ | ಮೈಸೂರು |
| ರಾಮಪ್ಪ | ೪೫ | ಗ್ರಾ. ಪಂ. ಸದಸ್ಯರು | ಕಾಡು ಕುರುಬ | ದೊಡ್ಡಬೈರನಕುಪ್ಪೆ | ಎಚ್.ಡಿ. ಕೋಟೆ | ಮೈಸೂರು |
| ರಾಮಯ್ಯ | ೫೫ | ಶಿರಸ್ತೆದಾರರು | - | ಎಚ್.ಡಿ.ಕೋಟೆ | ಎಚ್.ಡಿ. ಕೋಟೆ | ಮೈಸೂರು |
| ರಾಮೇಗೌಡ | ೬೦ | ಕೃಷಿ | ಒಡಿಗ | ಕಬ್ಬಿನಗದ್ದೆ | ಸುಲ್ತಾನ್ ಬತ್ತೇರಿ | ವೈನಾಡು/ಕೇರಳ |
| ರಾಮೇಗೌಡ | ೮೦ | ಗೌಡಿಕೆ | ಒಕ್ಕಲಿಗ | ಬ್ಯಾಡರಹಳ್ಳಿ | ಪಾಂಡವಪುರ | ಮಂಡ್ಯ |
| ರೇವಣ್ಣ ರೊಮಾಲೆ ಕೆ.ಎಂ. | ೬೦ | ಪಾರುಪತ್ತೆದಾರರು | - | ನಾಯಕನಹಟ್ಟಿ | ನಾಯಕನಹಟ್ಟಿ | ಚಿತ್ರದುರ್ಗ |
| ವೆಂಕಟೇಗೌಡ ಟಿ. | ೩೮ | ಗ್ರಾ. ಪಂ. | ಒಡಿಗ | ದೊಡ್ಡಬೈರನಕುಪ್ಪೆ | ಎಚ್.ಡಿ.ಕೋಟೆ | ಮೈಸೂರು |
| ವೆಂಕಟಮ್ಮ | ೫೦ | ಗೃಹಿಣಿ | ಒಡಿಗ | ಕೋಟೇರು | ಮನಂದವಾಡಿ | ವೈನಾಡು/ಕೇರಳ |
| ಶಿವಣ್ಣ | ೩೨ | ಶಿಕ್ಷಕರು | - | ಮಚ್ಚೂರು | ಎಚ್.ಡಿ.ಕೋಟೆ | ಮೈಸೂರು |
| ಶ್ರೀನಿವಾಸ ಗೋಪಾಲಚಾರ್ಯ | ೭೦ | ಅರ್ಚಕರು | ಬ್ರಾಹ್ಮಣ | ಮೇಲುಕೋಟೆ | ಪಾಂಡವಪುರ | ಮಂಡ್ಯ |
| ಸುರೇಶ್ | ೩೦ | ಶಿಕ್ಷಕರು | - | ದೊಡ್ಡಬೈರನಕುಪ್ಪೆ | ಎಚ್.ಡಿ.ಕೋಟೆ | ಮೈಸೂರು |
| ಹೆತ್ತೇಗೌಡ | ೫೮ | ಕೂಲಿ | ಒಡಿಗ | ಗಂಡತ್ತೂರು | ಎಚ್.ಡಿ.ಕೋಟೆ | ಮೈಸೂರು |

## ಪ್ರಾದೇಶಿಕ ಪದಗಳ ಅರ್ಥ ಸೂಚಿ

ಅದಿ - ಬಾಗಿಲು

ಅಡ್ಗಿ - ಅಡುಗೆ

ಅಂಬು, ಬಿಲ್ಲು - ಬಾಣ, ಬಿಲ್ಲು

ಅಮ್ಮ - ಅಜ್ಜಿ

ಅವ್ವ - ಅಮ್ಮ

ಅಂಡೆ - ಹಾಲು ಕರೆಯಲು ಬಳಸುವ ಬಿದಿರಿನ ಸಾಧನ

ಅಳಿಗುಳು - ಬೀಗರ ಊಟ

ಅಲ್ಲುಕು - ಬಿದಿರಿನ ಅಚ್ಚೆ

ಅಸದಟಿ - ಬಟ್ಟೆ ಒಣಗಿಸುವುದು

ಅಯ್ಯ - ಚಿಕ್ಕಪ್ಪ

ಆಡು - ಮೇಕೆ

ಇಜಿ - ಶುಂಠಿ

ಊರು - ಮನೆ

ಎತ್ತಗ - ದನ

ಎತ್ತುಗ ಮರ - ಹತ್ತಿ ಗಿಡ

ಎದಿ - ಎದೆ

ಎಸರು - ಸಾಂಬಾರು

ಐಕ್ಕಳು - ಮಕ್ಕಳು

ಒತ್ತಿಟ್ಟು - ಸಾವಿಗೆ

ಒಳಕಡ್ಡಿ - ಕಣಗುಡಿಸುವ ಪರಕೆ

ಓ ಹೈದಾ - ಗಂಡುಮಕ್ಕಳನ್ನು ಕೂಗಿ ಕರೆಯುವುದು.

ಓ ಅವ್ವಿ - ಹೆಣ್ಣುಮಕ್ಕಳನ್ನು ಕೂಗಿ ಕರೆಯುವುದು.

ಕನ್ನು - ಕಣ್ಣು

ಕನ್ನುಪೆಕ್ಕೆ - ಕಣ್ಣು ರೆಪ್ಪೆ

ಕವಚ - ಅಂಗಿ

ಕಪ್ಪಲೆ - ಹೊಸ್ತಿಲು

ಕಳ - ಕಣ

ಕಡಗತ್ತಿ - ಮಚ್ಚು

ಕಾಟಿ - ಕಾಡೆಮ್ಮೆ

ಕಿಚಲುಮರ - ಆವಿನಕಾಳು ಮರ

ಕಿಣೆ - ಮನೆಯ ಹಿಂದಿನ ಭಾಗ

ಕಿಮಿ - ಕಿವಿ

ಕಿಳಕ - ಕೆಳಗೆ

ಕುತ್ತಗ - ಕುತ್ತಿಗೆ

ಕುಳೆಗುಡ್ಡೆ - ಪೈರು ಕುಯಿದು ಹಾಕುವುದು

ಕೂತ್ತಿ - ಬೆಕ್ಕು

ಕೂಸು - ಮಗು

ಕೆಂದನಾಯಿ - ತೋಳ

ಕೆಪಿ - ಕೋತಿ

ಕೊಂಗ ಮರದ ಹಿಟ್ಟು - ಸಾವಿಗೆ

ಕೊಟ್ಟ ಮುತ್ತು - ಮಜ್ಜಿಗೆ ಕಡೆಯುವ ಮಂತು

ಕೊಟ್ಟೆ ಗುಡ್ಡೆ - ಕಣದಲ್ಲಿ ಮೆದೆ ಹಾಕುವುದು

ಕೋವಿ - ಬಂದೂಕು

ಗರಿಗೆ ಮರ - ಕಾಡು ಬೇವಿನ ಮರ

ಗಾಳಿ ಮರ - ಸರ್ವೆಮರ

ಗಿಂಡಿ - ಕಳಸ

ಗುಡುಗಿಸಬೇಕು - ಜೋರಾಗಿ ಹೇಳಬೇಕು

ಗುಡ್ಡ ಮಾರು - ಪೂಜಾರಿ

ಚಾನೆ ಗೇಣಸು - ಮರ ಗೇಣಸು

ಚಾಮುನ ಮರ - ಸೀಬೆಮರ

ಚುಕ್ಕಿ - (ಷರ್ಟಿನ) ಅಂಗಿಯ ಗುಂಡಿ

ಚೂಟಿ - ಚಮಚ

ರೊಮಾಲೆ - ಪೇಟಾ

ಲಗ್ನ, ನಗಡಿ - ಮದುವೆ

ವಡಚಿಟ್ಟು - ದೋಸೆ

ಸಾರಾಗ - ಸಾರಂಗ

ಶಿಡೆ - ಶಿಂಬೆ, ತಲೆಶಿಂಬೆ

ಸೂಳೆ - ತೆಂಗಿನ ಗರಿ

ಸ್ವಾಲಿ - ಸೀರೆ

ಹರಗೋಲು - ತೆಪ್ಪ

ಹಾದಿ - ದಾರಿ

ಲಿಂಬಿ ಹಣ್ಣು - ಲಿಂಬೆಹಣ್ಣು

ಹುಳಾ ಮೇಯಿಸುವುದು - ಉಳುಮೆ ಮಾಡುವುದು

ಹೂಳಾದಾದರೆ - ಹೇಳುವುದಾದರೆ

ಹೆಡತ್ತಿ - ಹೆಂಡತಿ

ಹಕ್ಕಿ - ಹಕ್ಕಿ

## ಸೋಬಾನ ಪದಗಳು

ಭತ್ತ ಕುಟ್ಟುವಾಗ : ಪಿಯೋಬಿ, ಪಿಟ್ಯೋಬಿ, ಪಿಯೋಬಿ, ಪಿಟ್ಯೋಬಿ ಎಂದು ಹೇಳುತ್ತಾ ಭತ್ತ ಕುಟ್ಟುತ್ತಾರೆ.

**ನಾಮಕರಣ ಸಮಯದಲ್ಲಿ ಹೇಳುವ ಸೋಬಾನ ಪದ**

ಸಂಪಿಗೆ ಹೂವುಗಳಿರಾ ಸಂಪಿಗೆ ಮಗ್ಗುಗಳಿರಾ
ಸಂಪಿಗೆ ವನುದಲ್ಲಿರುವ ಗಿಣೀ ಸೋಬಾನಾ ಸೋsss
ಸಂಪಿಗೆ ವನುದಲ್ಲಿರುವ ಗಿಣಿಗಳೇ ನೀವು ಬಂದು
ನಮ್ಮ ಕೆಂಪಿ ಗಿಣಿಯ ನೋಡು ಬನ್ನಿ ಸೋಬಾನಾ ಸೋsss

ಮಲ್ಲಿಗೆ ಹೂವುಗಳಿರಾ ಮಲ್ಲಿಗೆ ಮಗ್ಗುಗಳಿರಾ
ಮಲ್ಲಿಗೆ ವನುದಲ್ಲಿರುವ ಗಿಣೀ ಸೋಬಾನಾ ಸೋsss
ಮಲ್ಲಿಗೆ ವನುದಲ್ಲಿರುವ ಗಿಣಿಗಳೇ ನೀವು ಬಂದು
ನಮ್ಮ ಮಲ್ಲುಗು ಗಿಣಿಯ ನೋಡು ಬನ್ನಿ
ಸೋಬಾನಾ ಸೋsss

ಜಾಜಿ ಹೂವುಗಳಿರಾ ಜಾಜಿ ಮಗ್ಗುಗಳಿರಾ
ಜಾಜಿ ವನುದಲ್ಲಿರುವ ಗಿಣೀ ಸೋಬಾನಾ ಸೋsss
ಜಾಜಿ ವನುದಲ್ಲಿರುವ ಗಿಣಿಗಳೇ ನೀವು ಬಂದು
ನಮ್ಮ ಜಾಣ ಗಿಣಿಯ ನೋಡು ಬನ್ನಿ ಸೋಬಾನಾ ಸೋsss

ಇಂಬಿ ಹೂವುಗಳಿರಾ ಇಂಬಿ ಮಗ್ಗುಗಳಿರಾ
ಇಂಬಿ ವನುದಲ್ಲಿರುವ ಗಿಣೀ ಸೋಬಾನಾ ಸೋsss
ಇಂಬಿ ವನುದಲ್ಲಿರುವ ಗಿಣಿಗಳೇ ನೀವು ಬಂದು
ನಮ್ಮ ರಂಬೆ ಗಿಣಿಯ ನೋಡು ಬನ್ನಿ ಸೋಬಾನಾ ಸೋsss

ಬಾಳೆ ಹೂವುಗಳಿರಾ ಬಾಳೆ ಮಗ್ಗುಗಳಿರಾ
ಬಾಳೆ ವನುದಲ್ಲಿರುವ ಗಿಣೀ ಸೋಬಾನಾ ಸೋsss
ಬಾಳೆ ವನುದಲ್ಲಿರುವ ಗಿಣಿಗಳೇ ನೀವು ಬಂದು
ನಮ್ಮ ಬಾಲು ಗಿಣಿಯ ನೋಡು ಬನ್ನಿ ಸೋಬಾನಾ ಸೋsss

### ಹೆಣ್ಣು ಋತುವಾದಾಗ ಹೇಳುವ ಗೀತೆ

ಚಪ್ಪರದಡೆ ನೀರಾ ಮಿಯ್ಯದು ರಂಬೆಕೈಯ ತಿರುವು
ತುಂಬು ದೇವಿಗೆ ಬೇಕು ಸೋಬಾನಾ ಸೋssss
ತುಂಬು ದೇವಿಗೆ ಬೆಣುಕಲ್ಲಿ ನಿಂತುಕೊಂಡು
ನಾವು ನೀರಾ ಮಿಯ್ಯದು ಸೋಬಾನಾ ಸೋssss

ಗಿಂಡಿ ಗಿಂಡಿ ಚಂದ ಗಿಂಡಿಯಾಟ ಚಂದ
ಗಿಂಡಿಯೊಳಗಿರುವ ಮಾಣಿಕ್ಯದ ಅರಳು ಸೋಬಾನಾ ಸೋssss
ಗಿಂಡಿಯೊಳಗಿರುವ ಮಾಣಿಕ್ಯದ ಅರಳು ಚಂದ
ನಮ್ಮ ರಂಬೆನೂ ಚಂದ ಸೋಬಾನ ಸೋssss

ಅಷ್ಟು ಮುತ್ತೈದೆಯರು ಕೂರಿ ಕೂರಿ ಎನ್ನಿ
ಹೆಣ್ಣು ಮಕ್ಕ ನೀವು ಅಷ್ಟು ಮುತ್ತೈದೆಯರು ಸೇರಿ ಸೋಬಾನಾ ಸೋssss

### ಉಗುರು ತೆಗೆಯುವಾಗ ಹೇಳುವ ಸೋಬಾನೆ ಪದ

ಕೈ ಉಗುರು ತೆಗೆಯುವಾಂಗೇ ಏನೇನಾ ಕೊಡಬೇಕು
ಐದು ಮಾನ ಅಕ್ಕಿ ಐದು ಚಿಪ್ಪಿನ ಬಾಳೇಲ ಹಣ್ಣು ಸೋಬಾನಾ ಸೋssss
ಕೈ ಉಗುರು ತೆಗೆಯುವಾಂಗೇ ಏನೇನಾ ಕೊಡಬೇಕು
ಐದು ಮಾನ ಅಕ್ಕಿ ಐದು ಒಪ್ಪಿನ ಬೆಲ್ಲ ಸೋಬಾನಾ ಸೋssss
ಕಾಲು ಉಗುರು ತೆಗೆಯುವಾಂಗೇ ಏನೇನಾ ಕೊಡಬೇಕು
ಐದು ಮಾನ ಅಕ್ಕಿ ಐದು ಒಪ್ಪಿನ ಬಾಳೇಲ ಹಣ್ಣು ಸೋಬಾನಾ ಸೋssss
ಕಾಲು ಉಗುರು ತೆಗೆಯುವಾಂಗೇ ಏನೇನಾ ಕೊಡಬೇಕು
ಐದು ಮಾನ ಅಕ್ಕಿ ಐದು ಒಪ್ಪಿನ ಬೆಲ್ಲ ಸೋಬಾನಾ ಸೋssss
ಐವತ್ತೊಂದೂಲನಿಯ ಮಸುಕತ್ತಿ ಮಸುಕೊಂಡು
ಈ ಅಂದದ ಕೈ ಉಗುರಾ ತೆಗಿ ಸೋಬಾನಾ ಸೋssss
ಎಂಬತ್ತೊಂದೂಲನಿಯ ಮಸುಕತ್ತಿ ಮಸುಕೊಂಡು
ಈ ಅಂದದ ಕಾಲು ಉಗುರಾ ತೆಗಿ ಸೋಬಾನಾ ಸೋssss

ನಿಮ್ಮ ಮಾವಯ್ಯ ತಂದವನೆ ವಸು ಬಣ್ಣ ಸೋಬಾನಾ ಸೋsssss

ನಿಮ್ಮ ಮಾವಯ್ಯ ತಂದವನೆ ವಸು ಬಣ್ಣ ಬೀಗೂತಿ

ನಿಮ್ಮ ದೊರೆಯಾದ ಮಗನಾ ನೋಡು ಸೋಬಾನಾ ಸೋsssss

ಒಪ್ಪು ತಂದಿಲ್ಲ ಅಂತ ನಿಮ್ಮ ಅಪ್ಪಯ್ಯ ಮರಗುಬಿದ್ದ

ಒಪ್ಪುವಾ ನಾರಿ ಒಪ್ಪಿಸೊಕೋ ಸೋಬಾನಾ ಸೋsssss

ವಸ ಒಪ್ಪುವ ನಾರಿ ಒಪ್ಪಿಸೂಕು ತಂದಿವನೀ

ನಿಮ್ಮ ದೊರೆಯಾದ ಮಗನಾ ನೋಡು ಸೋಬಾನಾ ಸೋsssss

ಓಲೆ ತಂದಿಲ್ಲಂತ ನಿಮ್ಮ ಅಣ್ಣಯ್ಯ ಮರಗುಬಿದ್ದ

ವಸು ಹೆಣ್ಣೆ ನಾರಿ ವಸು ಓಲೆ ಒಪ್ಪಿಸೊಕೋ ಸೋಬಾನಾ ಸೋsssss

ವಸು ಹೆಣ್ಣೆ ನಾರಿ ವಸು ಓಲೆ ತಂದಿವನಿ

ನಿಮ್ಮ ದೊರೆಯಾದ ಮಗನಾ ನೋಡು ಸೋಬಾನಾ ಸೋsssss

**ಮೇಲ್‌ಕಟ್ ಕಟ್ಟುವಾಗ ಹೇಳುವ ಗೀತ**

ಚಪ್ಪರದ ಹಟ್ಟಿಗೆ ಕೆಸರೇನಾ, ಮೊಸರೇನಾ

ಧರೆಗೆ ದೊಡ್ಡವ ನಿಮ್ಮ ಮಗಾ ಸೋಬಾನಾ ಸೋsssss

ಮೇಲ್‌ಕಟ್ಟು ಕಟುವಾಂಗೇ ಏನೇನಾ ಕೊಡುಬೇಕು

ಹತ್ತು ಮಾನ ಅಕ್ಕಿ ಗೂನಾ ಬಾಳೆಲ ಹಣ್ಣು ಸೋಬಾನಾ ಸೋsssss

ಹತ್ತುಮಾನ ಅಕ್ಕಿ ಹತ್ತು ಚಿಪ್ಪಿನ ಬಾಳೆಲ ಹಣ್ಣು

ನಿಮ್ಮ ಅಂದದ ಮೇಲ್‌ಕಟ್ಟು ಕಟ್ಟು ನೀ ಸೋಬಾನಾ ಸೋsssss

ಸಣ್ಣಾಗೆ ದುಡಿಯವಾಂಗೇ ಏನೇನಾ ಕೊಡುಬೇಕು

ಹತ್ತುಮಾನ ಅಕ್ಕಿ ಹತ್ತು ಒಪ್ಪು ಬೆಲ್ಲ ಸೋಬಾನಾ ಸೋsssss

ಹನ್ನೇರಡು ಕಂಬದಧಾರೆದೆಡೆಗೆ ಬರುವವನು

ನಿಮ್ಮ ಅಂದದ ಚಪ್ಪರಕ್ಕೆ ಕೈಯ ಮುಗಿದೀವಿ

ಮೇಲ್‌ಕಟ್ಟು ಬಿಚ್ಚುವಾಂಗೇ ಏನೇನಾ ಕೊಡುಬೇಕು

ಐದುಮಾನ ಅಕ್ಕಿ ಗೂನಾ ಬಾಳಲ ಹಣ್ಣು ಸೋಬಾನಾ ಸೋsssss

ಐದುಮಾನ ಅಕ್ಕಿ ಐದು ಚಿಪ್ಪಿನ ಬಾಳಲ ಹಣ್ಣಾ

ನಿಮ್ಮ ಅಂದದ ಮೇಲ್‌ಕಟ್ಟ ಬಿಚ್ಚು ನೀ ಸೋಬಾನಾ ಸೋsssss

ಸಣ್ಣಾಗೆ ದುಡಿಯವಾಂಗೇ ಏನೇನಾ ಕೊಡುಬೇಕು

ಐದುಮಾನ ಅಕ್ಕಿ ಐದು ಒಪ್ಪು ಬೆಲ್ಲ ಸೋಬಾನಾ ಸೋssss

ಹನ್ನೆರಡು ಕಂಬದ ಧಾರೆದೆಡೆಗೆ ಬರುವವನು

ನಿಮ್ಮ ಅಂದದ ಚಪ್ಪರಕ್ಕೆ ಕೈಯ ಮುಗಿದೀವಿ ಸೋಬಾನಾ ಸೋssss

**ನೀರೆರೆಯುವಾಗ ಹೇಳುವ ಸೋಬಾನಾ ಪದ**

ಚಪ್ಪರದ ಹಟ್ಟಿಗೆ ಕೆಸರೇನಾ, ಮೊಸರೇನಾ

ಧರೆಗೆ ದೊಡ್ಡವ ನಿಮ್ಮ ಮಗಾ ಸೋಬಾನಾ ಸೋssss

ಧರೆಗೆ ದೊಡ್ಡವಂಗೆ ನಾ ನೀರಾ ಮಿಯ್ಯದು

ಈ ಅಂದದ ಲೋಕ ಮೂರೇ ಸೋಬಾನಾ ಸೋssss

ಸ್ವಾಮಿ ಚೆಲುವುರಾಯಗೆ ಎರೆರಿ ನೀರಾ

ನೀವು ಐದು ಮುತ್ತೈದೆಯರು ಸೇರಿ ಸೋಬಾನಾ ಸೋssss

ನಾವು ನೀರಾ ಮಿಯ್ಯದು ನಮ್ಮ ದೊರೆಗೆ ಎನ್ನಿ

ನೀವು ಐದು ಮುತ್ತೈದೆಯರು ಸೇರಿ ಸೋಬಾನಾ ಸೋssss

ಅಷ್ಟು ಮತ್ತೈದೆಯರು ಕೂರಿ ಕೂರಿ ಎನ್ನಿ

ಹೆಣ್ಣುಮಕ್ಕ ನೀವು ಅಷ್ಟು ಮುತ್ತೈದೆಯರು ಸೇರಿ ಸೋಬಾನಾ ಸೋssss

ಚಪ್ಪರದಡೆ ನೀರಾ ಮಿಯ್ಯದು ರಂಬೆಕೈಯ ತಿರುವು

ತುಂಬು ದೇವಿಗೆ ಬೇಕು ಸೋಬಾನಾ ಸೋssss

ತುಂಬು ದೇವಿಗೆ ಬೆಣುಕಲ್ಲಿ ನಿಂತುಕೊಂಡು

ನಾವು ನೀರಾ ಮಿಯ್ಯದು ಸೋಬಾನಾ ಸೋssss

ನಾವು ನೀರಾ ಮಿಯ್ಯದು ನಮ್ಮ ರಾಣೆಗೆ ಎನ್ನಿ

ನೀವು ಐದು ಮುತ್ತೈದೆಯರು ಸೇರಿ ಸೋಬಾನಾ ಸೋssss

ಅಷ್ಟು ಮುತ್ತೈದೆಯರು ಕೂರಿ ಕೂರಿ ಎನ್ನಿ

ಹೆಣ್ಣು ಮಕ್ಕ ನೀವು ಅಷ್ಟು ಮುತ್ತೈದೆಯರು ಸೇರಿ ಸೋಬಾನಾ ಸೋssss

**ಹರಿಣೆ ತರುವಾಗ ಹೇಳುವ ಗೀತೆ**

ಹರಿಣೆಗೆ ಹೋಗು ಚಲುವೆರು ಐವತ್ತೊಂದುಲನಿಯ ಹೊತ್ತು

ಐವತ್ತೊಂದುಲನಿಯ ಹೊತ್ತು ಬಂಗಾರದ ಸೋಬಾನಾ ಸೋssss

ಐವತ್ತೊಂದುಲನಿಯ ಹೊತ್ತಾ ಬಂಗಾರದ ಅವರು

ಈ ಹರಿಣೆಗೆ ಐವರು ಹೋದಾರು ಸೋಬಾನಾ ಸೋssss

ಚಿಕ್ಕ ಪಂಜುರುದ ಲಾರುಮನೆ

ಚಿಕ್ಕ ಪಂಜುರುದ ಲಾರುಮನೆಯ ಹೆಣ್ಣುಮಕ್ಕ ಸೋಬಾನಾ ಸೋsssss

ಚಿಕ್ಕ ಪಂಜುರುದ ಲಾರುಮನೆಯ ಹೆಣ್ಣುಮಕ್ಕ

ಈ ಹರಿಣೆಗೆ ಐವರು ಹೋದಾರು ಸೋಬಾನಾ ಸೋssss

ದೊಡ್ಡ ಪಂಜುರುದ ಲಾರುಮನೆ

ದೊಡ್ಡ ಪಂಜುರುದ ಲಾರುಮನೆಯ ಹೆಣ್ಣುಮಕ್ಕ ಸೋಬಾನಾ ಸೋsssss

ದೊಡ್ಡ ಪಂಜುರುದ ಲಾರುಮನೆಯ ಹೆಣ್ಣುಮಕ್ಕ

ಈ ಹರಿಣೆಗೆ ಐವರು ಹೋದಾರು ಸೋಬಾನಾ ಸೋssss

ಒಂಬತ್ತು ವರ್ಷದ ತುಂಬು ಗಟ್ಟಿಯಲ್ಲಿ ನಿಂತೂಕೊಂಡು

ಒಂದು ಗುಂಡಿಯ ಮಣ್ಣಾ ಅಗೆಯವನೇ ಸೋಬಾನಾ ಸೋsssss

ಗುಂಡಿಯ ಮಣ್ಣಾ ಅಗೆಯುವ ಕೊಂಬರವಪ್ಪಾಗೆ

ನಮ್ಮ ಹರಿಣೆಗೆ ಗುಂಬ ತೋಡು ಸೋಬಾನಾ ಸೋsssss

ನಾ ಮಾಡಿದ ಹರಿಣೆಯ ನೀವೇನಾ ಜರಿದಿರಿ

ಮೇಲುಕೋಟಿಲ್ಲಿರುವ ಚೆಲುವರಾಯ ಸೋಬಾನಾ ಸೋsssss

ಮೇಲುಕೋಟಿಯಲ್ಲಿರುವ ಚೆಲುವರಾಯರ

ಗುಡಿಯಲ್ಲಿ ಬಣ್ಣಕ್ಕೊಂದು ಅರಿವೆ ಕೊಡುವಾರು ಸೋಬಾನಾ ಸೋsssss

**ಬಾಗಿಲು ತಡೆಯುವಾಗ ಹೇಳುವ ಗೀತೆ**

ಆನೆಯ ನಾ ಕೊಡುವೆ ಆನೆ ಮರಿಯ ನಾ ಕೊಡುವೆ ತಂಗೆಮ್ಮ

ತಡೆದ ಬಾಗಲ ನೀ ಬುಡೋ

ಆನೆ ನಮಗುಂಟು ಆನೆಮರಿಯು ನಮಗುಂಟು ಅಣ್ಣಯ್ಯ

ನಾ ತಡೆದ ಬಾಗಲ ಬೂಡೇ

ಒಂಟೆ ನಾ ಕೊಡುವೆ ಒಂಟೆ ಮರಿಯನಾ ಕೊಡುವೆ ತಂಗೆಮ್ಮ

ತಡೆದೆ ಬಾಗಲ ನೀ ಬೂಡೇ

ಒಂಟೆ ನಮಗುಂಟು ಒಂಟೆ ಒಂಟೆ ಮರಿಯು ನಮಗುಂಟು ಅಣ್ಣಯ್ಯ

ತಡೆದ ಬಾಗಲ ನಾ ಬೂಡೇ

ಕುದುರೆ ನಾ ಕೊಡುವೆ ಕುದುರೆ ಮರಿಯ ನಾ ಕೊಡುವೆ ತಂಗೆಮ್ಮ

ತಡೆದ ಬಾಗಲ ನೀ ಬೂಡೇ

ಕುದುರೆಯು ನಮಗುಂಟು ಕುದುರೆ ಮರಿಯು ನಮಗುಂಟು ಅಣ್ಣಯ್ಯ

ನಾ ತಡೆದ ಬಾಗಲ ಬೂಡೇ

ಮೂವರ ಹರಿವಾಣ ನಾ ಕೊಡುವೆ ಕೊಡವರ ಗಿಂಡಿ ನಾ ಕೊಡುವೆ ತಂಗೆಮ್ಮ

ತಡೆದ ಬಾಗಲ ನೀ ಬೂಡೇ

ಮೂವರ ಹರಿವಾಣ ನಮಗುಂಟು ಕೊಡವರ ಗಿಂಡಿ ನಮಗುಂಟು ಅಣ್ಣಯ್ಯ

ತಡೆದ ಬಾಗಲ ನೀ ಬೂಡೇ

ಮಾಳಿಗೆ ಮನೆಯ ನಾ ಕೊಡುವೆ ಜೋಳಿಗೆ ತುಂಬ ಅನ್ನ ನಾ ಕೊಡುವೆ

ತಡೆದ ಬಾಗಲ ನೀ ಬೂಡೇ

ಮಾಳಿಗೆ ಮನೆಯು ನಮಗುಂಟು ಜೋಳಿಗೆ ತುಂಬ ಅನ್ನವು ನಮಗುಂಟು ಅಣ್ಣಯ್ಯ

ನಾ ತಡೆದ ಬಾಗಲ ಬೂಡೇ

ಕೊರಳಿಗೆ ಕೊಡುವೆ ನಾ ಮಣಿ ಸರ ತಂಗೆಮ್ಮ

ತಡೆದ ಬಾಗಲ ನೀ ಬೂಡೇ

ಕೊರಳಾಗ ಮಣಿಸರವು ನಮಗುಂಟು ಅಣ್ಣಯ್ಯ

ತಡೆದ ಬಾಗಲ ನೀ ಬೂಡೇ

ತೋಳು ಚಪ್ಪರದಲಾಣೆ ಬೇಡರ ಕಣ್ಣಪ್ಪನ ಪಾದದಲಾಣೆ ತಂಗೆಮ್ಮ

ಹಡೆದ ಮಗಳಾ ನಿನಗೆ ಕೊಡುವೆ ನೀ

ತಡೆದ ಬಾಗಲ ನೀ ಬೂಡೇ

ಎಡಗೆ ದೊರೆಗಳ ಮುಂದಿಟ್ಟು ನಾ ಬಾಸೆ ಕೊಡುವೆ ಬಲಗೈಲಿ

ಹಡೆದ ಮಗಳ ನಿನಗೆ ಕೊಡುವೆ ತಂಗೆಮ್ಮ ನೀ

ತಡೆದ ಬಾಗಲ ಬೂಡೇ

ಒಪ್ಪಿಗೆಯ ನಂತರ ನವವಧು-ವರರನ್ನು ಮನೆ ಒಳಗೆ ಬಿಡುತ್ತಾರೆ.

## ಕೋಲಾಟದ ಪದ

ಕೋಲು ಪಿಡಿಯವರ ಮುಂದೆ ಯಾರಾ ಯಾರಾ ನೆನೆಯಲಿ

ಈ ಒರ್ವದಾಗೆ ಒಂದು ಹೊಂಬಾಳೆ ಕೋಲುದಾಗೆ ಕೋಲೆ

ಒರ್ವದಾಗೆ ಒಂದು ಹೊಂಬಾಳೆ, ಈಗ ಹೊಲದಾಗೆ ಆದುರೆ

ಈ ಪಿಡಿಯದು ಕೋಲು ಬಲುಗೈಯಲ್ಲಿ ಕೋಲೆ

ಈ ಪಿಡಿಯದು ಕೋಲು ಈಗ ಬಲುಗೈಯಲ್ಲಿ ದೇವೆಶಪ್ಪ

ಈ ಮಾತಾ ಇಟ್ಟ ಕೋಲೂ ಕೂಡುವರು ಕೋಲೆ.

ಅರೆಯುದೊಂದು ಅಸೆಕಲ್ಲು ಮುರಿಯದಲ್ಲಾ ಕಾಳಿಂಗ

ಈ ಧರೆಯ ಮೇಲೆಲ್ಲ ಸ್ಯಾಣಿಕಲ್ಲು ಕೋಲೆ,

ಧರೆಯ ಮೇಲೆಲ್ಲ ಸ್ಯಾಣಿಕಲ್ಲು ಆದುರೆ

ನಿಮ್ಮ ಮನೆಯ ಮೇಲೆಲ್ಲ ಕಿರುಗಂಧ ಕೋಲೆ

ಹದ್ದು ಮದ್ದಾನಾ ನುಂಗಿ ಗೋಡೆಯೆಲ್ಲಾ ಗುಂಚಿಯ ನುಂಗಿ

ಈ ಮೂಡಲ ಪಕ್ಷಿ ನುಣುನುಂಗಿ ಕೋಲೆ

ಮೂಡಲ ಪಕ್ಷಿ ಈಗ ನುಣು ನುಂಗಿಲಾದುರೆ

ಈ ಮೂಡಲ ಬೆಟ್ಟ ಮೊಲ ನುಂಗಿ ಕೋಲೆ

ಸುತ್ತೇಳು ಸಮುದ್ರ ನಟ್ಟು ನಡುವೆ ನೆರುಮರ

ಅದು ಫಲವಾದೂರೆ ಹಣ್ಣ ಮೇಲ್ಲೂವರಿಲ್ಲ ಕೋಲೆ

ಫಲುವಾದ ಆ ಹಣ್ಣಾ ಮೇಲ್ಲೂವರಿಲ್ಲರಾದರೆ

ಈ ಫಲುವಿದ್ದರೇನು ಗುಣುವಿಲ್ಲ ಕೋಲೆ

ಊರು ಮುಂದೆ ಉಮ್ಮತ, ಕೇರಿ ಮುಂದೆ ಕೆಂಚಿಡುಗಾ

ಈ ಅರಮನೆ ಬಳಸು ಅರಗಿಣಿ ಕೋಲೆ

ಅರಮನೆ ಬಳಸು ಈಗ ಅರಗಿಣಿ ಆದುರೆ

ಈ ನಮ್ಮ ಮನೆ ಬಿಳಸು ಹೋರಿಮಾಲ ಕೋಲೆ

ಶಿಟ್ಟುವತಲೂ ನಾರಿ ಹಳ್ಳ ಹುದುಗಲು ನಾರಿ

ಈ ದಂಡು ದೂರಕ್ಕೆ ನನ್ನ ಕೂಡುಬೇಡ ಕೋಲೆ

ದಂಡು ದೂರಕೆ ನನ್ನ ಕೂಡುಬೇಡಾಲಪ್ಪಯ್ಯ

ನಾನು ದೂರವಾದೂರೆ ನೀರಾ ತರುಲಾರೆ, ಕೋಲೆ

ಹಗ್ಗ ಹರಿಘುದು ಕಾಣೆ ಮುದ್ದೆನಾ ಮುರಿಯುದು ಕಾಣೆ

ಈ ಮುದ್ದೆಯೂ ಕಂಡೆ ಮಾಡು ಕೈಯಲ್ಲಿ ಕೋಲೆ

ಯಾರು ಬಿದ್ದರೂ ಎರೆಚಂದ. ಯಾರು ಬಿದ್ದರೂ ಸುಳು ಚಂದ

ಈ ಅಮ್ಮ ಅಕ್ಕಲಿರೂ ಮನೆ ಚಂದ ಕೋಲೆ

ಯಾರು ಬಿದ್ದರೂ ಎರೆ ಚಂದ, ಯಾರು ಬಿದ್ದರೂ ಸುಳುಚಂದ

ಈ ಕಿರು ಮಕ್ಕಲಾಡು ಮನೆ ಚಂದ ಕೋಲೆ

೨ ಸುಂದರಿ ಎಲ್ಲವೂ ಜಗದೂಳೂ ನಾನೇ

ಸುಂದರಿ ಎಲ್ಲವೂ ಜಗದೂಳೂ ನಾನೇ

ಕೋಮಲ ಕಾಯಳೂ ಕೆಮ ಸುಂದರನಾ

ಕೋಮಲ ಕಾಯಳೂ ಕೆಮ ಸುಂದರನಾ

ಸುಂದರಿ ಎಲ್ಲವೂ ಜಗದೂಳೂ ನಾನೇ

ಚಿಕ್ಕವಳ ಆಸಿಗೆ ತಕ್ಕ ಸುಂದರ ನೋ

ಚಿಕ್ಕವಳ ಆಸಿಗೆ ತಕ್ಕ ಸುಂದರ ನೋ

ಅಕ್ಕರೆಯು ಸಿಕ್ಕಿತ್ತೆನಗೆ ಭಯವಿಲ್ಲ ಮನಕೆ

ಅಕ್ಕರೆಯು ಸಿಕ್ಕಿತ್ತೆನಗೆ ಭಯವಿಲ್ಲ ಮನಕೆ

ಸುಂದರಿ ಎಲ್ಲವೂ ಜಗದೂಳೂ ನಾನೇ

ಸುಂದರಿ ಎಲ್ಲವೂ ಜಗದೂಳೂ ನಾನೇ

೩ ಕರ್ಚಿಪೂಲು ಮೇಲೆ ಮೂರುಕು ಬೆಲ್ಲ

ನಾಟಕ ದಾಸಣ್ಣ ನಾಟಕ ದಾಸಣ್ಣ

ಮೂರುಕು ಬೆಲ್ಲಕ್ಕೆ ಬಂತು, ಮೂಲೆ ಸುಂಡಣ್ಣ

ನಾಟಕ ದಾಸಣ್ಣ ನಾಟಕ ದಾಸಣ್ಣ

ಮೂಲೆ ಸುಂಡಣ್ಣಕ್ಕೆ ಬಂತು

ಕೆಂಚರ ಗಣ್ಣ ಕೊಂತಿ,

ನಾಟಕ ದಾಸಣ್ಣ ನಾಟಕ ದಾಸಣ್ಣ

ಕೆಂಚರ ಗಣ್ಣ ಕೊಂತಿಗೆ ಬಂತು

ಡೊಂಕು ಬಾಲದ ಒಂದು ನಾಯಿ

ನಾಟಕ ದಾಸಣ್ಣ ನಾಟಕ ದಾಸಣ್ಣ

ಡೊಂಕು ಬಾಲದ ನಾಯಿಗೆ ಬಂತು

ಗೂಟ್ಟದಲ್ಲಿರು ದೊಣ್ಣೆ .

ನಾಟಕ ದಾಸಣ್ಣ ನಾಟಕ ದಾಸಣ್ಣ

ಗೂಟದಲ್ಲಿರು ದೊಣ್ಣೆಗೆ ಬಂತು

ಒಲೆಲಿರೊ ಕೆಂಡ

ನಾಟಕ ದಾಸಣ್ಣ ನಾಟಕ ದಾಸಣ್ಣ

ಒಲಿಲಿರೂ ಕೆಂಡಕೆ ಬಂತು

ತುಂಬದಾರವಿ ನೀರು

ನಾಟಕ ದಾಸಣ್ಣ ನಾಟಕ ದಾಸಣ್ಣ

ತುಂಬದಾರವಿ ನೀರಿಗೆ ಬಂತು

ಬರಗೂಲಿದೊಂದು ಎಮ್ಮೆ

ನಾಟಕ ದಾಸಣ್ಣ ನಾಟಕ ದಾಸಣ್ಣ

ಬರಗೂಲಿದೊಂದು ಎಮ್ಮೆಗೆ ಬಂತು

ಹಿಡಿ ಹಿಡಿ ಪಟ್ಟು ಕೆಚ್ಚಲು

ನಾಟಕ ದಾಸಣ್ಣ ನಾಟಕ ದಾಸಣ್ಣ

ಹಿಡಿ ಹಿಡಿ ಪಟ್ಟು ಕೆಚ್ಚಲಿಗೆ ಬಂತು

ಬೆಳ್ಳಿ ಕಟ್ಟಿನ ಅಂಡೆ

ನಾಟಕ ದಾಸಣ್ಣ ನಾಟಕ ದಾಸಣ್ಣ

ಬೆಳ್ಳಿ ಕಟ್ಟಿನ ಅಂಡೆಗೆ ಬಂತು

ಅಚ್ಚೇರು ಪಾವು ಹಾಲು

ನಾಟಕ ದಾಸಣ್ಣ ನಾಟಕ ದಾಸಣ್ಣ

ಅಚ್ಚೇರು ಪಾವು ಹಾಲಿಗೆ ಬಂತು

ಗುಂಡುಕಲ್ಲಿನ ಗಾತ್ರದ ಬೆಣ್ಣೆ

ನಾಟಕ ದಾಸಣ್ಣ ನಾಟಕ ದಾಸಣ್ಣ

ಗುಂಡುಕಲ್ಲಿನ ಗಾತ್ರದ ಬೆಣ್ಣೆಗೆ ಬಂತು

ಗಿಲಿಗಿಲಿ ಎಂಬ ತುಪ್ಪ

ನಾಟಕ ದಾಸಣ್ಣ ನಾಟಕ ದಾಸಣ್ಣ

ಗಿಲಿಗಿಲಿ ಎಂಬ ತುಪ್ಪಕ್ಕೆ ಬಂತು

ಪಿಲಿ ಪಿಲಿ ಎಂಬ ಪಾವಲಿ

ನಾಟಕ ದಾಸಣ್ಣ ನಾಟಕ ದಾಸಣ್ಣ

ಪಿಲಿ ಪಿಲಿ ಎಂಬ ಪಾವಲಿಗೆ ಬಂತು

ಭೀಮನ ಕೊಲ್ಲಿ ಜಾತ್ರೂರೆ

ನಾಟಕ ದಾಸಣ್ಣ ನಾಟಕ ದಾಸಣ್ಣ

ಭೀಮನ ಕೊಲ್ಲಿ ಚಾತ್ತೂರಗೆ ಬಂತು

ಬೆಟ್ಟಮುಖದೊಂದು ಹೆಣ್ಣು

ನಾಟಕ ದಾಸಣ್ಣ ನಾಟಕ ದಾಸಣ್ಣ

ಬೆಟ್ಟ ಮುಖದೊಂದು ಹೆಣ್ಣಿಗೆ ಬಂತು

ಬೆಂಗಳೂರಲ್ಲಿರು ಹೈದಾ

ನಾಟಕ ದಾಸಣ್ಣ ನಾಟಕ ದಾಸಣ್ಣ

ಬೆಂಗಳೂರಲ್ಲಿರು ಹೈದ ಬಂದು

ಬೆರಳ್ ಮಾಡಕ್ಕೊಂಡು ಹೋಯಿತು.

ನಾಟಕ ದಾಸಣ್ಣ ನಾಟಕ ದಾಸಣ್ಣ

೪ ತಟ್ಟ ತುದಿಯ ಮೇಲೊಂದು

ತಟ್ಟ ತುದಿಯ ಮೇಲೊಂದು

ಬಟ್ಟ ಮಾವಿನ ಹನ್ನೇರಡು

ಗೊನೆಯ ಬಾಳೆನ ಹನ್ನೆರಡು

ಇನಿಯ ಮಾವಿನ ಹನ್ನೆರಡೂ......

ಅಂತ ನಿನ್ನ ಮೆಚ್ಚಿನ ಮಾವಿನ ಹಣ್ಣಿಗೆ ಬೆಲೆ ಹೇಳುರಾಣಿ

ಬೆಲೆ ಕೇಳಾಕೆ ನೀನಲ್ಲ ಬೆಲೆ ಹೇಳಾಕೆ ನಾನಾಲ್ಲ

ಬೆಲೆ ಹೇಳು ಪುರುಷರು ಕೊಚ್ಚಿಗೆ ಹೋಗವರೆ,

ಕೊಡಗಿಗೆ ಹೋಗವರೆ, ದಂಡಿಗೆ ಹೋಗವರೆ

ಧಾಳಿಗೆ ಹೋಗವರೆ

ಅಂತ ಬೆಲೆ ಇಲ್ಲದ ಮೇಲೆ ನೆಲೆವಿಲ್ಲ ರಾಣಿ

ಕೊಡಗಿಗೋಗರನ ನೋಡುಬೇಕು, ಕೊಚ್ಚಿಗೋಗರನ ನೋಡುಬೇಕು.

ದಂಡಿಗೋಗರನ ನೋಡುಬೇಕು. ದಾಳಿ ಗೋಗರನ ನೋಡುಬೇಕು.

ಅಂತ ವರುಷ ತುಂಬೂವರೆಗೂ ನೋಡುಬೇಕು.

ರಾಣಿ ಕೊಟ್ಟುಂಟು, ಕವಲುಂಟು

ಕಾಯು ಗೊಲ್ಲರುಂಟು, ಬೀಗೂ ಮರಿಗಳುಂಟು

ಚೂರುಪಾರುಗಳುಂಟು

ಹೈದ ನೀ ಎಸೆದ ಅಂಬು ಬರಿಗಾಣೆ ಬರಲಿ

ಹೆಣ್ಣಿನೊಳಗೆ ಗುಣವಿರಲಿ ಹೆಣ್ಣಿನೊಳಗೆ ಗುಣವಿರಲಿ

ಮಣ್ಣಿನೊಳಗೆ ಹದವಿರಲಿ ಬಟ್ಟ ತಿಂಗಳ ಬೆಣುಕಿರಲಿ

ಹೆಣ್ಣೆ ನಿನ್ನ ಎಳೆವ ಯಜಮಾನ ತಣ್ಣಗಿರಲೂ....

೫ ದಾಸಯ್ಯ ಬಂದ ಧರ್ಮಕೂಡಿ ಧರ್ಮಿಷ್ಟರೆಲ್ಲ

ಕಣ್ಣಿನಿಂದ ನೋಡಿ ಹೋಗಬೇಡಿ ಹೋಗಬೇಡಿರೋ

ಹೋಟೆಲೆಲ್ಲೂ ಊಟ ಪೇಟೆಲೂ ಊಟ ಮೈಸೂರೂರಿಗೆಲ್ಲಾ

ಅಕ್ಕಾ ದಾಸಯ್ಯ ಬಂದ ಧರ್ಮಕೂಡಿ ಧರ್ಮಿಷ್ಟರೆಲ್ಲ

ಕಣ್ಣಿನಿಂದ ನೋಡಿ ಹೋಗಬೇಡಿ ಹೋಗಬೇಡಿರೋ

ಕಾಫಿನೀರು ಕಳ್ಳೆಪುರಿ ಜೀಯಾರದೂರಿಗೆಲ್ಲಾ

ಬಾಡಿನ ಉದೂಕ ಕರಿರಾಗಿ ಹಿಟ್ಟು ಗಂಡತ್ತೂರುರಿಗೆಲ್ಲಾ

ಅಕ್ಕಾ ದಾಸಯ್ಯ ಬಂದ ಧರ್ಮಕೂಡಿ ಧರ್ಮಿಷ್ಟರೆಲ್ಲ

ಕಣ್ಣಿನಿಂದ ನೋಡಿ ಹೋಗಬೇಡಿ ಹೋಗಬೇಡಿರೋ

ಬಾಯಿಲೊಂದು ಟೀ ಕೈಲೊಂದು ಕಡಿ ಮಾಲೆಯಾಳುದೂರಿಗೆಲ್ಲಾ

ಅಕ್ಕಾ ದಾಸಯ್ಯ ಬಂದ ಧರ್ಮಕೂಡಿ ಧರ್ಮಿಷ್ಟರೆಲ್ಲ

ಕಣ್ಣಿನಿಂದ ನೋಡಿ ಹೋಗಬೇಡಿ ಹೋಗಬೇಡಿರೋ

ಬೆನ್ನತಿಕನ ಬೆಳೆ ಉದಕ ಎಂಟ ಹಳ್ಳಿರೊಗೆಲ್ಲಾ

ಅಕ್ಕಾ ದಾಸಯ್ಯ ಬಂದ ಧರ್ಮಕೂಡಿ ಧರ್ಮಿಷ್ಟರೆಲ್ಲ

ಕಣ್ಣಿನಿಂದ ನೋಡಿ ಹೋಗಬೇಡಿ ಹೋಗಬೇಡಿರೋ

೬ ನಾವು ಬದುಕೂದು ಬಂಡಾಟ, ನಾಟಕದೂರು ಬಂದರು ಕಣ್ಣಾಣ್ಣ

ನಾವು ಬದುಕೂದು ಬಂಡಾಟ, ನಾಟಕದೂರು ಬಂದರು ಕಣ್ಣಾಣ್ಣ

ಹಾಲು ತುಪ್ಪದ ಊಟ, ಹಾಲು ತುಪ್ಪದ ಊಟ, ಮೈಸೂರು ನೋಟ

ನಾವು ಬದುಕೂದು ಬಂಡಾಟ, ನಾವು ಬದುಕೂದು ಬಂಡಾಟ

ನಾಟಕದೂರು ಬಂದರು ಕಣ್ಣಾಣ್ಣ

ಮಜ್ಜಿಗೆ ಮೊಸರುನೂಟ, ಮಜ್ಜಿಗೆ ಮೊಸರುನೂಟ,

ಬೆಂಗಳೂರು ನೋಟ ನಾವು ಬದುಕೂದು ಬಂಡಾಟ, ನಾವು ಬದುಕೂದು ಬಂಡಾಟ

ನಾಟಕದೂರು ಬಂದರು ಕಣ್ಣಾಣ್ಣ

ಹುರುಳಿ ಹೆಸರು ಊಟ, ಹುರಳಿ ಹೆಸರು ಊಟ,

ಹುರುಳಿಪುರ ನೋಟ ನಾವು ಬದುಕೂದು ಬಂಡಾಟ

ನಾವು ಬದುಕೂದು ಬಂಡಾಟ

ನಾಟಕದೂರು ಬಂದರು ಕಣ್ಣಾಣ್ಣ

ಬೆಳೆ ಹೆಸರು ಊಟ, ಬೆಳೆ ಹೆಸರು ಊಟ

ಎಂಟಿಹಳ್ಳಿ ನೋಟ ನಾವು ಬದುಕೂದು ಬಂಡಾಟ

ನಾವು ಬದುಕೂದು ಬಂಡಾಟ, ನಾಟಕದೂರು ಬಂದರು ಕಣ್ಣಾಣ್ಣ

೭ ಸೀರೆ ನೊರಿಯು ಅಣ್ಣಯ್ಯ

ಮೇಲೆ ಕೆನೆ ಸುಣ್ಣ

ಸಿಳ್ಳವರೂ ಮೇಲೆ ಕೆನೆ ಸುಣ್ಣ ಅಣ್ಣಯ್ಯ

ನೀ ಎಲ್ಲಿ ಉಂಡೆ ಊಟ ಹಗಲೂಟ

ಊಟವು ನೂರೆಲ್ಲೆ ನೋಟ ನಂಜನಗೂಡು

ನಾ ನಿದ್ರೆ ಮಾಡೂದೂ ಮಗ್ಗೆಲಿ

ನಾ ನಿದ್ರೆ ಮಾಡೂದು ಮಗ್ಗೆಲಿ ಮೈಸೂರು

ನಾ ದಿವಸ ಬೇಡದೂ ಎಂಟಿಹಳ್ಳಿ

೮ ಕಲ್ಲುಸಕ್ಕರೆ ಪುರದಲ್ಲಿ ನನ್ನ ಅಪ್ಪಯ್ಯನ ಮನೆಕಲ್ಲು

ಪಚ್ಚೆಕಲ್ಲು ಅಪ್ಪಯ್ಯನ ಮನೆಕಲ್ಲು ಪಚ್ಚೆಕಲ್ಲು ಅಪ್ಪಯ್ಯ

ನಾ ಬೀಸೂಕಲ್ಲು ತೆರಾ ಹೊಯ್ಯುದು

ನಾ ಬೀಸೂಕಲ್ಲು ತೆರಾ ಹೊಯ್ಯುದು ಹೈದಾಂಗೆ

ಅಕ್ಕಿ ಬೀಸವನೆ, ತುಂಬವನೆ

ನೋಡು ತವರೂರಾ ನನ್ನ ತವರೂರಾ

೯ ಮುದುಕುವ ದಾಸಯ್ಯ ಮೂಡಲಗೆ ಮುಖನಾಕಿ ತಂದಾನ ತಾನಾನೋ

ಮುದುಕುವ ದಾಸಯ್ಯ ಮೂಡಲಗೆ ಮುಖನಾಕಿ ಎತ್ತೆತ್ತಲೂ ಜ್ಞಾನಲ್ಲವನು

ಅವನು ಯಾವ ದಿಕ್ಕದ ಜ್ಞಾನ ಮೇಲೂವ ಲೋಕದ ದೇವೇಂದ್ರ ಮಗಳ

ಮೇಲೆ ಜ್ಞಾನ ತಂದಾನ ತಾನಾನೋ

ದೇವೆಂದ್ರ ಮಗಳ ಮೇಲೆ ಜ್ಞಾನವೇ ಮಾಡಿ, ಮಲ್ಲುಗು ದೇವಿಯೊಂದಿಗೆ, ಏನೊಂತ

ಹೇಳುತ್ತಾನೆ ತಂದಾನ ತಾನಾನೋ

ಕೇಳು, ಕೇಳು ಮಲ್ಲುಗುದೇವಿ ಶಂಖ, ಜಾಗೂಟೆಯ ಕೊಡು

ಕರಿಯ ಕಂಬಳನೇ ಕೊಡು, ಕೈಯಲ್ಲಿ ಪಿಡಿಯುವ ದೊಣ್ಣೆಯ

ಎತ್ತುವ ಕೊಡು ಮಲ್ಲಿ ತಂದಾನ ತಾನಾನೋ

ಕೇಳಿಗಾ ದಾಸಯ್ಯ ನೀನೀಗಾ ಹೋಗುವಾಗ ತಾರಾಡಿ ತಪ್ಪ ನಿಲ್ಲಿಸಿ

ಬಿದ್ದು ಹೋಗುವಾ ಬೀಡುತ್ತೀರಿ ಹೋಗುವ ಬೇಡಿ ಎನ್ನುತ್ತವಳೆ ತಂದಾನ ತಾನಾನೋ

ಕೇಳಿಗಾ ಮಲ್ಲಿಗುದೇವಿ ಮೆಲ್ಲ ಮೆತ್ತಿಗೆ ನಾನು

ಹೋಗಿದ್ದು ಬೇರುತ್ತೀನಿ ಎತ್ತೀವಿ ಕೊಡುವ ಮಲ್ಲಿ ತಂದಾನ ತಾನಾನೋ

ಮುದುಕುವ ದಾಸಯ್ಯನ್ನ ನಿಜವ ತಡೆಯುಲಾರದೆ

ಮಲ್ಲುಗುದೇವಿ ತನ್ನ ಕರಿಯ ಕಂಬಳೇನಾ ಕೊಟ್ಟ

ಶಂಖ, ಜಾಗೂಟೆಯ ಕೊಟ್ಟ, ಕೈಯಲ್ಲಿ ಹಿಡಿಯ

ದೊಣ್ಣೆಯ ಎತ್ತಿಗ ಕೊಟ್ಟವಳೇ ತಂದಾನ ತಾನಾನೋ

ಮಲ್ಲುಗುದೇವಿ ಕಣ್ಣು ಮರಿಯಾಗಗಿಂಟ್ಟ

ತಾರಾಡಿ ತಪ್ಪುಸೂಕೊಂಡು ಹೊಯ್ಯುತ್ತವನೇ ದಾಸಯ್ಯ ತಂದಾನ ತಾನಾನೋ

ಕಣ್ಣು ಮರಿಯಾದ ಮೇಲೆ ಶಂಖು, ಜಾಗೂಟೆಯ ತೆಗೆದ

ಕಟ್ಟೆಯ ಕಂಡಿಗಿ ತೂಯ್ಯದು ಹೊಡೆದುಬಿಟ್ಟ ದಾಸಯ್ಯ ತಂದಾನ ತಾನಾನೋ

ತೂಯ್ಯದು ಹೊಡೆದು ಬಿಟ್ಟಲೂ ಅವನು ಅಂಗಡಿ ಸಾಲಿಗೆ ಹೋಗಿ

ಕೋಟು, ಕವಚನಾ ನಿಕ್ಕಿ ಕೋರೆ ರುಮಾಲು ಸುತ್ತಿ

ಕೋಟಕ್ಕೆಮ್ಮಿ, ಜೋತ್ರವ ಆರು ಕಚ್ಚಾವ ಬಿಗೂದಾನೂ ದಾಸಯ್ಯ ತಂದಾನ ತಾನಾನೋ

ಕೋಟಕ್ಕೆಮ್ಮಿ, ಜೋತ್ರವ, ಆರು ಕಚ್ಚಾವ ಬಿಗಿದು

ಕಸ್ತೂರಿ ಬಟ್ಟಲ ಹಣೆಗಿಕ್ಕಿ ಹುಡುಗನಾ ಕಾಣಿತವನೇ ದಾಸಯ್ಯ ತಂದಾನ ತಾನಾನೋ

ಹುಡುಗನಾ ಕಾಣಿತೀಯ ಆಗುವ ದಾಸಯ್ಯ ಅಲ್ಲಿಂದ ದಾಟುಕೊಂಡು

ಹೋಗುವ ದಾಸಯ್ಯ ಮೇಲು ಲೋಕದಲ್ಲಿರುವ ಹೆಣ್ಣುಮಕ್ಕ ಕಂಡ ತಂದಾನ ತಾನಾನೋ

ಅಕ್ಕವ, ತಂಗೆರು, ಲೆಕ್ಕಕ್ಕೆ ಒಬ್ಬ ಕುಸುಮಲೆ

ಆರು ಮಂದಿರು ಗುಂಡಲ ಕೆರೆಗೆ ಬೆರುತ್ತಾವರೆ ತಂದಾನ ತಾನಾನೋ

ಮದುಕುವ ದಾಸಯ್ಯ ನೋಡು ಬುಟ್ಟಲು ಅವನು

ಅಲ್ಲಾಣೆ, ಇಲ್ಲಾಣೆ, ಕಲ್ಲಾಣೆ, ಕೊಳುಕಾಣೆ, ಹೋಗಿ

ದೂಡ್ನ ಸಂಪಿಗೆ ಮರುದಡೆ ಹೋಗವನೆ ದಾಸಯ್ಯ ತಂದಾನ ತಾನಾನೋ

ದೂಡ್ನುವ ಸಂಪಿಗೆ ಮರುದಡೆ ಹೋಗಿ, ಕಕ್ಕೆಯ ಮರುದಡಿ ಹೋಗಿ

ಕೆರೆಯ ಏರಿ ಮೇಲೆ ಅವತ್ತಿಂಗೆ ಕೂಂತವನೆ ತಂದಾನ, ತಾನಾನೋ

ಇವರು ಆರು ಮಂದಿರೂ ಹೋಗಿ ಕೆರೆಯಾನೆ ಇಳಿದಾಗ ಸೀರಿಯಾನೇ

ಬಿಚ್ಚುತ್ತವರೆ, ಕುಸುಮಲೆ ಹೇಳುತ್ತವಳೆ, ಏನಂತ, ತಂದಾನ ತಾನಾನೋ

ಕೇಳೆ ಕೇಳೆ, ಯಾಕ್ಕಂದಿರಾ ನೀವು ಸೀರೆನಾ ಬಿಚ್ಚುಬೇಡಿ

ನೀರನ್ನೇ ಮೀಯೂಬೇಡಿ, ನರಮನುಷ್ಯನ ಸೊಗಡು ಬಾಳಲೆ ಬೆರುತ್ತದೆ. ತಂದಾನ ತಾನಾನೋ

ಕೇಳೆ, ಕೇಳೋ ಕುಸುಮಲೆ ಕಾ ಎಂಬ ಕಾಗೆ ಮೂದುಲಿಲ್ಲ.

ಗುಯ್ಯ ಎಂಬ ಪಕ್ಷಿಲಿಲ್ಲ, ಇತ್ತೊಂಬೂಲೊ ಅಡವಿಗೆ ನರಮನುಷ್ಯ

ಬರುವುದು ನಿಜವುಂಟು. ತಂದಾನ ತಾನಾನೋ

ಇತ್ತಾನೆ ಹೇಳುಕೊಂಡು ಕುಸುಮಲೆ ಕುಂತುಕೊಂಡ

ಇವರು ಐದುವ ಮಂದುವೆ ಸ್ನಾನ ಮಡಿಯಾನೆ ಮಾಡಿಕೊಂಡು ತಂದಾನ ತಾನಾನೋ

ಸೀರಿಯಾನೆ ಹುಟ್ಟುಕೊಂಡು ತಾವರೇಗೆಣಸಿಗೆ ಹೊಯ್ಯುತ್ತಾವರೆ

ಮದುಕುವ ದಾಸಯ್ಯ ಹರಕೆ ನಾ ಮಾಡುತವನೇ ತಂದಾನ ತಾನಾನೋ

ಅವರು ಐದು ಮಂದಿರುಗೂ ಸಿಕ್ಕೂವಾದುರೆ ಚಿಕ್ಕುವ

ಕುಸುಮಲೆ ಸಿಕ್ಕಲೇ ಬೇಡಂತ ಹರುಕೆ ಮಾಡುವತವನೆ ದಾಸಯ್ಯ ತಂದಾನ ತಾನಾನೋ

ಆಗಾ ಅವರು ಆರು ಮಂದಿರುಗುನೆ ಗೆಣಸನೆ ಸಿಕ್ಕಿಹೋಯಿತು

ಚಿಕ್ಕುವ ಕುಸುಮಾಲೆಗೆ ಗೆಣಸನೆ ಸಿಕ್ಕು ನಿಲ್ಲ, ತಂದಾನ ತಾನಾನೋ

ಕೇಳಿಗಾ ಅಕ್ಕಂದಿರಾ ನೀವು ಒಂದು ಗಳಿಗೆ ನಿಂತುಕೊಳ್ಳಿ

ನಾನುವೇ ನಿಮ್ಮ ಜೊತೆಯಲ್ಲಿ ಬೆರುತ್ತಿವಿನಿ ಎಂದು ಹೇಳತ್ತವಳಲ್ಲ ತಂದಾನ ತಾನಾನೋ

ಬಂದೂರೇ ಬಾ ತಂಗೆ ಬರುದುರೆ ಇರುನೀನು

ನಮ್ಮ ಬಿಡುವ ವತ್ತನೆ ನೆಲೆ ಆಗೋಯಿತ್ತು ನಾವು ಹೋಯಿತ್ತೆನೋ ತಂದಾನ ತಾನಾನೋ

ಇತ್ತಾನೆ ಹೇಳುಕೊಂಡು ಐದು ಮಂದಿರೂ ಹೋಗೆಬುಟ್ಟರು

ಅವರು ಹೋದುವ ಮೇಲೆ ಈಗ ಚಿಕ್ಕು ಕುಸುಮಲೆಗೆ

ಎತ್ತು ಬಾರದ ಗೆಣಸು ಸಿಕ್ಕಿ ಹೋಯಿತು ತಂದಾನ ತಾನಾನೋ

ಎತ್ತಿಗಾ ಹೂರುಕೆ ಆಗುದಿಲ್ಲ ಕೆಳಗನೆ ಮಡಗುಬುಟ್ಟು

ತಿರುಗೀಗಾ ನೋಡುತ್ತವಳೆ ಯಾರಾರ ಬರುತ್ತವರಂತ ತಂದಾನ ತಾನಾನೋ

